


( ಸಚಿತ್ರ ಮಾಸ ಪುಸ್ತಕಾವಳಿ )

# ೧೮

ಸುಬೋಧ ಪ್ರಕಟನಾಲಯ,
ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

---

ಹೆಸರು



ಸಖೂಬಾಯಿ

ಶ್ರೀರಾಮಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಸರ್ವೇಶ್ವರನು ಅನಂತ ಲೀಲಾವಿನೋದಿಯು. ಜಗತ್ಸಂಸಾರವೇ ಆತನ ಲೀಲಾಕ್ಷೇತ್ರವು ಈ ನಾಟಕರಂಗದಲ್ಲಿ ಆತನು ಸೂತ್ರಧಾರಿಯಾಗಿ, ಭಿನ್ನ ಭಿನ್ನ ಕರ್ಮಪಾಶಗಳಿಂದ ಬದ್ಧರಾದ ಭಿನ್ನ ಭಿನ್ನ ಜೀವರನ್ನು ಪಾತ್ರಗಳನ್ನಾಗಿ ಮಾಡಿಕೊಂಡು, ಆತನು ತನ್ನ ಈ ಅಗಾಧ ಲೀಲೆಯನ್ನು ಸಾಗಿಸುತ್ತಿರುವನು. ವಿವಿಧ ಜೀವರಿಗೆ ವಿವಿಧ ದೇಹಗಳನ್ನಿತ್ತು, ಅವರನ್ನು ಋಣಾನುಬಂಧವೆಂಬ ಪಾಶದಿಂದ ಏಕತ್ರ ಕಲೆಯಿಸಿ,- ಅಥವ ಅಗಲಿಸಿ, ಹಾಗೆ ಸೇರ್ಲಿಕೆ ಅಥವ ಅಗಲಿಕೆಯ ಕಾರಣದಿಂದ ಅಜ್ಞಾನಿಗಳಾದ ಆ ಜೀವರು ಸುಖ ಅಥವ ದುಃಖಾನುಭವ ಮಾಡುತ್ತಿರಲು ಲೀಲಾವಿನೋದಿಯಾದ ತಾನು ಕೇವಲ ಸಾಕ್ಷಿರೂಪನಾಗಿದ್ದು ಆನಂದಾನುಭವ ಮಾಡುತ್ತಿರುವನು. ಅವರು ಜಯ ಅಪಜಯ, ಲಾಭನಷ್ಟ, ಐಶ್ವರ್ಯ ದಾರಿದ್ರ್ಯ ಮುಂತಾದ ದ್ವಂದ್ವಗಳ ಫಲವಾಗಿ ಪಡುವ ಸುಖ ಅಥವ ದುಃಖಗಳಲ್ಲಿ ಲೋಕೇಶ್ವರನು ಎಷ್ಟು ಮಾತ್ರವೂ ಭಾಗವಹಿಸದೆ ತಟಸ್ಥನಾಗಿದ್ದು ಬಿಡುವನು. ಸತ್ಕರ್ಮ ಮಾಡಿದವನು ಸತ್ಫಲವನ್ನು ಹೊಂದುವುದಕ್ಕೂ ದುಷ್ಕರ್ಮ ಮಾಡಿದವನು ದುಷ್ಫಲವನ್ನು ಹೊಂದುವುದಕ್ಕೂ ಸಿದ್ಧನಾಗಿರಬೇಕಾದುದು ತಪ್ಪದು. ಒಬ್ಬೊಬ್ಬರೂ ತಮ್ಮ ತಮ್ಮ ಬಂಧನ ಅಥವ ಮೋಕ್ಷಕ್ಕೆ ಅನುಸರಿಸಬೇಕಾದ ಮಾರ್ಗವಾವುದು, ಮಾಡಬೇಕಾದ ಕಾರ್ಯಗಳಾವುವು, ತ್ಯಜಿಸಬೇಕಾದ ಕಾರ್ಯಗಳಾವುವು, ಎಂಬ ಮುಂತಾದ ವಿಧಿನಿಷೇಧಗಳನ್ನೆಲ್ಲ ವೇದ ಶಾಸ್ತ್ರಾದಿಗಳ ಮೂಲಕ ಒದಗಿಸಿ, ಅವುಗಳನ್ನು ತಿಳಿದು ಅನುಸರಿಸಲು ವಿದ್ಯಾಬುದ್ಧಿಗಳೆಂಬ ಸಾಧನಗಳನ್ನು ಕಲ್ಪಿಸಿ,

ತನಗೆ ಸೂಕ್ತವೆಂದು ತೋರಿದ ಮಾರ್ಗದಲ್ಲಿ ನಡೆಯಲು, ಮಾನವನಿಗೆ ಸ್ವಾತಂತ್ರ್ಯವನ್ನೂ ಕೊಟ್ಟಿರುವನು. ಸೃಷ್ಟಿ ಶ್ರೇಷ್ಠನೆಂಬ ಉದಾರಭಾವ ದಿಂದ ಸರ್ವೇಶ್ವರನು, ಮಾನವಪ್ರಾಣಿಗೆ ದಯಪಾಲಿಸಿರುವ ಈ ಕಿಂಚಿತ್ ಸ್ವಾತಂತ್ರ್ಯದ ಪ್ರಯೋಜನವನ್ನು ಸದುಪಯೋಗಗೊಳಿಸಿಕೊಂಡು ಸಂ ಸಾರ ಚಕ್ರದ ಗತಿಯಿಂದ ತಪ್ಪಿಸಿಕೊಂಡು ಮೋಕ್ಷಸುಖಾನುಭವ ಹೊಂದು ವುದಾಗಲೀ, ಅಥವ ಅದನ್ನು ದುರುಪಯೋಗಗೊಳಿಸಿಕೊಂಡು ಜನನ ಮರಣದ ಗತಿಯಲ್ಲಿ ಸಿಕ್ಕು ದುಃಖ ಪರಂಪರೆಗಳನ್ನು ಅನುಭವಿಸುವುದಾ ಗಲೀ ಮಾನವನ ಕೈಯಲ್ಲೇ ಇದೆ.

ಹೀಗೆಂದ ಮಾತ್ರದಲ್ಲೇ, ಒಂದು ಪ್ರಶ್ನೆಯುದಯಿಸುತ್ತದೆ. - ನಮಗೆ ಪ್ರಾಪ್ತವಾಗುವ ಸುಖ ಅಥವ ದುಃಖಗಳಿಗೆ, ನಮ್ಮ ಕರ್ಮಗಳೇ ಕಾರಣ ಗಳೆಂದಾದಮೇಲೆ, ನಾವು ಕೇವಲ ಕರ್ಮಾಧೀನರಾಗಿ ಅದರ ಬಂಧನಕ್ಕೆ ಸಿಕ್ಕಿ ಸುಖವನ್ನೋ ದುಃಖವನ್ನೋ ಹೊಂದುವೆವು. ನಮ್ಮ ದುಃಖವನ್ನು ನಿವಾರಿಸಿ, ಸುಖ ಪ್ರಾಪ್ತಿಯನ್ನುಂಟುಮಾಡಿಕೊಡದ ದೇವರಿಂದ ನಮಗೆ ಪ್ರಯೋಜನವೇನು! ಅಂತಹ ದೇವರು ಇದ್ದಾನೆಂದರೆ ಎಷ್ಟು ಪ್ರಯೋ ಜನವೋ ಇಲ್ಲವೆಂದರೂ ಅಷ್ಟೇ ಪ್ರಯೋಜನವಲ್ಲವೆ, ಎಂದು ತೋರ ಬಹುದು. ಈ ಸಂದರ್ಭದಲ್ಲಿ ಒಂದು ವಿಚಾರವನ್ನು ನಾವು ಮರೆಯದಿರ ಬೇಕು. ಸರ್ವೇಶ್ವರನು ವಿಶ್ವಕುಟುಂಬಿಯು. ಈ ವಿಶ್ವಕುಟುಂಬದಲ್ಲಿ ಯಜಮಾನನಾದ ಸರ್ವೇಶ್ವರನು, ಪ್ರತಿಯೊಂದು ಕ್ಷಣದಲ್ಲೂ ಒಬ್ಬೊಬ್ಬನ ಎದುರಿಗೂ ನಿಂತು ಇಂತಿಂತಹ ಕೆಲಸಗಳನ್ನು ಮಾಡು, - ಮಾಡಬೇಡ ಎಂದು ಹೇಳುತ್ತಿರಲು ಸಾಧ್ಯವೇ? ಆದುದರಿಂದಲೇ ಮನುಷ್ಯನಿಗೆ ಬುದ್ಧಿ ಶಕ್ತಿಯನ್ನು ದಯಪಾಲಿಸಿ, ಅದನ್ನನುಸರಿಸಿ ಕೆಲಸಮಾಡುವ ಒಂದು ಪ್ರ ಮಾಣದ ಸ್ವಾತಂತ್ರ್ಯವನ್ನೂ ಕೊಟ್ಟಿರುವನು. ಈ ಸ್ವಾತಂತ್ರ್ಯ-ಬುದ್ಧಿ ಶಕ್ತಿಗಳ ಲಾಭದಿಂದ ಮನುಷ್ಯನು ಅಹಂಕಾರ ಮಮಕಾರಗಳ ವಶನಾಗಿ ನಡೆಯತೊಡಗುವನಾದರೆ ಅದು ಅವನ ಅವನತಿಗೂ, ಹಾಗಲ್ಲದೆ ವಿನಯ ವಿಧೇಯತೆ ಕೃತಜ್ಞತಾ ಭಾವಗಳನ್ನು ತನ್ನಲ್ಲಿ ವೃದ್ಧಿಗೊಳಿಸಿಕೊಂಡು ಭಗ ವನ್ನಿರ್ಭರನಾಗಿ ತಾನು ಮಾಡುವ ಸಕಲ ಕಾರ್ಯಗಳಿಗೂ ಹೃದಯಾಂ

ತರ್ವಾಶ್ರೀಯಾದ ಸರ್ವೇಶ್ವರನು ಸಾಕ್ಷಿರೂಪನಾಗಿರುವನೆಂಬುದನ್ನು ತಿಳಿದು ಲೋಕ ಕಾರ್ಯಗಳಲ್ಲಿ ಬೆರೆಯುವನಾದರೆ ಅದು ಅವನ ಉನ್ನತಿಗೂ ತಪ್ಪದೆ ಕಾರಣವಾಗುವುದು. ಸ್ವತಂತ್ರವಾಗಿ ನಡೆದಾಡಬಲ್ಲ ಮಗುವನ್ನು ಅದರ ಇಷ್ಟ ಬಂದಂತೆ ನಡೆಯಲಿತ್ತು, ನಡೆಯಲಿಕ್ಕೆ ಬಾರದೆ ಪರಕೀಯ ಸಹಾಯವನ್ನಪೇಕ್ಷಿಸುವ ಮಗುವನ್ನು ಕೈಹಿಡಿದು ನಡೆಯಿಸುತ್ತಲೂ, ಅಷ್ಟು ಮಾತ್ರ ಯೋಗ್ಯತೆಯನ್ನು ಗಳಿಸಿರದ ಶಿಶುವನ್ನು ತಾಯಿಯು ಎತ್ತಿ ಆಡಿಸುತ್ತಲೂ ಇರುವುದು ಸ್ವಾಭಾವಿಕವಲ್ಲವೆ ? ಹಾಗೆಯೇ,— 'ನನ್ನ ಎಲ್ಲಾ ಕೆಲಸಗಳನ್ನೂ ನಾನೇ ಮಾಡಿಕೊಳ್ಳಬಲ್ಲೆ ; ಎಲ್ಲಕ್ಕೂ ನಾನೇ ಸ್ವಾಮಿಯು, ನಾನೇ ಸರ್ವಸ್ವತಂತ್ರನು. ಈ ದಿನ ಇಷ್ಟು ದ್ರವ್ಯವನ್ನು ಸಂಪಾದಿಸಿದೆ. ನನಗೆ ಇಷ್ಟು ಮಂದಿ ಮಕ್ಕಳುಮರಿಗಳು, ಪರಿವಾರ ಮುಂತಾದ ಬಾಂಧವರಿರುವರು. ಇದೆಲ್ಲವೂ ನನ್ನದು. ನನ್ನ ಸಮಾನರಾರು?' ಎಂದು ಮುಂತಾಗಿ ಬಿರ್ರಿ ಬೀಗುತ್ತಿರುವವನಿಗೆ— 'ನನ್ನ ಕಾರ್ಯಗಳಿಗೆಲ್ಲ ಸೂತ್ರಧಾರಕನು ದೇವರು' ಎಂಬ ಯೋಚನೆಯಾದರೂ ಮನಸ್ಸಿಗೆ ಬಂದೀತೆ? ಅಂತಹ ಸಂದರ್ಭದಲ್ಲಿ ದೇವರಾದರೂ-ನಡೆಯಲಿಕ್ಕೆ ಬರುವ ಮಗುವನ್ನು ತನ್ನ ಮಟ್ಟಿಗೆ ತಾನೇ ನಡೆಯಲೆಂದು ಬಿಡುವ ತಂದೆಯಂತೆ- 'ನಡೆಯಲಿ. ತಾನೇ ಮಾಡಲಿ ; ಅನುಭವ ಪಡಲಿ. ಕಷ್ಟಸುಖಗಳನ್ನನುಭವಿಸಿ ಬುದ್ಧಿ ಕಲಿತುಕೊಳ್ಳಲಿ' ಎಂದು ತಟಸ್ಥನಾಗಿ ನೋಡುತ್ತಿರುವುದಾದರೂ ಸ್ವಾಭಾವಿಕವು. ಹಾಗಲ್ಲದೆ ಯಾವುದೊಂದು ಕಾರ್ಯದಲ್ಲೂ ಅಂತರ್ಯಾಮಿಯಾದ ಭಗವಂತನ ಸರ್ವ ಸಾಕ್ಷಿತ್ವವನ್ನು ಮರೆಯದೆ ಆತನ ಮೇಲೆಯೇ ಭರವಸೆಯಿಟ್ಟು, ಆತನೇ ಗತಿಯೆಂದು ನಂಬಿ, ನಡೆಯುತ್ತಿರುವವನನ್ನು ದೇವರು,- ನಡೆಯಲು ಬಾರದ ಮಗುವನ್ನು ಕೈಹಿಡಿದು ನಡೆಯಿಸುವ ತಂದೆಯಂತೆ- ತಪ್ಪದೆ ಮಾರ್ಗದರ್ಶಕನಾಗಿ ನಡೆಯಿಸುವನು. ಆ ಸಂದರ್ಭದಲ್ಲಿ ಮಗುವಿನ ಏಳುವಿಕೆ ಬೀಳುವಿಕೆಗಳಿಗೆಲ್ಲ ಕೈಹಿಡಿದು ನಡೆಯಿಸುವ ತಾನೇ ಬಾಧ್ಯಸ್ಥನಾದುದರಿಂದ ಆಗಾಗ ಅದರ ದುಃಖ ಸಂಕಟಗಳನ್ನು ನಿವಾರಿಸುವ ವಿಚಾರದಲ್ಲೂ ಬದ್ಧಾಧರನಾಗಿ ಸಮುದಾಯಿಸುತ್ತ - ಯೋಗ್ಯ ಸಹಾಯವನ್ನೊದಗಿಸುತ್ತ ತಪ್ಪದೆ ಕಾಪಾಡುವ ಕಾರ್ಯವಾದರೂ ಆತನ ಪಾಲಿಗೇ ಸೇರಿರುವುದು.

* ಅನನ್ಯ ಚಿತ್ತವೃತ್ತಿಯಿಂದ ಯಾರು ತನ್ನ ಮೇಲೆಯೇ ನಿರ್ಭರರಾಗಿರುವರೋ ಅವರ ಯೋಗಕ್ಷೇಮವು ತನಗೇ ಸೇರಿದ್ದೆಂದು ಭಗವಾನನ ವಾಗ್ದಾನವಿರುವುದು.

ನಮ್ಮ ಕಥಾನಾಯಕಳಾದ ಸಾಧ್ವೀಮಣಿ ಸಖೂಬಾಯಿಯು, ಲೋಕಯಾತ್ರೆಯ ತನ್ನ ಗೃಹಕೃತ್ಯ ನಿರ್ವಹಣಕಾಲದಲ್ಲಿ, ಸದಾ ಶ್ರೀ ಪಾಂಡುರಂಗ ವಿಠ್ಠಲನಲ್ಲೇ ನಟ್ಟ ಮನಸ್ಸುಳ್ಳವಳಾಗಿ ಪ್ರವೇಶಿಸುತ್ತ ಅನನ್ಯ ಶರಣಾಗತಳಾಗಿದ್ದು ಆ ಸ್ವಾಮಿಯನ್ನು ಉಪಾಸನೆ ಮಾಡಿದಳಾದುದರಿಂದ, ಆ ದೇವರ ದೇವನು ಸರ್ವದಾ ಆಕೆಗೆ ಬೆಂಬಲನಾಗಿದ್ದು ಕಾಪಾಡಿದನು. ಆಕೆಯ ಪುಣ್ಯಚರಿತ್ರೆಯು ಈ ಚಿಕ್ಕ ಪುಸ್ತಕದಲ್ಲಿ ಯಥಾಮತಿ ಕೊಡಲ್ಪಡುವುದು. ವಾಚಕ ಮಹಾಶಯರು, ಗ್ರಂಥಮಾಲೆಯ ಇತರ ಕುಸುಮಗಳಂತೆಯೇ, ಇದಕ್ಕೂ ಉದಾರಾಶ್ರಯವಿತ್ತು, ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು
ತಾ. ೨೫-೯-೧೯೩೧

ಇತಿ ಸುಜನವಿಧೇಯ
ಯಂ. ರಾಮರಾವ್.



* ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ। ಗೀತಾ. ೯-೨೨

|| ಶ್ರೀರಾಮಸಹಾಯಂ ||

ಸಾಧ್ವೀಮಣಿ

# ಸಖೂಬಾಯಿ

**ಅಧ್ಯಾಯ ೧** "ಜನನ-ಬಾಲ್ಯ-ವಿವಾಹ"

ನಮ್ಮ ದೇಶಮಾತೆಯಾದ ಈ ಪವಿತ್ರ ಭಾರತ ಭೂಗರ್ಭದಲ್ಲಿ ಎಂತೆಂತಹ ಅಮೌಲ್ಯ ರತ್ನಗಳು ಜನಿಸಿಬಂದುವೆಂಬುವನ್ನು ಗಣಿಸಲು ಅಸದಳವು. ಆ ರತ್ನಗಳ ಬೆಲೆಯನ್ನು ನಿರ್ಧರಿಸುವುದಾದರೂ ಸಾಮಾನ್ಯವಾದ ಕಾರ್ಯವಲ್ಲ. ಗಣಿಯಿಂದ ಎತ್ತಲ್ಪಟ್ಟ ರತ್ನವು, ಅನೇಕವೇಳೆ ಮಣ್ಣು ಕಲ್ಲುಗಳಿಂದ ಆಚ್ಛಾದಿತವಾಗಿ ಒಂದೆಡೆಯಲ್ಲಿ ಬಿದ್ದು ಅಜ್ಞಾತವಾಗಿಯೇ ಬಹುಕಾಲವನ್ನು ಕಳೆಯಬೇಕಾಗಬಹುದು; ಅಥವ ಒಬ್ಬಾನೊಬ್ಬ ಕ್ಷುದ್ರ ವ್ಯಕ್ತಿಯ ಕೈಯಲ್ಲಿ ಬಿದ್ದು ಅದರ ಯೋಗ್ಯತಾಪರಿಚಯವೇ ಆಗದೆ ಎಷ್ಟೋ ಕಾಲ ಕಳೆದುಹೋಗಬಹುದು. ಆದರೆ ಎಂದು ಅದು ತೊಳೆಯಲ್ಪಟ್ಟು, ತನ್ನಮೇಲೆ ಆಚ್ಛಾದಿತವಾಗಿದ್ದ ಮಣ್ಣು ಕಲ್ಲು ಮುಂತಾದ ಕೊಳೆಯನ್ನೆಲ್ಲಾ ಕಳೆದುಕೊಂಡು, ತನ್ನ ಸಹಜ ಸ್ವರೂಪದಿಂದ ಗೋಚರಿಸುವುದೋ ಅಲ್ಲದೆ, ಎಂದು ಒಬ್ಬಾನೊಬ್ಬ ರತ್ನ ಪರೀಕ್ಷಕನು ಅದರ ಯೋಗ್ಯತೆಯಿಂಥದೆಂಬುದನ್ನು ಅರಿತು ಅದನ್ನು ಸಾಣೆಗೆ ಕೊಟ್ಟು, ಕೊರೆಯಿಸಿ, ಉಜ್ಜಿಸಿ ಸಿದ್ಧಗೊಳಿಸುವನೋ ಅಂದು ಅದು ಅದರ ಉಜ್ವಲ ಪ್ರಕಾಶವನ್ನು ಬೀರಿ, ಅಗಣಿತ ಬೆಲೆಯನ್ನು ಹೊಂದಲು ಯೋಗ್ಯವಾಗುವುದು. ಅಷ್ಟು ಮಾತ್ರವಲ್ಲ, ಆ ಸ್ಥಿತಿಯಲ್ಲೂ ಸಹ, ಅದು ತನಗೆ ಯೋಗ್ಯವಾದ ಸ್ಥಾನದಲ್ಲಿ ಕುಳಿತು ಗೌರವ ಹೊಂದುವುದಕ್ಕೂ ಕೆಲಕೆಲವು ಸಂಸ್ಕಾರಗಳಿಗೆ ಒಳಪಡಬೇಕಾದುದು ಆವಶ್ಯಕವಾಗಿರುವುದು. ಸ್ವರ್ಣಕಾರನು ಅದನ್ನು ಕುಂದಣದಲಿಟ್ಟು, ಬಣ್ಣ ಕಟ್ಟಿ ಸಿದ್ಧಗೊಳಿಸಿದನೆಂದರೆ ಆಗ ಅದು ರಾಜರಾಜೇಂದ್ರಸ

ಮುಕುಟದಲ್ಲೋ ಅಥವ ದೇವದೇವೇಶನ ಮುಕುಟದಲ್ಲೋ ವಿರಾಜಮಾನ ವಾಗುವುದು. ಆ ಸ್ಥಾನದಲ್ಲಿ ಅದನ್ನು ಕಂಡು ಗೌರವಿಸದವರಾರು?

ಪಾಷಾಣಮಯವಾದ ಮೇಲ್ಕಂಡಂತಹ ಒಂದು ರತ್ನದ ವಿಷಯದಲ್ಲಿ ಹೇಗೋ ಚಿನ್ಮಯವಾದ ಜೀವರತ್ನದ ವಿಷಯದಲ್ಲೂ ಹಾಗೆಯೇ! ಆ ರತ್ನವು ಉಜ್ವಲ ತೇಜಸ್ಸನ್ನು ಒಳಗೊಂಡಿದ್ದರೂ, ಭೂಮಿಯಲ್ಲಿದ್ದಾಗಲೂ ಭೂಮಿ ಯಿಂದ ಎತ್ತಲ್ಪಟ್ಟು ಮಣ್ಣು ಕಲ್ಲುಗಳಿಂದ ಮುಚ್ಚಲ್ಪಟ್ಟಿದ್ದಾಗಲೂ ಹೇಗೆ ಪ್ರಕಾಶಹೀನವಾಗಿದ್ದಿತೋ, ಹಾಗೆಯೇ ಜೀವಾತ್ಮವೂ ಸಹ ಸಚ್ಚಿದಾ ನಂದ ಸ್ವರೂಪಾತ್ಮಕವೂ ಮೋಕ್ಷಾಧಿಕಾರಿಯೂ ಆಗಿದ್ದರೂ ಜನನ ಮರಣ ಚಕ್ರಗತಿಯಲ್ಲಿ ಸಿಕ್ಕಿಗ್ಗ ಪಾಂಚಭೌತಿಕನಾದ ವಿವಿಧ ಆಕಾರ ಗುಣಧರ್ಮ ಗಳನ್ನುಳ್ಳ ಪಾಷಾಣ ಲೋಹ, ತರು ಲತೆ, ಕ್ರಿಮಿ ಕೀಟ, ಪಶು ಪಕ್ಷಿ, ಮನುಷ್ಯ ಮುಂತಾದ ವಿವಿಧಾಕಾರದ ಲಕ್ಷಾಂತರ ದೇಹಗಳ ಆಚ್ಛಾದನೆಯ ಲ್ಲಿ ಅಡಗಿ ತನ್ನ ಸಹಜ ಸ್ವರೂಪವನ್ನೇ ಕಳೆದುಕೊಂಡು ಅನೇಕ ಕಾಲಗಳ ವರೆಗೆ ಅಜ್ಞಾತಾವಸ್ಥೆಯಲ್ಲೇ ಬಿದ್ದಿರುವುದು. ಹೀಗೆ ಬಹು ಜನ್ಮಗಳು ಕ ಳೆದ ನಂತರದಲ್ಲಿ, ಪುಣ್ಯಶ್ಲೋಕರಾದ ಭಕ್ತಶ್ರೇಷ್ಠರು, ನಿಷ್ಕಾಮರಾದ ಕರ್ಮಯೋಗಿಗಳು, ಅಥವ ಪೂಜ್ಯರಾದ ಜ್ಞಾನಿವರ್ಯರು ಎಂಬ ರತ್ನ ಪರೀಕ್ಷಕರ ಕಟಾಕ್ಷ ವೀಕ್ಷಣೆಗೆ ಪಾತ್ರವಾಗಿ ಆ ಜೀವರತ್ನವೂ ವಿವಿಧ ರೀ ತಿಯಿಂದ ಸಾಣೆಗಿಡಲ್ಪಟ್ಟು, ಉಜ್ಜಲ್ಪಟ್ಟು ಯೋಗ್ಯ ಆಕಾರಕ್ಕೆ ತಿದ್ದಲ್ಪ ಡುವುದು. ತರುವಾಯ ಹಾಗೆ ದೋಷಮುಕ್ತವಾಗಿ ಪ್ರಕಾಶಿತವಾದ ಆ ರತ್ನವನ್ನು ಸರ್ವೇಶ್ವರನೆಂಬ ಸ್ವರ್ಣಕಾರನು, ಅದರ ಸಂಸ್ಕಾರಕ್ಕೆ ಯೋ ಗ್ಯವಾದ ಲೋಕಸೇವಾ, ಸಾಧುಸೇವಾ, ಸಾಹಿತ್ಯಸೇವಾ, ಧಾರ್ಮಿಕಸೇವಾ, ಭಗವತ್ಸೇವಾ, ರಾಜಕೀಯಸೇವಾ ಮುಂತಾದ ವಿವಿಧ ಸ್ಥಾನಗಳಲ್ಲೊಂದ ರಲ್ಲಿ ಇಟ್ಟು ಅದರ ಪ್ರಕಾಶವು ಸರ್ವತ್ರ ಹರಡುವಂತೆ ಏರ್ಪಡಿಸುವನು. ಭಗವತ್ಕಟಾಕ್ಷಕ್ಕೆ ಪಾತ್ರವಾಗಿ ಆಯಾ ಸ್ಥಾನಗಳನ್ನು ಗಳಿಸಿದ ಆ ಜೀವರ ತ್ನಗಳು ತಾವು ಮಾಡುವ ಆಯಾ ಸೇವೆಗಳನ್ನು ಶ್ರೀ ಹರಿಸೇವೆಯೆಂಬ ಪವಿತ್ರ ಚಿತ್ತವೃತ್ತಿಯಿಂದ ಪ್ರೇರಿತರಾಗಿಯೇ ಮಾಡುವರಲ್ಲದೆ ಅನ್ಯಥಾ ಇಲ್ಲ. ಇಂದು ಲೋಕಸೇವೆಯ ವಿವಿಧ ಕ್ಷೇತ್ರಗಳ ಪ್ರಧಾನ ಸ್ಥಾನಗಳಲ್ಲಿ

ರುವ ಒಬ್ಬೊಬ್ಬ ವ್ಯಕ್ತಿಯೂ ಆಯಾ ಸ್ಥಾನಕ್ಕೆ ತಕ್ಕ ಪಾತ್ರತೆಯನ್ನು ಗಳಿಸಿಕೊಳ್ಳುವುದಕ್ಕಾಗಿ, ಎಷ್ಟೆಷ್ಟು ಬಗೆಯ ಸಂಸ್ಕಾರಗಳಿಗೆ ಒಳಪಟ್ಟಿರಬಹುದೆಂಬುದನ್ನು ಸೂಕ್ಷ್ಮವಾಗಿ ವಿಚಾರಿಸಿದಲ್ಲದೆ ಈ ವಿಷಯವು ಸ್ಪಷ್ಟವಾಗಿ ಬೋಧವಾಗಲಾರದು. ಅಷ್ಟು ಬಗೆಯ ಸಂಸ್ಕಾರಗಳಿಗೆ ಒಳಪಟ್ಟು, ಉಜ್ಜಲ್ಪಟ್ಟು, ಕೊರೆಯಲ್ಪಟ್ಟು ಸಿದ್ಧವಾದವನೇ ಆ ಸ್ಥಾನಕ್ಕೆ ಸಹಜವಾದ ಗೌರವವನ್ನು ಪಡೆಯುವುದಕ್ಕೂ, ಸುಖಸಂತೋಷಗಳನ್ನು ಅನುಭವಿಸುವುದಕ್ಕೂ ಯೋಗ್ಯನಾಗುವನಲ್ಲದೆ, ಮಣ್ಣುಮುದ್ದೆಯಂತೆ ಹುಟ್ಟಿದವನು ಹುಟ್ಟಿದಂತೆಯೇ ಕುಳಿತಿದ್ದರೆ, ಆ ಸ್ಥಾನವೂ ಅದಕ್ಕೆ ಯೋಗ್ಯವಾದ ಗೌರವ ಸುಖಸಂತೋಷಗಳೂ ಲಭ್ಯವಾಗಲು ಸಾಧ್ಯವೆ? ಒಬ್ಬ ಜೀವಾತ್ಮನು ತರುಪಾಷಾಣ ಕ್ರಿಮಿಕೀಟ ಪಶುಪಕ್ಷಿ ತರುವಾಯ ಅಜ್ಞಾನಿಯಾದ ಅನಾಗರಿಕ ಮನುಷ್ಯ ಈ ಬಗೆಯ ಜನ್ಮಗಳಲ್ಲಿರುವ ಸ್ಥಿತಿಯನ್ನು ಜೀವನ್ಮುಕ್ತಾವಸ್ಥೆಗೇರಿರುವ ಸ್ಥಿತಿಯೊಂದಿಗೆ ಹೋಲಿಸುವುದಾದರೆ ಆಗ ಆ ಜೀವರತ್ನವು - ಗಣೀಯಿಂದ ಅಗೆದು ತೆಗೆಯಲ್ಪಟ್ಟ ತನ್ನ ಸ್ಥಿತಿಯಿಂದ ವಿವಿಧ ಸಂಸ್ಕಾರಗಳನ್ನು ಹೊಂದಿ ರಾಜಕಿರೀಟದಲ್ಲಿ ವಿರಾಜಮಾನವಾದ ಒಂದು ಭೌತಿಕರತ್ನದ ಸ್ಥಿತಿಗೆ ಏರಿತು ಎಂದು ಹೇಳುವಲ್ಲಿ ಏನು ದೋಷವುಂಟು? ಮಹನೀಯವ್ಯಕ್ತಿಗಳು, ಇಂದು ಲೋಕದೃಷ್ಟಿಯಲ್ಲಿ ಅತ್ಯುನ್ನತವಾದ ಅಧಿಕಾರ ಸ್ಥಾನಗಳಲ್ಲೋ, ಅಗಣಿತವಾದ ಭೋಗಭಾಗ್ಯಗಳನ್ನು ಅನುಭವಿಸುತ್ತಲೋ ಅಥವ ವಿಶೇಷ ಮಾನವವರ್ಗದ ಪ್ರೀತಿವಿಶ್ವಾಸ, ಗೌರವವಂದನೆಗಳಿಗೆ ಪಾತ್ರವಾಗಿಯೋ ಇದ್ದರೆ, ಆಯಾ ಸ್ಥಾನಗಳು ಅವರಿಗೆ ಸುಮ್ಮನೆ ದೊರೆತುವಲ್ಲ.-ಅವುಗಳನ್ನು ಗಳಿಸುವಲ್ಲಿ ಆಯಾ ವ್ಯಕ್ತಿಗಳು ಅಗಾಧ ಕಷ್ಟ ನಷ್ಟಗಳ ಪಾಲಾಗಿ ವಿಶೇಷ ಶ್ರಮಪಟ್ಟಿದ್ದಾರೆ; ಹಲವು ಬಗೆಯ ದುಃಖತಾಪತ್ರಯಗಳನ್ನು ಅನುಭವಿಸಿ ವಿವಿಧ ಸಂಸ್ಕಾರಗಳನ್ನು ಹೊಂದಿ ಆ ಸ್ಥಿತಿಗೆ ಏರಿದವರಾಗಿದ್ದಾರೆ. ಎಂದು ತಿಳಿದು ಅವರ ಜೀವಿತಾನುಭವಗಳಿಂದ ಯೋಗ್ಯ ಪಾಠವನ್ನು ಕಲಿತು ನಮ್ಮ ನಡವಳಿಕೆಗಳನ್ನು ರೂಪಿಸಿಕೊಳ್ಳುವಲ್ಲಿ ಎಚ್ಚರಗೊಳ್ಳಬೇಕಲ್ಲದೆ - ಅಸೂಯೆಗೊಳಗಾಗಬಾರದು. ಯಾವುದೊಂದು ಸ್ಥಿತಿಯೂ ಸ್ಥಾನವೂ ಶ್ರಮವಿಲ್ಲದೆ, ಯೋಗ್ಯಸಂಸ್ಕಾರಗಳಿಗೊಳಪಡದೆ ಲಭಿಸದು ಎಂಬುದನ್ನು ಯಾರೂ ಮರೆಯದಿರಬೇಕು. ಹಾಗಲ್ಲವಿದ್ದಲ್ಲಿ 'ಸಹಸ್ರ ಉಳಿಯ

ಕೆಟ್ಟು ಬಿದ್ದಲ್ಲದೆ ಒಂದು ಲಿಂಗವಾಗದು' ಎಂಬ ಆರ್ಯೋಕ್ತಿಯು ಅರ್ಥ ಹೀನವಾಹುದೇ ?—

ಪವಿತ್ರತಮವಾದ ಭೀಮರಥೀ ತೀರದಲ್ಲಿ, ಶ್ರೀಪಂಡರಾಪುರೀ ಕ್ಷೇತ್ರವು, ಪಾಂಡುರಂಗ ವಿಠ್ಠಲಸ್ವಾಮಿಯ ಸಾನ್ನಿಧ್ಯದಿಂದ ಭೂವೈಕುಂಠವೋ ಎಂಬಂತಹ ಪ್ರಶಸ್ತಿಗೆ ಪಾತ್ರವಾಗಿ ಕಂಗೊಳಿಸುತ್ತಿರುವುದು. ಅಲ್ಲಿ ಸ್ವಾಮಿಯ ಪಾದಾರವಿಂದ ಸೇವೆಯಲ್ಲಿ ಮಗ್ನರಾದ ಅನೇಕಾನೇಕ ಭಕ್ತೋತ್ತಮರು, ಲೌಕಿಕವಾದ ತಮ್ಮ ಸಮಸ್ತವನ್ನೂ ಸೂರೆಗೊಟ್ಟು, ಭಿಕ್ಷಾವೃತ್ತಿಯನ್ನು ಕೈಕೊಂಡು ಸದಾ ಆ ದೇವದೇವೇಶ್ವರನ ಪಾದಭಜನೆಯಲ್ಲೇ ನಿರತರಾಗಿ ಅಜ್ಞಾನಮಾನವ ಸಮುದಾಯವನ್ನು ಅಂಧಕಾರಮಯವಾದ ಸಂಸಾರ ಯಾತ್ರೆಯಲ್ಲಿ, ಸುರಕ್ಷಿತವಾಗಿ ಕರೆದೊಯ್ಯಲು ದಯಾಮಯನಾದ ಭಗವಾನನಿಂದ ಕರುಣಿಸಲ್ಪಟ್ಟ ಜ್ಞಾನಮಯಜ್ಯೋತಿಗಳೋ ಎಂಬಂತೆ ವಿರಾಜಿಸುತ್ತಿರುವರು. ಶ್ರೀಪಾಂಡುರಂಗವಿಠ್ಠಲ ಸ್ವಾಮಿಯ ಭಕ್ತಕುಟುಂಬದಲ್ಲಿ, ಸ್ತ್ರೀ ಪುರುಷ, ಬ್ರಾಹ್ಮಣ-ಅಬ್ರಾಹ್ಮಣ, ಉತ್ತಮ-ನೀಚ ಎಂಬ ಭೇದವೇ ಇಲ್ಲ. ಅಲ್ಲಿ ಸರ್ವರೂ 'ಹರಿಭಕ್ತ' ಎಂಬ ಒಂದೇ ಜಾತಿಗೆ ಸೇರಿದವರು. ಅಲ್ಲಿ ಭಕ್ತಾದಿಗಳು ಉನ್ಮತ್ತರಾಗಿ ಒಡಲನ್ನು ಮರೆತು ಮಾಡುವ ಭಜನೆ ನರ್ತನಾದಿಗಳು ಎಂತಹ ನಾಸ್ತಿಕನನ್ನೂ ಆಸ್ತಿಕನನ್ನಾಗಿ ಮಾಡುವುವೆಂಬ ಪ್ರಸಿದ್ಧಿಯುಂಟು. ಪೂರ್ವದಲ್ಲಿ ನಾಮದೇವ, ತುಕಾರಾಮ ಧ್ಯಾನೇಶ್ವರ, ಪುಂಡಲೀಕ, ಪುರಂದರದಾಸ ಮುಂತಾದ ಹಲವುಮಂದಿ ಭಕ್ತೋತ್ತಮರು ಆ ಸ್ವಾಮಿ ಸನ್ನಿಧಿಯಲ್ಲಿ ವಾಸಿಸಿ, ಆ ದೇವದೇವನ ಅನಂತ ಕಲ್ಯಾಣಗುಣಗಳನ್ನು ತಮ್ಮ ಮುಕ್ತಕಂಠದಿಂದ ವರ್ಣಿಸಿ, ಅಲ್ಲಿಯ ವಾತಾವರಣವನ್ನು ಪರಿಶುದ್ಧಗೊಳಿಸಿರುವರು. ನಮ್ಮ ಕಥಾನಾಯಿಕೆಯಾದ ಸಾಧ್ವೀಮಣಿ ಸಖೂ ಬಾಯಿಯಾದರೂ, ವಿಠ್ಠಲಸ್ವಾಮಿಗೆ ಅನನ್ಯ ಭಕ್ತಳಾಗಿ ನಡೆದುಕೊಂಡು ಕೀರ್ತಿಶರೀರಿಯಾದ ಮಹಾನುಭಾವಳೇ !

ಯಾವ ಒಬ್ಬ ಮಹಾ ವ್ಯಕ್ತಿಯ ಚರಿತ್ರೆಯನ್ನು ಬರೆಯುವಾಗ, ಆ ವ್ಯಕ್ತಿಯಿಂದ ಪ್ರಪಂಚಕ್ಕೆ ಗೋಚರವಾದ ಒಂದು ಮಹತ್ತ್ವವೇ ಅತಿ ಮುಖ್ಯವಾದ ವಿಚಾರಣೀಯಾಂಶವಲ್ಲದೆ — ಆ ವ್ಯಕ್ತಿಯ ಜನನ, ವಾಸಸ್ಥಳ, ಕಾಲ, ತಂದೆತಾಯಿಗಳು, ಕುಲಗೋತ್ರಗಳು ಮುಂತಾದುವು,

ಅಷ್ಟು ಮುಖ್ಯವಾದುವಲ್ಲ. ಆದರೆ ಸ್ಥಳ ಕಾಲಾದಿ ವಿಚಾರಗಳು ತಿಳಿಯುವುದರಿಂದ ಆಯಾ ವ್ಯಕ್ತಿಯು ಜೀವಿಸಿದ್ದಾಗ ಕಾಲಸ್ಥಿತಿಯೂ, ದೇಶಸ್ಥಿತಿಯೂ, ಸಮಾಜಸ್ಥಿತಿಯೂ ಹೇಗಿದ್ದುವು, ಅಂತಹ ಸಂದರ್ಭದಲ್ಲಿ ಆತನು ಎಂತಹ ಅಮೌಲ್ಯ ಕೆಲಸ ಮಾಡಿದನು ಎಂಬ ವೃತ್ತಾಂತವನ್ನು ತಿಳಿಯಲು ಹೆಚ್ಚು ಅವಕಾಶವಾಗುವುದು. ತಂದೆತಾಯಿಗಳು, ಅವರ ಗುಣನಡತೆಗಳು, ಬಂಧುಗಳು, ವಾಸಸ್ಥಳವೇ ಮುಂತಾದ ವಿಚಾರಗಳ ಪರಿಚಯವಾಗುವುದರಿಂದ ಎಂತಹ ಸನ್ನಿವೇಶಗಳಿದ್ದಲ್ಲಿ ಎಂತಹ ಉತ್ತಮ ಚೇತನರು ಜನ್ಮಿಸಲು ಸಾಧ್ಯವಿರುವದು ಎಂಬ ವಿಷಯವನ್ನು ಯೋಚಿಸಿ, ಅಂತಹ ಉತ್ತಮ ಚೇತನರನ್ನು ಆಕರ್ಷಿಸಲು, ಅಂತಹ ಸನ್ನಿವೇಶಗಳನ್ನು ಕಲ್ಪಿಸಲೂ ಯೋಗ್ಯ ತಿಳಿವಳಿಕೆಯು ದೊರೆತಂತಾಗುವುದು. ಆದರೆ ಇವೆಲ್ಲಕ್ಕಿಂತಲೂ ಅತಿ ಮುಖ್ಯ ವಿಚಾರವೆಂದರೆ, ಮೇಲೆ ಹೇಳಿದಂತೆ ಅವರಿಂದ ಲೋಕಕ್ಕೆ ಯಾವ ನವೀನ ತತ್ವವು ಪ್ರದರ್ಶಿತವಾಯಿತು ಎಂಬುದೇ! ಕೆಲವುಮಂದಿ ಮಹನೀಯರ ಜೀವಿತಗಳಲ್ಲಿ ಮೇಲ್ಕಂಡ ಸಕಲ ಸ್ಪಷ್ಟೀಕರಣೆಗಳೂ ದೊರೆಯುವುವು! ಮತ್ತೆ ಕೆಲವುಗಳಲ್ಲಿ ಅಂತಹ ಯಾವ ಹೆಚ್ಚು ವಿಚಾರವೂ ದೊರೆಯುವುದಿಲ್ಲ. ಅಂತಹ ಸಂದರ್ಭದಲ್ಲಿ, ಕಮಲಪುಷ್ಪಕ್ಕಾಗಿ ಹುಡುಕುತ್ತಿರುವ ಮನುಷ್ಯನು, ಕೆರೆಯಿರುವ ಊರು, ಅದರ ವಿಸ್ತಾರ, ಅದರಲ್ಲಿರುವ ನೀರಿನ ಪ್ರಮಾಣ, ಆ ಕೆರೆಯಿಂದುಂಟಾಗುವ ಇತರ ಪ್ರಯೋಜನಗಳು, ಅದರಲ್ಲಿರುವ ಕಮಲನಾಳಗಳ ಸಂಖ್ಯೆ ಎಲೆಗಳ ವಿಸ್ತಾರ ಮುಂತಾದ ಇತರ ಯಾವ ವಿಚಾರವನ್ನೂ ಪರಿಚಯಗೊಳ್ಳಲಿಚ್ಛಿಸದೆ, ಸಿದ್ಧವಾಗಿ ದೊರೆವ ಕಮಲ ಪುಷ್ಪದಿಂದ ಮಾತ್ರವೇ ಸಂತುಷ್ಟನಾಗುವಂತೆ, ಓದುಗರು ಕೇವಲ ಅವರ ಚರಿತ್ರೆಯಲ್ಲಿ ದೊರೆವಷ್ಟು ವಿಚಾರಗಳಿಂದಲೇ ತೃಪ್ತರಾಗಬೇಕಾಗಿದೆ. ಪಾಂಡುರಂಗ ಭಕ್ತಾಗ್ರಣಿಗಳ ಚರಿತ್ರೆಗಳೆಲ್ಲವೂ ಶ್ರೀಮನ್ಮಹಾಭಕ್ತಿ ವಿಜಯವೆಂಬ ಗ್ರಂಥರತ್ನದಲ್ಲಿ ಮಹೀಪತಿಯೆಂಬೊಬ್ಬ ಭಕ್ತಶ್ರೇಷ್ಠನಿಂದ ರಚಿತವಾಗಿ ವಿರಾಜಿಸುತ್ತಿವೆ. ಅದರಲ್ಲಿ ದೊರೆವ ಸಾಧ್ವೀಮಣಿ ಸಖೂಬಾಯಿಯ ಚರಿತ್ರವನ್ನು ಪ್ರಕೃತ 'ಗ್ರಂಥಮಾಲಾ ಶೈಲಿ'ಯಲ್ಲಿ ನಮ್ಮ ವಾಚಕ ಮಹಾಶಯರಿಗಾಗಿ ಇಲ್ಲಿ ಯಥಾಮತಿ ಕೊಡಲೆಳಸುತ್ತೇವೆ.

ಪಾಪನಾಶಕ ತೀರ್ಥಗಳಲ್ಲಿ ದೇವತರಂಗಿಣಿಯಾದ ಗಂಗೆಗೆ ಸಮಾನ

ವಾದುದೆನ್ನಿಸಿ, ತನ್ನ ಜಲದಿಂದ ಅನಂತ ಜೀವಕೋಟಿಗಳನ್ನೂ ವನಸ್ಪತಿ ವರ್ಗವನ್ನೂ ಸಂರಕ್ಷಿಸುತ್ತಾ ಕೃಷ್ಣಾನದಿಯು ಕಂಗೊಳಿಸುತ್ತಿರುವುದು. ಅದರ ತೀರಪ್ರದೇಶವೆಲ್ಲ, ನೇತ್ರಾನಂದಕರವಾದ ಪೈರುಪಚ್ಚೆಗಳಿಂದಲೂ, ಫಲವೃಕ್ಷಗಳಿಂದಲೂ, ಜನಭರಿತವಾದ ನಗರ ಪಟ್ಟಣ ಊರು ಗ್ರಾಮ ಹಳ್ಳಿ ಅಗ್ರಹಾರಗಳಿಂದಲೂ ಶೋಭಿಸುತ್ತಿರುವುದು. ಹಾಗೆ ಮೆರೆವ ಅದರ ತೀರಪಟ್ಟಣಗಳಲ್ಲಿ ಕರವೀರಪುರವೆಂಬುದು ಸುಪ್ರಸಿದ್ಧವಾದುದು. ಆ ಪಟ್ಟಣದಲ್ಲಿ ವೇದಶಾಸ್ತ್ರಾಧ್ಯಯನ ಶೀಲರಾದ ಬ್ರಾಹ್ಮಣರೂ, ಶೂರರೂ ಧರ್ಮನಿರತರೂ ಭೂತದಯಾಪರರೂ ಆದ ಕ್ಷತ್ರಿಯರೂ, ಧನವಂತರೂ ಧರ್ಮಪರಾಯಣರೂ ಆದ ವೈಶ್ಯರೂ, ಭಗವದ್ಭಕ್ತರೂ ಕೃಷಿಕಾರ್ಯದಕ್ಷರೂ ಆದ ಶೂದ್ರರೂ ಪರಸ್ಪರ ಐಕಮತ್ಯದಿಂದ ಏಕಕುಟುಂಬಕ್ಕೆ ಸೇರಿದವರಂತೆ ಸಂತುಷ್ಟರಾಗಿ ವಾಸಮಾಡಿಕೊಂಡಿದ್ದರು.

ಶ್ರೀಗಂಧ ವೃಕ್ಷಗಳಿರುವ ಕಾಡಿನಲ್ಲಿ ಮುಳ್ಳುಕಂಟಿಯಿರುವುದಿಲ್ಲವೆ? ತಾವರೆಯ ಕೊಳದಲ್ಲಿ ಕೊಳಚೆಯಿರುವುದಿಲ್ಲವೆ? ಹಾಗೆಯೇ ಆ ಪಟ್ಟಣದ ಭೂಸುರವೃಂದದಲ್ಲಿ, ವೇದಪಾರಂಗತನೂ, ಶಾಸ್ತ್ರಜ್ಞನೂ ಆದ ಒಬ್ಬ ಬ್ರಾಹ್ಮಣನು, ತನ್ನ ಪತ್ನೀಪುತ್ರರೊಂದಿಗೆ ವಾಸಮಾಡಿಕೊಂಡಿದ್ದನು. ವೇದಶಾಸ್ತ್ರಗಳ ಜ್ಞಾನವು ಆತನ ನಡತೆಯಲ್ಲಿ ಯಾವ ಮಾರ್ಪಾಡನ್ನೂ ಉಂಟುಮಾಡಲು ಸಮರ್ಥವಾಗಲಿಲ್ಲ. ಆತನ ಗುಣಗಳು ವಿಪರೀತವಾದುವು. ಪರದ್ರವ್ಯಾಪೇಕ್ಷೆ ಪರನಿಂದೆಗಳೂ, ದುಷ್ಟರಲ್ಲೂ ನೀಚರಲ್ಲೂ ಸ್ನೇಹವೂ ಆತನಲ್ಲಿ ವಿಶೇಷವಾಗಿದ್ದುವು. ಆತನು ಸ್ತ್ರೀಲೋಲನೂ, ದಯಾದಾಕ್ಷಿಣ್ಯಾದಿಗಳನ್ನರಿಯದ ಮೂರ್ಖನೂ ಆಗಿದ್ದನು. ಮಾತಾಪಿತೃಗಳಲ್ಲಿ ಭಕ್ತಿಯಿಲ್ಲದೆ, ತನಗೆ ಲಭ್ಯವಾಗಿದ್ದ ಶಾಸ್ತ್ರಜ್ಞಾನವನ್ನು ದ್ರವ್ಯಸಂಪಾದನೆಗಾಗಿ ಉಪಯೋಗಿಸುತ್ತ, ಧರ್ಮವಿಚಾರದಲ್ಲಿ ಲೇಶಮಾತ್ರವೂ ಶ್ರದ್ಧಾಭಕ್ತಿಗಳಿಲ್ಲದೆ ಪರಮನಿಷ್ಠುರಿಯಾಗಿದ್ದನು. ಆತನ ಪತ್ನಿಯೊಬ್ಬಳು, ಅತಿಶಯ ಕಪಟಿಯೂ, ಕರ್ಕಶಿಯೂ, ಅಸೂಯಾಗುಣವುಳ್ಳವಳೂ ಆಗಿದ್ದು, ತನ್ನ ನಗೆ ನೋಟ ಚಾತುರ್ಯಗಳಿಂದ ಸ್ತ್ರೀಲೋಲನಾಗಿದ್ದ ತನ್ನ ಗಂಡನನ್ನು ವಶಪಡಿಸಿಕೊಂಡು, ತನ್ನ ಆಜ್ಞೆಗೆ ಲೇಶಮಾತ್ರವೂ ವಿರುದ್ಧವಾಗಿ ನಡೆಯದಂತೆ ಏರ್ಪಡಿಸಿಕೊಂಡಿದ್ದಳು. ಸದಾ ಪರರ ದೋಷಗಳನ್ನು ಕಂಡುಹಿಡಿದು ಆಕ್ಷೇ

ಪಿಸುತ್ತ, ನಿಂದಿಸುತ್ತ, ನೆರೆಹೊರೆಯುವರಲ್ಲಿ ಪ್ರಾಪ್ತವಾದ ವೈಮನಸ್ಯಕ್ಕೆ ಗೊಬ್ಬರ ನೀರುಗಳನ್ನೊದಗಿಸಿ ಬೆಳೆಯಿಸಿ, ಅವರು ಕಲಹಮಾಡುತ್ತಿದ್ದರೆ, ನೋಡಿ ವಿನೋದಗೊಳ್ಳುತ್ತ ಇರುತ್ತಿದ್ದಳು. ದಯಾವಿಹೀನಳೂ ಕಠಿನಾತ್ಮಳೂ ಆದ ಅವಳ ಆ ಮನೆಯಲ್ಲಿ ದಾನಧರ್ಮಪರೋಪಕಾರಗಳೆಂಬಿವು, ಇಣಿಕಿನೋಡಲೂ ಅವಕಾಶವಿಲ್ಲದಂತೆ ಓಡಿಹೋದುವು. ಈ ದಂಪತಿಗಳಲ್ಲಿ ಕೆಲವು ಕಾಲದಮೇಲೆ ಒಬ್ಬ ಪುತ್ರನುದಯಿಸಿದನು. ವಿದ್ಯಾವಂತನಾದ ತಂದೆಯು ತನ್ನ ಮಗನಿಗೆ ಯುಕ್ತವಯಸ್ಸಿನಲ್ಲಿ ಅಕ್ಷರಾಭ್ಯಾಸಮಾಡಿಸಿ, ತನಗೆ ಲಭ್ಯವಾಗಿದ್ದ ಕಾವ್ಯನಾಟಕ ಅಲಂಕಾರಶಾಸ್ತ್ರಾದಿ ಸಾಹಿತ್ಯಭಾಗದಲ್ಲೂ, ಪುರಾಣೇತಿಹಾಸಗಳಲ್ಲೂ ಅವನನ್ನು ಪ್ರವೀಣನನ್ನಾಗಿ ಮಾಡಿದನು. ಗಿಣಿಯು ಪಾಠಮಾಡಿದಂತೆ ಅವನೂ, ಹೇಳ್ಕೊಂಡ ಗ್ರಂಥಗಳನ್ನು ಪಾಠಮಾಡಿದನು ಮಾತ್ರವಲ್ಲದೆ, ಅವುಗಳ ಅಧ್ಯಯನದಿಂದ ಅವನ ಮನಸ್ಸಿನಮೇಲೇನೂ ಪರಿಣಾಮವಾಗಲಿಲ್ಲ. ತಂದೆಯಂತೆಯೇ ಮಗನೂ ಸಹ, ಆ ವಿದ್ಯೆಯಿಂದ ಜ್ಞಾನ ಸಂಪಾದಿಸಿಕೊಳ್ಳುವುದಕ್ಕೆ ಬದಲಾಗಿ, ಅದನ್ನು ಧನ ಸಂಪಾದನೆಯ ಸಾಧನವನ್ನಾಗಿ ಮಾಡಿಕೊಂಡು ಹೇಗೆ ವಿಶೇಷ ಅರ್ಥೋಪಾರ್ಜನೆ ಮಾಡಬಹುದು, ಎಂಬೀ ಯೋಚನೆಯಲ್ಲೇ ಮಗ್ನನಾದನು. ಧನಾಶಾ ರತರಾದ ಆ ತಂದೆ ಮಕ್ಕಳು, ಅಷ್ಟು ವಿದ್ಯಾವಂತರಾಗಿದ್ದರೂ, ಅವರ ವಿದ್ಯಾ ಬುದ್ಧಿಗಳು, ಲೇಶಮಾತ್ರವೂ ಪರೋಪಕಾರಕ್ಕೆ ವಿನಿಯೋಗವಾಗದೆ, ಸ್ವಾರ್ಥಸಾಧನೆಗೇ ಮೀಸಲಾಗಿದ್ದಂತೆ ಆಗಿಹೋದುವು. ಅಷ್ಟು ಮಾತ್ರವೇ ಅಲ್ಲ-ಹುತ್ತದಲ್ಲಿದ್ದ ಸರ್ಪದಂತೆ ಅವರಿಗಿದ್ದ ಆ ವಿದ್ಯಾಬಲವು ಪರರಿಗೆ ಉಪದ್ರವಕಾರಿಯೂ ಆಗಿ ಪರಿಣಮಿಸಿತು. ಅವರ ಸಂಗಡ ಯಾರೂ ಮಾತನಾಡಲೂ ವ್ಯವಹಾರಮಾಡಲೂ ಅಂಜುವಂತಾಯಿತು. ಹೀಗೆ ವಿದ್ಯಾಬುದ್ಧಿಗಳನ್ನು ಗಳಿಸಿದವರಾದರೂ ಅವು ಅವರ ಗುಣ ನಡತೆಗಳನ್ನು ಮಾರ್ಪಡಿಸಲಿಲ್ಲವಾದುದರಿಂದ ಅವು ಸತ್ಫಲವನ್ನು ಕೊಡುವುದಕ್ಕೆ ಬದಲಾಗಿ ಅಗಾಧ ದುಷ್ಫಲಗಳನ್ನು ಕೊಡುವಂತಾದುವು. ಅವರ ಬುದ್ಧಿ ಶಕ್ತಿಯೊಂದಿಗೆ ಹೃದಯವೂ ಬೆಳೆಯಲಿಲ್ಲವಾದುದರಿಂದ ಅವರ ಸಕಲ ವಿಧ ಅಭಿವೃದ್ಧಿಯೂ ಪರೋಪಕಾರಕ್ಕಾಗಿಯಲ್ಲ - ಪರಪೀಡನೆಗಾಗಿಯೇ ಉಪಯೋಗವಾಗುವಂತಾಯಿತು. ಇವರದೊಂದು ಕುಟುಂಬವು ಕರವೀರಪುರದಲ್ಲಿ ಹೀಗೆ

ಜೀವಿಸಿಕೊಂಡಿರಲು, ಇತ್ತ ಬೇರೊಂದು ಊರಿನಲ್ಲಿದ್ದ ಮತ್ತೊಂದು ಕುಟುಂಬದ ವಿಚಾರವನ್ನು ಗಮನಿಸೋಣ !

ಭಕ್ತಜನ ರಕ್ಷಣೆಗಾಗಿ ಶ್ರೀಪಾಂಡುರಂಗವಿಠ್ಠಲಸ್ವಾಮಿಯು, ಫಂಡರಾಪುರ ಕ್ಷೇತ್ರದಲ್ಲಿ ನೆಲೆಸಿರುವನಷ್ಟೆ! ಆತನ ಕೃಪಾಛತ್ರವನ್ನಾಶ್ರಯಿಸಿ, ಅನೇಕಾನೇಕ ಮಂದಿ ಭಕ್ತರು, ಆ ಊರಿನಲ್ಲೂ ಅದರ ಸಮೀಪದ ಊರುಗಳಲ್ಲೂ ವಾಸಿಸುತ್ತಿದ್ದರು. ಆ ಸ್ವಾಮಿ ಸಾನ್ನಿಧ್ಯದಿಂದ ಆ ಕ್ಷೇತ್ರದಲ್ಲೂ, ಅದರ ಸುತ್ತುಮುತ್ತಿನ ಊರುಗಳಲ್ಲೂ, ಸಾಧುಸಜ್ಜನರೂ ಭಕ್ತಶಿಖಾಮಣಿಗಳೂ ಹಲವರು ವಾಸಿಸಿ, ಸ್ವಾಮಿ ಸೇವೆಯಿಂದ ಜನ್ಮಸಾರ್ಥಕ್ಯವನ್ನುಂಟು ಮಾಡಿಕೊಳ್ಳುತ್ತಿದ್ದರು. ಫಂಡರಾಪುರದ ಸಮೀಪದಲ್ಲಿದ್ದ ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣನು ಪತಿವ್ರತೆಯಾದ ತನ್ನ ಪತ್ನಿಯೊಂದಿಗೆ ದೇವ ಬ್ರಾಹ್ಮಣ ಪೂಜಾನಿರತನಾಗಿ ವಾಸಮಾಡಿಕೊಂಡಿದ್ದನು. ಆತನಿಗೆ ಬಹುಕಾಲಗಳವರೆಗೆ ಮಕ್ಕಳಿಲ್ಲದೆ, ಕೊನೆಗೆ ಆ ಪತಿಪತ್ನಿಯರಿಬ್ಬರೂ ವಂಶೋದ್ಧಾರಕ್ಕಾಗಿ ಒಂದು ಸಂತಾನವನ್ನು ಕರುಣಿಸೆಂದು ಹಲವುಕಾಲ ಮಾಡಿಕೊಂಡ ಹರಕೆಯನ್ನು ಶ್ರೀ ವಿಠ್ಠಲಸ್ವಾಮಿಯು ಲಾಲಿಸಿ ಅನುಗ್ರಹಿಸಿದನೋ ಎಂಬಂತೆ, ಆ ಸಾಧ್ವಿಯ ಉದರದಲ್ಲಿ ಒಂದು ಕನ್ಯಾರತ್ನವು ಜನನವಾಯಿತು. ಅಪೂರ್ವವಾಗಿ ಜನಿಸಿದ ಆ ಕನ್ಯಾರತ್ನವನ್ನು ಗಂಡಹೆಂಡಿರಿಬ್ಬರೂ ಅತಿಶಯ ಪ್ರೇಮಾದರಗಳಿಂದ ರಕ್ಷಿಸುತ್ತ, ಅದರ ಬಾಲಲೀಲೆಗಳನ್ನು ಕಂಡು ಆನಂದಿಸುತ್ತ, ಬಗೆಬಗೆಯ ವಸ್ತ್ರಾಭರಣಗಳಿಂದ ಸಿಂಗರಿಸಿ ಆ ತಮ್ಮ ಮುದ್ದುಮೋಹನೆಯನ್ನು ಮುತ್ತಿಟ್ಟು ದಣಿವು ತೀರದೆ, ತಮ್ಮ ಸಮಾನ ಭಾಗ್ಯಶಾಲಿಗಳಾರು ಎಂದು ಸಂತೋಷ ಪರವಶರಾಗಿ ಓಲಾಡುತ್ತಿದ್ದರು. ಆ ತಮ್ಮ ಕನ್ಯಾಮಣಿಗೆ ಸಖೂಬಾಯಿ ಎಂದು ಹೆಸರಿಟ್ಟು, ಕ್ಷಣಮಾತ್ರವೂ, ಆ ತಮ್ಮ ಪ್ರೇಮಪುತ್ರಿಯನ್ನು ಬಿಟ್ಟಗಲಲಾರದೆ, ಕಣ್ಣನ್ನು ರಕ್ಷಿಸಿಕೊಂಡಿರುವ ರೆಪ್ಪೆಯಂತೆ, ಆ ಕನ್ಯೆಯನ್ನು ಅಮೌಲ್ಯನಿಧಿಯೋ ಎಂಬಂತೆ ಸದಾ ರಕ್ಷಿಸಿಕೊಂಡಿದ್ದರು.

ಸಾಧುಸಜ್ಜನರ ವಂಶದಲ್ಲಿ ಜನಿಸಿದ ಮಕ್ಕಳು ಸದ್ಗುಣ ಸದಾಚರಣೆಗಳನ್ನು ಕಲಿತು, ಸುಗುಣಮಂಡಿತರಾಗುವುದರಲ್ಲಿ ಸಂದೇಹವೇನು? ಸಖೂಬಾಯಿಯು ಬಾಲ್ಯದಿಂದಲೂ, ತನ್ನ ತಾಯಿಯ ನಯನುಡಿ, ದಯಾವಿನಯ

ಗಳು, ಭಕ್ತಿಭಗವದಾರಾಧನೆಗಳು ಇವುಗಳನ್ನು ಕಂಡು ಹೇಳದೆಯೇ ಅನೇ
ಕ ಸಂಗತಿಗಳನ್ನು ಗ್ರಹಿಸಿದಳು. ತಾಯಿಯು ಗೋಪೂಜೆ ತುಳಸಾರ್ಚನೆ
ಗಳನ್ನು ಮಾಡುವಾಗ ಎದುರಿಗಿದ್ದು ತಾನೂ ಪೂಜೆ ನಮಸ್ಕಾರಗಳನ್ನು
ಮಾಡುವಳು. ಧಾರ್ಮಿಕ ಹಾಡುಹಸೆಗಳನ್ನು ಹೇಳಿಸಿಕೊಳ್ಳುವಳು. ಇರು
ವೆಯ ಗೂಡುಗಳಿಗೆ ಸಕ್ಕರೆರವೆಗಳನ್ನು ಚೆರೆಸಿಹಾಕದೆ, ಹಕ್ಕಿಗಳಿಗೆ ಕಾಳು
ಕಡ್ಡಿಗಳನ್ನು ಕೊಡದೆ, ಹಸುವಿಗೂ ಕರುವಿಗೂ ಹುಲ್ಲುನೀರುಗಳನ್ನೀಯ
ದೆ, ಆ ಬಾಲಿಕೆಯು ಒಂದು ದಿನವೂ ಆಹಾರಗ್ರಹಣ ಮಾಡಿದುದಿಲ್ಲ.
ಮನೆಯಲ್ಲಿದ್ದ ವಿಠೋಬನ ಪಾವನಮೂರ್ತಿಯನ್ನು ಪ್ರತಿದಿನವೂ ಪೂಜಿಸಿ,
ಮನಸಾರೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕದೆ ಏನೊಂದು ಪದಾರ್ಥವ
ನ್ನೂ ತಿನ್ನುತ್ತಿರಲಿಲ್ಲ. ದಿನದಿನಕ್ಕೆ ಈ ವಿಧವಾದ ಭಕ್ತಿಭಾವನೆಯು ಅವ
ಳಲ್ಲಿ ಖಚಿತವಾಗಿ ಮನೆಮಾಡಿಕೊಳ್ಳತೊಡಗಿತು. ಹಾಡು ಹಸೆ, ಕೆಲಸ ಬೊ
ಗಸೆ, ಕಸೂತಿ ರಂಗವಲ್ಲಿ ಮುಂತಾದ ಕುಶಲಕಲೆಗಳನ್ನು ಕಲಿತು, ಮನೆಯ
ಸಕಲ ಕೆಲಸಗಳಲ್ಲೂ ತನ್ನ ತಾಯಿಗೆ ಸಹಾಯಕಳಾಗುತ್ತ, ಬೆಳೆದು ಸಖೂ
ಬಾಯಿಯು ಹತ್ತು ಹನ್ನೆರಡು ವರ್ಷಗಳ ಬಾಲಿಕೆಯಾದಳು.

ಮೇಲೆಹೇಳಿದ ಕರವೀರಪುರದ ಬ್ರಾಹ್ಮಣ ಪಂಡಿತನು, ಆ ವೇಳೆಗೆ
ಸರಿಯಾಗಿ ತನ್ನ ಮಗನಿಗೆ ವಿವಾಹಮಾಡಲುದ್ದೇಶಿಸಿ, ಕನ್ಯೆಗಾಗಿ ಅಲ್ಲಲ್ಲಿ
ಹುಡುಕಲಾರಂಭಿಸಿದ್ದನು. ಅವನ ಪತ್ನಿಯ ಗುಣಗಳು ಆ ಊರಲ್ಲಿ ಜನ
ಜನಿತವಾಗಿದ್ದುದರಿಂದ ಆ ಊರಿನವರು ಅವರ ಮನೆಗೆ ಕನ್ಯಾಪ್ರದಾನ
ಮಾಡಲು ಹೆದರುತ್ತಿದ್ದರು. ತಮ್ಮ ಊರಲ್ಲಿ ಕನ್ಯೆ ಸಿಕ್ಕದಿರಲು, ಬ್ರಾಹ್ಮ
ಣನು ಕನ್ಯಾನ್ವೇಷಣೆಗಾಗಿ ಹೊರಟು ಹತ್ತಿರದ ಊರುಗಳಲ್ಲಿ ವಿಚಾರಿಸು
ತ್ತಾ ಮಾರ್ಗವಶವಾಗಿ, ನಮ್ಮ ಸಖೂಬಾಯಿಯು ತನ್ನ ತಾಯಿತಂದೆಗ
ಳೊಂದಿಗೆ ವಾಸಿಸಿದ್ದ ಗ್ರಾಮಕ್ಕೂ ಬಂದನು. ಅಲ್ಲಲ್ಲಿ ವಿಚಾರಿಸಲು, ದೊ
ಡ್ಡ ವಿದ್ವಾಂಸನಾದುದರಿಂದ, ಆತನ ಗುಣನಡತೆಗಳನ್ನು ತಿಳಿಯದಿದ್ದವರು,
ಬಹುಗೌರವದಿಂದ ಕಂಡು ಉಪಚರಿಸಿ, ವಿವಾಹಯೋಗ್ಯ ವಯಸ್ಕಳಾಗಿದ್ದ
ಸಖೂಬಾಯಿಯ ಮನೆಯನ್ನೇ ತೋರಿಸಿದರು. ವಿದ್ವಾಂಸನು ಮಧ್ಯಾಹ್ನಕಾ
ಲಕ್ಕೆ ಆ ಮನೆಗೆ ಬಂದು, ಊಟ ಉಪಚಾರಗಳೆಲ್ಲವೂ ಆದಮೇಲೆ ಆ ಬಾಲಿ

ಕೆಯ ಅಂದಚಂದಗಳನ್ನು ನೋಡಿ ಮೆಚ್ಚಿ ತನ್ನ ಮಗನಿಗೆ ಸಖೂಬಾಯಿಯನ್ನು ಕೊಟ್ಟು ವಂಶೋದ್ಧಾರ ಮಾಡಬೇಕೆಂದು ಕೇಳಿಕೊಂಡನು. ಪಾಪ ಆ ಕನ್ಯಾಪಿತೃವು, ನಗರವಾಸದ ಆಡಂಬರಾದಿಗಳನ್ನು ಕಂಡವನಲ್ಲವಾದುದರಿಂದ, ಪಂಡಿತನ ಜರತಾರಿಯ ಶಾಲು, ರೇಷ್ಮೆಯ ವಸ್ತ್ರಗಳು ಮುಂತಾದುವೂ ಆಡಂಬರದ ಸಂಸ್ಕೃತ ಮಾತುಗಳೂ ಆತನನ್ನು ಬೆರಗುಗೊಳಿಸಿದುವು. ಸಖೂಬಾಯಿಯ ತಾಯಿಯೂ ಸಹ, ಆ ಪಂಡಿತನ ಉಂಗುರಗಳು ಹಸ್ತಕಡಗ, ಕರ್ಣಾಭರಣ ಮುಂತಾದುವುಗಳನ್ನು ಕಂಡು, -'ವರನ ಮನೆಯವರು ತುಂಬಾ ಧನವಂತರು. ಪಾಪ, ಬಡಹುಡುಗಿ ಸಖೂಬಾಯಿಯು ದರಿದ್ರರಾದ ನಮ್ಮಲ್ಲಿ ಹುಟ್ಟಿ ಏನೂ ಸುಖಪಡಲಿಲ್ಲ. ಈ ದೊಡ್ಡವರ ಮನೆಯನ್ನು ಸೇರಿ, ಅಲ್ಲಾದರೂ ಉಂಡುತಿಂದು ಉಟ್ಟುತೊಟ್ಟು ಸುಖವಾಗಿರಲಿ, ಎಂದು ಭಾವಿಸಿದಳು. ಗಂಡಹೆಂಡಿರಿಬ್ಬರೂ, ಆ ವಿದ್ವಾಂಸನ ಮಗನಿಗೆ ತಮ್ಮ ಕನ್ಯೆ ಸಖೂಬಾಯಿಯನ್ನು ವಧುವಾಗಿ ಕೊಡಲು ಒಪ್ಪಿದುದಾಯಿತು. ಪಂಡಿತನು ವಿವಾಹ ಲಗ್ನವನ್ನು ನಿಶ್ಚಯಮಾಡಿಕೊಂಡು, ತನ್ನ ಊರಿಗೆ ಪ್ರಯಾಣಮಾಡಿ, ಮುಂದೆ ಕೆಲವು ದಿನಗಳೊಳಗಾಗಿಯೇ, ತನ್ನ ಪತ್ನೀ ಪುತ್ರ, ಬಂಧು ಬಾಂಧವರೊಂದಿಗೆ, ಕನ್ಯಾ ಗೃಹಕ್ಕೇ ಹೊರಟು ನಡೆದು, ಮುಹೂರ್ತಸಾಧನೆ ಮಾಡಿಕೊಂಡನು. ವಿವಾಹವು ವಿಧ್ಯುಕ್ತರೀತಿಯಲ್ಲಿ ನಡೆದುಹೋಯಿತು. ತಾಯಿಗೆ, ತನ್ನ ಮಗಳು ಧನವಂತರ ಮನೆಯನ್ನು ಸೇರಿದಳಲ್ಲಾ ಎಂಬ ಸಂತೋಷ. ತಂದೆಗೆ ತನ್ನ ಅಳಿಯನು ವಿದ್ವಾಂಸನಲ್ಲಾ ಎಂಬ ಸಂತೋಷ. ಬಡವರ ಮನೆಯಲ್ಲಿ ಹುಟ್ಟಿ ಬೆಳೆದ ಕನ್ಯೆಯು ವಿವಾಹದಿಂದಲಾದರೂ ಉತ್ತಮ ಗೃಹವನ್ನು ಸೇರಿ ಸುಖಸಂತೋಷಗಳನ್ನನುಭವಿಸಲಿ ಎಂದು, ಆ ತಾಯಿ ತಂದೆಗಳು ಬಯಸಿದರು. ಪಾಪ; ಇದರಲ್ಲಿ ಅಲೌಕಿಕವೇನಿದೆ ?



## ಅಧ್ಯಾಯ ೨ "ವಿಠ್ಠಲವಿಗ್ರಹ"

ವಿವಾಹಮಂಗಳ ಕಾರ್ಯವು ಮುಗಿದ ತರುವಾಯ, ವರನ ಕಡೆಯುವರು ಪ್ರಯಾಣಮಾಡಿ ತಮ್ಮ ಊರು ಸೇರಿಕೊಂಡರು. ಪಂಡಿತನು ಮುಂದೆ ಒಂದು ಮುಹೂರ್ತವನ್ನು ಗೊತ್ತುಮಾಡಿ, ನವವಧುವಾದ ಸಖೂಬಾಯಿಯನ್ನು ಗೃಹಪ್ರವೇಶಮಾಡಿಸಿಕೊಳ್ಳುವುದಕ್ಕಾಗಿ ಕರೆತರಬೇಕೆಂದು ಏರ್ಪಡಿಸಿಕೊಂಡನು. ಕನ್ಯೆಯ ಮಾತಾಪಿತೃಗಳು, ಮಗಳೊಂದಿಗೆ ಪ್ರಯಾಣಮಾಡಿ, ಕರವೀರಪುರಕ್ಕೆ ಬಂದು ಬೀಯಗರು ತಮಗಾಗಿ ಬಿಡಿಸಿಟ್ಟಿದ್ದ ಬಿಡದಿಯಲ್ಲಿ ಇಳಿದು ಯುಕ್ತರೀತಿಯಿಂದ ಉಪಚರಿಸಲ್ಪಟ್ಟು, ಗೃಹ ಪ್ರವೇಶ ಶಾಸ್ತ್ರವನ್ನು ಪೂರೈಸಿಕೊಟ್ಟು, ಪುನಃ ತಮ್ಮ ಗ್ರಾಮಕ್ಕೆ ಪ್ರಯಾಣಮಾಡಿದರು. ಸಖೂಬಾಯಿಯು ಮಾತ್ರ ನಾಲ್ಕುದಿನಗಳ ಮಟ್ಟಿಗೆಂದು ತನ್ನ ಅತ್ತೆಯ ಮನೆಯಲ್ಲೇ ನಿಂತಳು.

ವಿವಾಹ ಗೃಹಪ್ರವೇಶ ಮುಂತಾದ ವಿಶೇಷ ಸಮಯಗಳಲ್ಲಿ ಎಲ್ಲರೂ ಸಹಜಕ್ಕೆ ಸ್ವಲ್ಪ ಹೆಚ್ಚೆನಿಸುವಂತೆಯೇ, ಊಟ ಉಡಿಗೆತೊಡಿಗೆ ಮಾತುಕಥೆಗಳಲ್ಲಿ ವರ್ತಿಸುವುದರಿಂದ ಯಾರೊಬ್ಬರ ಗುಣನಡತೆಗಳು ಸಹಜಸ್ವರೂಪದಿಂದ ಆ ಸಂದರ್ಭಗಳಲ್ಲಿ ಕಂಡುಬಾರವು. ಈವರೆಗೆ ತನ್ನ ಅತ್ತೆಯ ಮನೆಯವರೊಂದಿಗೆ ಅಂತಹ ವಿಶೇಷ ಸಂದರ್ಭಗಳಲ್ಲಿ ಮಾತ್ರವೇ ಬೆರೆತಿದ್ದಳಾದುದರಿಂದ ಸಖೂಬಾಯಿಗೆ ಅವರ ಸಹಜ ಗುಣನಡತೆಗಳ ಪರಿಚಯವಾಗಿರಲಿಲ್ಲ. ಅಂತಹ ಶುಭಕಾರ್ಯಗಳ ವಿಶೇಷಸಂಗತಿಗಳೆಲ್ಲವೂ ಮುಗಿದು ದಿನಚರಿಯ ಸರ್ವಸಾಮಾನ್ಯ ಸ್ಥಿತಿಯು ಪ್ರಾಪ್ತವಾದೊಡನೆಯೇ, ಆ ಮನೆಯ ವಿಚಾರದಲ್ಲಿ ಮೊದಲನೆಯದಾಗಿ, ಸಖೂಬಾಯಿಯ ದೃಷ್ಟಿಗೆ ಗೋಚರವಾದ ಸಂಗತಿಯೆಂದರೆ, ತನ್ನ ತಾಯಿಯ ಮನೆಯಂತೆ, ಅಲ್ಲಿ ದೇವರ ಪೂಜೆ, ಅತಿಥಿಸತ್ಕಾರ, ದಯಾಧರ್ಮ ಮುಂತಾದುವುಗಳಿಗೆ ಪ್ರಥಮಸ್ಥಾನವಿಲ್ಲವೆಂಬುದು! ಪ್ರಥಮಸ್ಥಾನಮಾತ್ರವಲ್ಲ - ಸ್ಥಾನವೇ ಇಲ್ಲವೆಂಬುದು ಬರುಬರುತ್ತ ಅವಳ ಗಮನಕ್ಕೆ ಬರತೊಡಗಿತು. ಆ ಮನೆಯಲ್ಲಿ ಭಿಕ್ಷುಕರಿಗೆ ಭಿಕ್ಷೆ ದೊರೆಯದು. ಆರ್ತರಾಗಿ ಬಾಗಿಲವರೆಗೆ ಬಂದು ಹಿಡಿ ಕೂಳಿಗಾಗಿ ಯಾಚಿಸುವ ಕುರುಡ ಕುಂಟರನ್ನು, ಬೈದು ಭಂಗಿಸಿ, ಅಪಹಾಸ್ಯಮಾಡಿ ಹೊರಡಿಸುವ

ನೀಚಗುಣವೂ ವಿದ್ಯಾವಂತರೆಂದು ಬೀಗುವ ಆ ಜನಗಳಲ್ಲಿದೆಯೆಂಬುದು ಅವಳ ಗಮನಕ್ಕೆ ಬಂದಿತು. ತನ್ನ ತಂದೆಯ ಮನೆಯ ಪದ್ಧತಿಯಂತೆ, ಒಂದೆರಡು ಬಾರಿ, ಭಿಕ್ಷೆಹಾಕಿದುದಕ್ಕಾಗಿ, ತನ್ನ ಅತ್ತೆಯಿಂದ ಆ ಬಾಲಿಕೆಗೆ ವಾಕ್ಪ್ರಹಾರಗಳೂ ಆದುವು. ಸಖೂಬಾಯಿಯು ಆ ಸೂಕ್ಷ್ಮವನ್ನು ತಿಳಿದು ಕೊಂಡು ಮುಂದೆ ಸುಮ್ಮನಿದ್ದುಬಿಡುವಳು. ಬಂದವರಿಗೆ ಭಿಕ್ಷೆಯಿಲ್ಲ ಮುಂದಕ್ಕೆಹೋಗಿರೆಂದು ಹೇಳಿಕಳುಹಿಸಬೇಕಾಗಿಬಂದ ಸಂದರ್ಭದಲ್ಲಿ ಆ ಬಾಲಿಕೆಗೆ ಕಣ್ಣಲ್ಲಿ ನೀರುಬರುವುದು. ಆದರೆ ಮಾಡುವುದೇನು!

ಇದಕ್ಕಿಂತಲೂ, ಆಕೆಯ ಮನಸ್ಸಿಗೆ ಹೆಚ್ಚು ತಾಪವನ್ನುಂಟುಮಾಡಿದುದು, ದಿನವೂ ದೇವರ ಪೂಜೆಯಿಲ್ಲದೆ, ಭಜನೆ ಪ್ರಾರ್ಥನೆಗಳಿಲ್ಲದೆ, ನೈವೇದ್ಯ, ಅತಿಥಿಸತ್ಕಾರಗಳಿಲ್ಲದೆ, ತಮ್ಮ ಉದರಂಭರಣಕ್ಕಾಗಿ ಆಹಾರವನ್ನು ಬೇಯಿಸಿಕೊಂಡು ತಿನ್ನುವ ಆ ಮನೆಯವರ ಸ್ವಯಂಪ್ರತಿಷ್ಠಾಭಾವನೆಯು. ತರ್ಕವಾದದಿಂದ ಜಗತ್ತು ಪಂಚಭೂತಗಳ ಸಂಬಂಧದಿಂದ, ಅರ್ಥಾತ್ ಪ್ರಕೃತಿಯಿಂದ ಉತ್ಪತ್ತಿಯಾಗತಕ್ಕುದಲ್ಲದೆ, ಅಲ್ಲಿ ದೇವರೆಂಬ ಶಕ್ತಿ ವಿಶೇಷದ ಸಹಾಯವು ಅನಾವಶ್ಯಕವೆಂದು ನಿರ್ಧರಿಸಿದ್ದ ಪಂಡಿತರಿಗೆ, ದೇವರು ಮಾತ್ರವಲ್ಲ - ಧರ್ಮವೂ ಹತ್ತಿರ ಸೇರದಲ್ಲವೆ! ಸಖೂಬಾಯಿಗೆ ಚಿಕ್ಕಂದಿನಿಂದ ಬೆಳೆದುಬಂದ ಅಭ್ಯಾಸದಿಂದ ಪೂಜೆ ಪ್ರಾರ್ಥನೆಗಳಾಗದೆ, ದೇವರಿಗೆ ನಿವೇದನವಾಗದೆ ಇದ್ದ ಅನ್ನವನ್ನು ತಿನ್ನಬೇಕೆಂದರೆ ಅಸಹ್ಯವೆಂಬಂತೆ ತೋರುವುದು. ಮನೆಯಲ್ಲಿ ಹಿರಿಯರೇ ಆಯಾಸಂಗತಿಗಳನ್ನು ಗಮನಿಸದೆ ಇರುವಾಗ, ಇನ್ನೂ ಹುಡುಗಿಯಾದ ತಾನು ಅವುಗಳನ್ನು ಕುರಿತು ಹಂಬಲಿಸಿದರೆ ಆಗುವುದೇನೆಂದು ಸುಮ್ಮನಿದ್ದಳು. ತನ್ನ ತಾಯಿಯು ಹೇಳಿಕೊಟ್ಟಿದ್ದ ಭಗವದ್ಗುಣವರ್ಣನಾ ರೂಪವಾದ ಹಾಡುಹಸೆಗಳನ್ನೂ, ತಂದೆಯು ಕಲಿಸಿದ್ದ ಸ್ತೋತ್ರಪಾಠಗಳನ್ನೂ ಹೇಳಿಕೊಳ್ಳಲು ಸಹ ಅವಕಾಶ ದೊರೆವಂತಿರಲಿಲ್ಲ. ಮನಸ್ಸಿಗೆ ಬಹು ಬೇಸರ ತೋರಿತು. ಬೆಳಗಾದರೆ ಮಧ್ಯಾಹ್ನವಾದರೆ, ಅವರಿವರಿಂದ ಬರಬೇಕಾದ ದುಡ್ಡುಕಾಸುಗಳ ಲೆಕ್ಕಾಚಾರಗಳು, ಭೂಮಿ ಕಾಣಿ, ವೃತ್ತಿ ವ್ಯವಹಾರದ ಮಾತುಕಥೆಗಳು, ಆ ಸಂಬಂಧದಲ್ಲಿ ಲೆಕ್ಕ ಮಿತಿಯಿಲ್ಲದಷ್ಟು, ಪರನಿಂದೆ - ಅಪಹಾಸ್ಯಗಳು, ಅವುಗಳಲ್ಲಿ ತಮ್ಮ ಪಕ್ಷವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ,

ಸುಳ್ಳುಸಾಕ್ಷಿ ಮುಂತಾದುವುಗಳನ್ನು ಸೃಷ್ಟಿಸುವ ಗುಪ್ತಾಲೋಚನೆಗಳು, ಒಂದಿಗೇ ಸ್ವಯಂ ಪ್ರತಿಷ್ಠೆ, ಇವುಗಳನ್ನು ಕೇಳಿ ಕೇಳಿ ಬಾಲಿಕೆ ಸಖೂಬಾಯಿಗೆ ಮನಸ್ಸು ಬಹು ನೊಂದುಹೋಯಿತು. ಮನಸ್ಸಿಗೆ ಆಪ್ಯಾಯಮಾನವಾಗಿ ದಿನಕ್ಕೊಂದು ಬಾರಿಯಾದರೂ ಭಗವಂತನ ನಾಮೋಚ್ಚಾರಣೆ, ಸ್ತೋತ್ರಪಠನೆ, ಭಕ್ತಭಾಗವತರ ಕಥಾಪ್ರಶಂಸೆ ಮುಂತಾದ ಸವಿನುಡಿಯೇ ಕೇಳಬಾರದ ಆ ಮನೆಗೂ ನಿರ್ಜನವಾದ ಸ್ಮಶಾನಕ್ಕೂ ಏನು ಭೇದವೆಂದು ಆಕೆಯ ಮನಸ್ಸಿಗೆ ತೋರಿತು! ಒಂದೊಂದುವೇಳೆ ವ್ಯಸನವೂ ಕಳವಳವೂ ಮಿತಿಮೀರಿದರೆ, ಯಾರೂ ಇಲ್ಲದಿದ್ದ ಒಂದು ಮೂಲೆಯಲ್ಲಿ ಕುಳಿತು, ಸರಳಮನಸ್ಸಿನ, ಮೃದುಹೃದಯದ ತನ್ನ ತಂದೆತಾಯಿಗಳನ್ನೂ, ಅವರ ಆ ಬಡತನದ ಮನೆಯಲ್ಲೇ ನಿತ್ಯವೂ ಕರ್ಣಾನಂದದಾಯಕವಾಗಿ ನಡೆವ ಹರಿಭಜನೆ, ಸಾಧುಸೇವೆಗಳನ್ನೂ ನೆನೆಸಿಕೊಂಡು ಅತ್ತುಬಿಡುವಳು. ಅಷ್ಟರಲ್ಲಿ ಅತ್ತೆಯಾಗಲೀ ಗಂಡನಾಗಲೀ ಮಾವನಾಗಲೀ ಕಂಡರೆ ಎಲ್ಲಿ ಪ್ರಮಾದವುಂಟಾಗುವುದೋ ಎಂದು ಹೆದರಿ ಕಣ್ಣೊರಸಿಕೊಂಡು, ಅಲ್ಲಿಂದ ಎದ್ದು ಪುನಃ ಮನೆಗೆಲಸಕ್ಕೆ ತೊಡಗುವಳು.

ಹೀಗೆ ಕೆಲವು ದಿನಗಳು ಕಳೆದುವು. ಅತ್ತ ಸಖೂಬಾಯಿಯ ತಾಯಿಯು, ಋತುಮತಿಯಾಗುವ ವಯಸ್ಸಿನವಳಾದ ಸಖೂಬಾಯಿಯು ಆ ವೇಳೆಯಲ್ಲಿ ಅತ್ತೆಯ ಮನೆಯಲ್ಲಿರುವುದರ ಅನೌಚಿತ್ಯವನ್ನು ಕುರಿತು ತನ್ನ ಪತಿಗೆ ಹೇಳಿಕೊಂಡು, ಆಕೆಯನ್ನು ತೌರುಮನೆಗೆ ಕರೆತರಬೇಕೆಂದು ಪ್ರಾರ್ಥಿಸಿಕೊಂಡಳು. ಬ್ರಾಹ್ಮಣನು ಒಡನೆ ಹೊರಟು, ಕರವೀರಪುರಕ್ಕೆ ನಡೆದು ಮಗಳನ್ನು ಕಳುಹಿಸಿ ಕೊಡಬೇಕೆಂದು ಕೇಳಿದನು. ಧನಮದ ವಿದ್ಯಾಮದಗಳಿಂದ ಗರ್ವಿತರಾದ ಆಕೆಯ ಅತ್ತೆ ಮಾವಂದಿರು, ಅವಳನ್ನು ಕಳುಹಿಸಲು ಸ್ವಲ್ಪಕ್ಕೆ ಒಪ್ಪಲಿಲ್ಲ. –'ಹುಡುಗಿಯು ಬೆಳೆಯುವ ಈ ವಯಸ್ಸಿನಲ್ಲಿ ನಿಮ್ಮ ಮನೆಯಲ್ಲಿ ಏನು ಉಂಡು ತಿಂದು ಸುಖಪಟ್ಟಾಳು! ಇಲ್ಲೇ ಇದ್ದು ಬಿಡಲಿ. ಅಲ್ಲಿಗೆ ಬಂದು ಮಾಡಬೇಕಾದ ಮಹತ್ಕಾರ್ಯವೇನಿದೆ?' ಎಂದು ಮುಂತಾಗಿ ಹೇಳಿಬಿಟ್ಟರು. –'ಋತುಮತಿಯಾಗದ ಕನ್ಯೆಯು ಬಹುಕಾಲ ಗಂಡನಮನೆಯಲ್ಲಿರಬೇಕಾದ ಕರ್ತವ್ಯವಿಲ್ಲ. ನಾವು ಬಡವರು ನಿಶ್ಚಯ. ಆದರೆ ನಾವು ಹೆತ್ತಮಕ್ಕಳು ನಮಗೆ ಭಾರವೇ? ಬಳ್ಳಿಗೆ ಕಾಯಿ ಭಾರವೆನ್ನಿ

ಸೀತೆ?' ಎಂದು ಮುಂತಾಗಿ ಹೇಳಿದ ಲೌಕಿಕ ರೀತಿ ನೀತಿಗಳೊಂದೂ ಅವರ ಗಮನಕ್ಕೆ ಬರಲಿಲ್ಲ. ಕೊನೆಗೆ ಆ ತಂದೆಯು ಬೇಸತ್ತು, 'ಅಮ್ಮಾ, ನಿನ್ನನ್ನು ದಾನವಿಧಿಯಿಂದ ಬೇರೆಯವರ ಮನೆಗೆ ಕೊಟ್ಟುದಾಯಿತು. ಇನ್ನು ನಾನೇನು ಮಾಡಬಲ್ಲೆ? ನೀನು ಅವರ ಸ್ವತ್ತು. ನಿನ್ನ ದೈವದಲ್ಲಿದ್ದಂ ತಾಗಲಿ' ಎಂದು ಕಣ್ಣೀರಿಟ್ಟುಕೊಂಡು ಮಗಳನ್ನು ಅಲ್ಲೇಬಿಟ್ಟು ಹೊರಡ ಲನುವಾದನು.

ಸಖೂಬಾಯಿಗೆ ಆ ವೇಳೆಗೆ, ಭಗವದ್ಭಕ್ತಿಯೂ, ತದಂಗವಾದ ವೈರಾ ಗ್ಯವೂ ತಕ್ಕಷ್ಟುಹುಟ್ಟಿಗೆ ವೈಯುಂಡು ಬಿಟ್ಟಿದ್ದುದರಿಂದ, ತನ್ನ ವಿಧಿಗಾಗಿ ಪೆಚ್ಚಾಗಿ ಮರುಗದೆ - 'ತಂದೆಯೇ ವ್ಯಸನಪಡಬೇಡ. ಲೋಕದಲ್ಲಿ ಒಬ್ಬೊ ಬ್ಬರೂ ಅವರವರ ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸ ಬೇಕಲ್ಲವೆ? ನಾನು ಜನ್ಮಾಂತರದಲ್ಲಿ ಪಡೆದು ಬಂದ ಸುಖವನ್ನೋ ಕಷ್ಟವ ನ್ನೋ ನಾನೇ ಅನುಭವಿಸಬೇಕು. ಅದಕ್ಕಾಗಿ ನೀವು ಅಳಲಿ ಫಲವಿಲ್ಲ. ಅಮ್ಮನಿಗೂ ಸಮಾಧಾನ ಹೇಳಿ, ನಿಮ್ಮ ಮನೆಯಲ್ಲಿ ನನ್ನ ಹೆಸರಿನ ಒಬ್ಬ ನಿರ್ಭಾಗ್ಯೆಯು ಹುಟ್ಟಿದ್ದಳೆಂದುಕೊಂಡು ಸುಖವಾಗಿದ್ದುಬಿಡಿ' ಎಂದು ಹೇಳಿ ಮಾತಾಪಿತೃ ಸ್ನೇಹವು ಉಕ್ಕಿಬರಲು, ತಡೆಯಲಾರದೆ ಕುತ್ತಿಗೆಯ ನರಗಳು ಬಿಗಿದು ಬಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಆಕೆಯ ಅತ್ತೆಗೆ ಅದೂ ಸಹನೆಯಾಗಲಿಲ್ಲ. - 'ಇದೇನಿದು? ತುಂಬಿದಮನೆಯಲ್ಲಿ ತಂದೆಮಕ್ಕ ಳೊಂದಾಗಿ ಹೀಗೆ ಅಳುತ್ತಿದ್ದೀರಿ? ಈಗ ಆದದ್ದೇನು? ಹುಟ್ಟಾ ಬಡವರಾದ ನಿಮ್ಮ ಮನೆಯಲ್ಲಿದ್ದ ಹುಡುಗಿಯು, ಏನು ಉಂಡು ತಿಂದಾಳು, ಉಟ್ಟು ತೊಟ್ಟಾಳು ಎಂದುದಕ್ಕೆ ಇಷ್ಟು ದುಃಖಪಡಬೇಕೆ? ಈಗ ಯಾವ ಸುಖಕ್ಕೆಂ ದು ಮಗಳನ್ನು ಕರೆದೊಯ್ಯಬೇಕೆನ್ನುತ್ತೀರಿ' ಎಂದು ಮುಂತಾಗಿ ನಿಷ್ಠುರ ವಾದ ವಾಕ್ಯಗಳನ್ನು ನುಡಿದಳು. ಸಖೂಬಾಯಿಯ ತಂದೆಯು ಅದಕ್ಕೆ ಪ್ರತ್ಯುತ್ತರ ಕೊಡಲು ಬಯಸಲಿಲ್ಲ. - 'ಮಗೂ ಇನ್ನು ಚಿಂತಿಸಿ ಪ್ರಯೋ ಜನವಿಲ್ಲ. ನೀನು, ಮೊದಲನೆಯದಾಗಿ ಬಡವರಾದ ನಮ್ಮ ಮನೆಯಲ್ಲಿ ಜನಿ ಸಿದ್ದೇ ತಪ್ಪು-ಜನಿಸಿದೆಯಾದರೂ, ಧನವಂತರಾದ ಇವರ ಮನೆಯನ್ನು ಹೊ ಕ್ಕುದು ಮತ್ತೂ ತಪ್ಪು. ಏನೋ ಆಗಿಹೋಯಿತು. ಇನ್ನು ಯೋಚಿಸಿ ಮಾಡುವುದೇನು? ಇರುವ ಸ್ಥಿತಿಯನ್ನು ಇನ್ನೂ ವಿರಸಮಾಡಿಕೊಳ್ಳುವುದ

ರಲ್ಲಿ ಪ್ರಯೋಜನವಿಲ್ಲ. ದೇವರು ಸರ್ವದಾ ದೀನರಕ್ಷಕನಾಗಿಯೂ ಭಕ್ತ ವತ್ಸನಾಗಿಯೂ ಇರುವನೆಂಬುದನ್ನು ಮರೆಯಬೇಡ. ಸಕಲಾಪನ್ನಿವಾರಕ ನಾದ ಶ್ರೀ ವಿಠ್ಠಲಸ್ವಾಮಿಯನ್ನು ಸರ್ವದಾ ಧ್ಯಾನಿಸುತ್ತಿರು ಇದೋ ಈ ವಿಠ್ಠಲನ ದಿವ್ಯಮೂರ್ತಿಯು! ಇದು ನಮ್ಮ ಮನೆಯ ಗುರುತಾಗಿ ನಿನ್ನ ಬಳಿ ಇರಲಿ. ಆಪದುದ್ಧಾರಕನಾದ ಆ ಸ್ವಾಮಿಯೇ ಸರ್ವದಾ ನಿನಗೆ ಬೆಂಬಲವಾಗಿರುವನು ಈ ಮೂರ್ತಿಯನ್ನು ನೋಡಿದಾ ಗಲೆಲ್ಲ ನಿರ್ಭಾಗ್ಯರಾದ ನಿನ್ನ ತಂದೆ ತಾಯಿಗಳ ನೆನಪು ನಿನಗಾಗಿ, ಅಷ್ಟರಿಂ ದಲೇ ಸಮಾಧಾನ ಪಟ್ಟುಕೋ! ಈ ಜನ್ಮದಲ್ಲಿ ಋಣಾನುಬಂಧವಿದ್ದರೆ ಪುನಃ ನಮ್ಮ ನಿನ್ನ ಸಂದರ್ಶನವಾಗಲಿ - ಇಲ್ಲದಿದ್ದರೆ ಇದೇ ಕೊನೆಯ ದರ್ಶನ' ಎಂದು ನುಡಿದು, ತಲೆಯಮೇಲೆ ಕೈಯಿಟ್ಟು ಆಶೀರ್ವದಿಸಿ, ಪಂಚ ಲೋಹದ ಒಂದು ವಿಠ್ಠಲಮೂರ್ತಿಯನ್ನು ಆಕೆಗೆ ಕೊಟ್ಟು, ಆ ಅಗಲಿಕೆಯ ನ್ನು ತಡೆಯಲಾರದೆ, ಬಿಕ್ಕಿ ಬಿಕ್ಕಿ ಅಳುತ್ತಾ ಅಲ್ಲಿಂದೆದ್ದು, ಹೊರಕ್ಕೆ ಹೊರ ಟು ನಡೆದನು.

ಆ ಜನ್ಮದಲ್ಲ ಪುನಃ ತಂದೆತಾಯಿಗಳನ್ನು ನೋಡುವ ಆಸೆಯು ಹೀಗೆ ನಿಚ್ಛೇದವಾದುದರಿಂದ ಸಖೂಬಾಯಿಯು, ಸ್ವಲ್ಪಹೊತ್ತು ವ್ಯಸನಪಡುತ್ತಿ ದ್ದು ತರುವಾಯ ಮನಸ್ಸನ್ನು ಗಟ್ಟಿಮಾಡಿಕೊಂಡಳು. ಹೆಚ್ಚು ಹೊತ್ತು ಅಳುತ್ತಾ ಕುಳಿತರೆ, ಅತ್ತೆಯ ಕೋಪಕ್ಕೆ ಪಾತ್ರಳಾಗಬೇಕಾಗುವುದೆಂಬ ಭಯವು ತಪ್ಪಿರಲಿಲ್ಲ. ಈಗಲಂತೂ, ನಿರ್ಧನನಾದ ಅವಳ ತಂದೆಯು ತಮ್ಮೊಂದಿಗೆ ನೆಗೆಸಿ ಅವಳನ್ನು ಕರೆದೊಯ್ಯಲಾರದೆ ಹಿಂದಿರುಗಿದುದರಿಂದ, ತಮ್ಮ ದೊಡ್ಡಸ್ತಿಕೆಯು ಇನ್ನೂ ಒಂದು ಮೆಟ್ಟಲು ಹೆಚ್ಚಿನದೆಂಬ ಭಾವನೆ ಯು ಆ ಮೂರ್ಖಳ ಮನಸ್ಸು ಹೊಕ್ಕಿದ್ದಿತು. ಆತನು ಹೊರಟುಹೋದ ಮೇಲೂ, ಎಷ್ಟೋ ಹೊತ್ತಿನವರೆಗೆ, ಅವರ ಮನೆಯ ಬಡತನವನ್ನೂ, ಲಗ್ನ ಕಾಲದಲ್ಲೂ, ಗೃಹಪ್ರವೇಶಕ್ಕಾಗಿ ಹೋದ ಕಾಲದಲ್ಲೂ ತಮ್ಮ ದೊಡ್ಡಸ್ತಿ ಕೆಗೆ ತಕ್ಕಂತೆ ಊಟಉಪಚಾರಗಳನ್ನು ನಡೆಯಿಸದ ಅವರ ಅಲೌಕಿಕತೆಯ ನ್ನೂ ಹಲವು ಬಗೆಯಿಂದ ವರ್ಣಿಸಿ ಹಲುಬಿಕೊಂಡಳು. ಒಂದಿಗೇ ತಮ್ಮ ದೊಡ್ಡಸ್ತಿಕೆ, ತಮ್ಮ ಗೌರವ, ತಮ್ಮ ಮತ್ತು ತಮ್ಮ ಮಗನ ಗುಣಶೀಲ ಗಳನ್ನೂ ಅವನಿಗೆ ಬಡವರ ಮನೆಯ ಆ ಹೆಣ್ಣು ಜನ್ಮಾಂತರೀಯ ದುಷ್ಕ

ರ್ಮದಿಂದಲೇ ಗಂಟು ಬಿದ್ದಿತೆಂಬುದನ್ನೂ, ಆಕ್ಷೇಪಿಸಿ ನುಡಿಯಲು ಮರೆಯಲಿಲ್ಲ. ಸಖೂಬಾಯಿಗೆ ಆ ನುಡಿಗಳನ್ನು ಕೇಳಿ ಕೇಳಿ ಬೇಸರವುಂಟಾಯಿತು. ತಂದೆ ತಾಯಿಗಳನ್ನು ಅಗಲಿದ ವ್ಯಸನವೊಂದು ಕಡೆ, ಹುಲಿಯ ಗುಹೆಯಂತಿರುವ ಆ ಮನೆಯಲ್ಲಿ, ಈವ ಹೆಣ್ಣು ಹುಲಿಯಂತಿರುವ ಆ ಅತ್ತೆಯ ನಿರ್ಬಂಧದಲ್ಲಿ ಸಿಕ್ಕಬಿದ್ದ ತನ್ನ ಸ್ಥಿತಿಯ ವಿಚಾರವೊಂದುಕಡೆ. ಇವುಗಳೇ ಪಾಪ, ಆ ಹುಡುಗಿಗೆ ಸಹನಾತೀತವಾಗಿರುವಲ್ಲಿ, ಮೇಲೆ ಮೇಲೆ, ನಿಷ್ಕಾರಣವಾಗಿ ತನ್ನ ತಾಯಿ ತಂದೆಗಳ ದೂಷಣೆಯನ್ನೂ ಕೇಳಿ ಕೇಳಿ ಅವಳ ಹೃದಯವು ಕರಗಿಹೋಗುವುದು. ಆದರೂ ಮಾಡುವಳೇನು? ತಂದೆಯು ಹೊರಟುಹೋದ ಒಂದೆರಡು ದಿನಗಳು, ಆಗಾಗ ವ್ಯಸನವಾಗುತ್ತಿದ್ದಿತು. ತರುವಾಯ ಅಭ್ಯಾಸಕ್ಕೆಬಿದ್ದ ಮನಸ್ಸು ಕಲ್ಲಾಗಿ ಹೋಯಿತು.

ಮುಂದೆ ಸಖೂಬಾಯಿಗೆ ಆ ಮನೆಯಲ್ಲಿ ಆಪ್ತರಾರು! ಅತ್ತೆಯದೇ ಸರ್ವಾಧಿಕಾರವಾಗಿದ್ದುದರಿಂದ, ಅವಳ ಗಂಡನಾಗಲೀ, ಅಥವ ಮಾವನಾಗಲಿ, ಅವಳನ್ನು ವಹಿಸಿಕೊಂಡು ಮಾತನಾಡುವುದು ಅಸಂಭವನಾಗಿದ್ದಿತು. ಇನ್ನು ಅತ್ತೆಯ ಪ್ರೀತಿಯಂತೂ ಹೇಳಬೇಕಾದುದೇ ಇಲ್ಲವಷ್ಟೆ! ಹೀಗಾಗೆ ಸಖೂಬಾಯಿಯು, ಅನ್ವರ್ಥ 'ಕಾಕ ಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ' ಅಲ್ಲಿ ಕಾಲಯಾಪನೆ ಮಾಡತೊಡಗಿದಳು. ಆ ಕಾಲದಲ್ಲೆಲ್ಲ ಅವಳಿಗಿದ್ದ ಅವಲಂಬನೆಯೆಂದರೆ, ಆಕೆಯ ತಂದೆಯು ಕೊಟ್ಟು ಹೋಗಿದ್ದ ಶ್ರೀ ವಿಠ್ಠಲಮೂರ್ತಿ. ಆ ವಿಗ್ರಹವನ್ನು, ಆ ಬಾಲಿಕೆಯು ಎಲ್ಲೂ ಇಡದೆ ಸದಾ ತನ್ನ ಬಳಿಯಲ್ಲೇ ಇಟ್ಟುಕೊಂಡಿರುವಳು. ತಾನು ಏಕಾಂಗಿಯಾಗಿದ್ದ ವೇಳೆಯಲ್ಲಿ ಅದನ್ನು ಹೊರಕ್ಕೆ ತೆಗೆದು, ತನ್ನ ಕಷ್ಟಸಂಕಟಗಳನ್ನೆಲ್ಲಾ ಆದಕ್ಕೆ ನಿವೇದಿಸಿಕೊಂಡು, ಕಣ್ಣೀರಿನಿಂದ ಅದನ್ನು ಅಭಿಷೇಕಿಸಿ, ಪುನಃ ಉಡಿಯಲ್ಲಿ ಮುಚ್ಚಿಟ್ಟುಕೊಳ್ಳುವಳು. ದಿನದಿನಕ್ಕೆ ತೌರುಮನೆಯ ಸಂಬಂಧದ ಆಸೆಯೂ ಹಂಬಲಿಕೆಯೂ ಕಡಮೆಯಾಗಿ, ವಿಠ್ಠಲಮೂರ್ತಿಯ ವಿಷಯದಲ್ಲಿನ ಪವಿತ್ರಪ್ರೇಮವು ಹೆಚ್ಚತೊಡಗಿತು. ಅದನ್ನೇ ತನ್ನ ನಿಜವಾದ ಸಂಗಾತಿಯನ್ನಾಗಿ ಮಾಡಿಕೊಂಡಳು.

ಹೀಗೆ ಕೆಲವು ದಿನಗಳು ಕಳೆಯುವುದರೊಳಗಾಗಿ, ಸ್ತ್ರೀ ದೇಹಧರ್ಮವನ್ನನುಸರಿಸಿ, ಸಖೂಬಾಯಿಯು ಋತುಮತಿಯಾದಳು. ಪ್ರಥಮ ಋತು

ಮಾವ ಆ ಸಂದರ್ಭದಲ್ಲಿ ನಡೆಯಬೇಕಾದ ಆರತಿ ಅಕ್ಷತೆಗಳೊಂದಕ್ಕೂ, ಆಕೆಯ ಅತ್ತೆಯು ಅವಕಾಶಕೊಡಲಿಲ್ಲ. '-ಭಿಕಾರಿಗಳ ಮನೆಯ ಹುಡುಗಿಗೆ ಆರತಿಯೇಕೆ, ಅಕ್ಷತೆಯೇಕೆ? ತೌರುಮನೆಯಿಂದ ಅವಳು ತಂದಿರುವ ಬಳುವಳಿಯೆಷ್ಟು! ಅಳುವೊಂದಲ್ಲದೆ ಮತ್ತೇನು ಅವಳ ತಾಯಿಯ ಮನೆಯ ಆಸ್ತಿ?' ಎಂದು ಮುಂತಾಗಿ ಕರುಳನ್ನು ಕೊರೆದುಕೊಂಡು ಹೋಗುವಂತಹ ವಾಗ್ಬಾಣಗಳಿಂದ ಪಾಪ, ಕೋಮಲ ಮನಸ್ಸಿನ ಏಕಾಂಗಿಯಾದ ಆ ಬಾಲಿಕೆಯನ್ನು, ಹಂಗಿಸಿ ನಿಂದಿಸುವಳು. ಆ ಮಾತುಗಳನ್ನು ಕೇಳಿದಾಗಲೆಲ್ಲ - ಸಖೂಬಾಯಿಯು, - 'ಸ್ವಾಮಿ ವಿಠ್ಠಲ, ಈ ಸಂದರ್ಭದಲ್ಲಿ ನನ್ನ ತಪ್ಪಿತವೇನಿದೆ? ಎಲ್ಲವೂ ನಿನ್ನ ಲೀಲೆ! ನಿನ್ನ ಇಚ್ಛೆಯಂತೆ ಯಾವ ಯಾವುದು ಹೇಗೆ ಹೇಗೆ ನಡೆಯಬೇಕೋ ಹಾಗೆ ನಡೆಯುವುದು. ನಾವು ಚಿಂತಿಸಿ ಮಾಡುವುದೇನು? ಸುಖವೋ ಕಷ್ಟವೋ, ಭೂಷಣೆಯೋ ನಿಂದನೆಯೋ, ಮಾನವೋ ಅಪಮಾನವೊ, ನನಗೆ ಒಂದರ ಸಂಬಂಧವೂ ಇಲ್ಲ. ನಿನ್ನ ಪ್ರೀತಿಯಿದ್ದಂತೆ ನಡೆಯಲಿ' ಎಂದು ನುಡಿದು ಕೇವಲ ಪರತಂತ್ರಳಂತೆ ಇದ್ದುಬಿಟ್ಟಳು.

ಮೂರು ದಿನಗಳು ಕಳೆದು ನಾಲ್ಕನೆಯದಿನ ಋತು ಸ್ನಾನವಾಯಿತು. ಮಗಳು ಋತುವಾದಳೆಂಬ ವಿಚಾರವನ್ನು ಅವಳ ತಾಯಿ ತಂದೆಗಳಿಗೆ ತಿಳಿಸಬೇಕೆಂಬುದು ಸಹ ಆ ಧೂರ್ತದಂಪತಿಗಳಿಗೆ ಯುಕ್ತವೆನ್ನಿಸಲಿಲ್ಲ, - ಲೌಕಿಕವೆನ್ನಿಸಲಿಲ್ಲ. ತರುವಾಯ ಹದಿನಾರು ದಿನಗಳೊಳಗಾಗಿಯೇ ನಿಷೇಕವುಹೂರ್ತವೂ ಇಡಿಸಲ್ಪಟ್ಟಿತು. ಸಖೂಬಾಯಿಯ ಗಂಡನೂ ಸಹ, ಆ ಚಂಡಿಯ ಕೈಯಲ್ಲಿ ಬೆಳೆದ ಗಂಡೇ ಆದುದರಿಂದ ಸ್ನೇಹಪ್ರೇಮಗಳ ಗಂಧವೇ ಆ ಹೃದಯವನ್ನು ಪ್ರವೇಶಿಸಿರಲಿಲ್ಲ. ಅತ್ತೆ ಮಾವಂದಿರ ಸ್ಥಿತಿಯಂತೂ ಹಾಗಾಯಿತು. ಹೋಗಲಿ, ಅತ್ತೆಮಾವಂದಿರಿಂದ ತನಗಾಗಬೇಕಾದುದೇನು? ತನ್ನ ಗಂಡನೊಬ್ಬನು ತನ್ನ ವಿಷಯದಲ್ಲಿ ಸ್ನೇಹಪ್ರೇಮಗಳನ್ನು ಪ್ರಕಟಗೊಳಿಸಿ ವಿಹಿತನಾಗಿದ್ದರೆ, ಇತರ ಸಕಲ ವಿಚಾರಗಳನ್ನೂ ಆ ಮೂಲಕ ಮರೆತಿರಬಹುದೆಂದು ಎಣಿಸಿದ್ದ ಸಖೂಬಾಯಿಗೆ, ಅದೂ ತನ್ನ ಹಣೆಯಲ್ಲಿ ಬರೆಯಲಿಲ್ಲವೆಂಬುದು ನಿಷೇಕವಾದ ತರುವಾಯ ಗೊತ್ತಾಯಿತು. ತನ್ನ ಗಂಡನಿಗಾಗಿದ್ದ ಶಾಸ್ತ್ರಪಾಠವೆಂದರೆ, ಪುಸ್ತಕಗಳಲ್ಲಿದ್ದ ವಾಕ್ಯಗಳನ್ನು ತಲೆಯಲ್ಲಿ ತುಂಬಿಕೊಂಡಿದ್ದುದೆಷ್ಟೋ ಅಷ್ಟೇ! ಆ ಶಾಸ್ತ್ರವಾಕ್ಯಗಳಿಂದ ಹೃದಯ

ದಮೇಲೆ ಯಾವ ಪರಿಣಾಮವೂ ಆಗಿರಲಿಲ್ಲ. ಸ್ನೇಹಪ್ರೇಮಗಳಂತಿರಲಿ—ನವೋಢೆಯಾದ ತನ್ನಾಪತ್ನಿಯೊಂದಿಗೆ, ಒಂದು ಮಾತಿಲ್ಲ, ಒಂದು ಕಥೆಯಿಲ್ಲ, ನಗೆನೋಟವಿಲ್ಲ. ನಿನ್ನಗತಿ ಏನೆಂಬ ವಿಚಾರವಿಲ್ಲ. ಸುಖದುಃಖಗಳೇನೆಂದು ವಿಚಾರಿಸಿದುದಿಲ್ಲ. ತಾಯಿಯ ಭಯದಿಂದ, ಅಂಜುತ್ತಂಜುತ್ತ ಅರ್ಧರಾತ್ರಿ ಕಳೆದಮೇಲೆ ಶಯನ ಗೃಹವನ್ನು ಹೋಗುವುದು; ಗಂಡನೂ ಹೆಂಡತಿಯೂ ಮೂರು ಆರುಗಳಂತೆ(೩-೬)ಒಂದೊಂದೆಡೆಯಲ್ಲಿ ಬಿದ್ದುಕೊಂಡಿದ್ದು ರಾತ್ರಿಯನ್ನು ಕಳೆಯುವುದು. ತರುವಾಯ ಪಂಚಪಂಚಉಷಃ ಕಾಲಕ್ಕೇಎದ್ದು ಬಾಕೀದಾರರನ್ನು ಹುಡುಕಿಕೊಂಡು, ಅವರವರ ಮನೆಗಳಿಗೆ ಹೊರಟು ನಡೆಯುವುದು. ಸಖೂಬಾಯಿಯು, ತನ್ನ ಗಂಡನ ಸುಖವನ್ನು ಕಂಡುದಾಯಿತು. ತನ್ನ ಅತ್ತೆಮಾವಂದಿರ ಹೃದಯಗಳು ಮಾತ್ರವಲ್ಲ-ಅವರ ಮಗನಾದ ತನ್ನ ಗಂಡನ ಹೃದಯವೂ. ಒಂದು ಅರೆಬಂಡೆಯೆಂದು ಕಂಡುಕೊಂಡಳು. ಆಯಿತು, ಹಾಗೆ ತಿಳಿದುತಾನೆ ಮುಂದೆ ಮಾಡುವುದೇನು ? ಲೌಕಿಕವಾಗಿ ತನ್ನ ಸಂಸಾರ ಸ್ಥಿತಿಯು ಈ ಪರಿಯಾದುದರಿಂದ ಅವಳ ಮನಸ್ಸು-ವಯಸ್ಸನ್ನನುಸರಿಸಿಯಾದರೂ, ಈ ಕಡೆಗೆ ತಿರುಗದೆ, ಬಾಲ್ಯದಿಂದಲೂ ಬೆಳೆದು ಬಂದಿದ್ದ ವೈರಾಗ್ಯಪರ ಚಿತ್ತವೃತ್ತಿಯನ್ನೇ ಬೆಳೆಸಿತು. ತನ್ನ ತಾಯಿ ತಂದೆಗಳನ್ನಾಗಲೀ, ತನ್ನ ದುಸ್ಥಿತಿಯನ್ನಾಗಲೀ ಮತ್ತಾವುದನ್ನಾಗಲೀ ಕುರಿತು ಯೋಚಿಸುತ್ತಾ ಕಾಲಕಳೆಯುವುದು ನಿರರ್ಥಕವೆನ್ನಿಸಿತು. ತನ್ನ ಬಳಿಯಿದ್ದ ವಿಠ್ಠಲಸ್ವಾಮಿಯ ವಿಗ್ರಹವನ್ನೇ ನೆರೆನಂಬಿದಳು. ಅದರ ಅವಲಂಬನೆಯೇ ಅವಳಿಗೆ ಹೃದಯ ಶಾಂತಿಯನ್ನು ತಂದೀವ ಪರಮ ಸಾಧನವಾಯಿತು.



## ಅಧ್ಯಾಯ ೩ "ಅತ್ತೆಯಮನೆ"

ಸಖೂಬಾಯಿಗೆ ಅತ್ತೆಯಮನೆಯಲ್ಲಿ ಯಾವ ಬಗೆಯ ಸುಖಸಂತೋಷಗಳಿಗೂ ಲೇಶಮಾತ್ರ ಸ್ಥಾನವೂ ದೊರೆಯಲಿಲ್ಲವಾದರೂ, ಮನೆಯ ಸಮಸ್ತ ಕೆಲಸಕಾರ್ಯಗಳನ್ನು ನಿರ್ವಹಿಸುವ ಜವಾಬುದಾರಿಯು ಮಾತ್ರ ಆಕೆಯ ಪಾಲಿಗೆ ಬಂದಿತು. ಮನೆಯ ಯಾವ ಕೆಲಸವಾಗಲಿಲ್ಲವೆಂದರೂ,

ಸೋಮಾರಿತನದಿಂದಲೂ - ಅಲಕ್ಷ್ಯಭಾವದಿಂದಲೂ ಮಾಡಲಿಲ್ಲವೆಂದು ಅವಳಮೇಲೆ ದೂಷಣೆಗಳ ಮಳೆಸುರಿಯುವುದು ತಪ್ಪುತ್ತಿರಲಿಲ್ಲ. ಸಖೂಬಾಯಿಯು ಸ್ವತಃ ಜಾಣೆಯೂ ಸೂಕ್ಷ್ಮಮತಿಯೂ ಆಗಿದ್ದುದರಿಂದ ಆ ಮನೆಯಲ್ಲಿ ತನ್ನ ಸ್ಥಾನವು ಯಾವುದು ಎಂಬುದನ್ನು, ಮನೆಯನ್ನು ಹೊಕ್ಕ ನಾಲ್ಕಾರು ದಿನಗಳಲ್ಲೇ ಗ್ರಹಿಸಿಕೊಂಡಿದ್ದಳು. ಕೇವಲ ಒಕ್ಕಲಗಿತ್ತಿಯಂತೆ, ಸಕಲ ಕೆಲಸಗಳನ್ನೂ ಮಾಡಿಕೊಂಡು ಹೋಗುವುದು ಮಾತ್ರ ತನ್ನ ಕರ್ತವ್ಯವೆಂದಾದಮೇಲೆ, ಸುಮ್ಮನೆ ದಿನದಿನವೂ ಹೇಳಿಸಿಕೊಳ್ಳುವುದೇಕೆಂದು ಪ್ರಾತಃಕಾಲದಿಂದ ಆರಂಭಿಸಿದರೆ, ರಾತ್ರಿ ಮಲಗುವವರೆಗೂ ಒಂದಲ್ಲ ಒಂದು ಕೆಲಸಮಾಡುತ್ತಲೇ ಇರುತ್ತಿದ್ದಳಲ್ಲದೆ, ಸೋಮಾರಿಯಾಗಿ ಒಂದು ಕ್ಷಣ ಒಂದೆಡೆಯಲ್ಲಿ ನಿಲ್ಲುತ್ತಿರಲಿಲ್ಲ ಐದು ಗಂಟೆಗೆ ಹಾಸಿಗೆಯಿಂದ ಎದ್ದರೆ ಒಡನೆ, ಕೈಕಾಲು ಮುಖಗಳನ್ನು ತೊಳೆದುಕೊಂಡು, ವೃಂದಾವನಕ್ಕೆ ನೀರು ಹಾಕಿ, ಕುಂಕುಮವನ್ನಿಟ್ಟು ಪ್ರದಕ್ಷಿಣೆ ನಮಸ್ಕಾರಮಾಡಿ, ಬಾಗಿಲು ಅಂಗಳಗಳ ಬಳಿ ಕಸಬಳಿದು ಸಾರಿಸಿ ರಂಗವಲ್ಲಿಗಳನ್ನಿಕ್ಕುವಳು. ತರುವಾಯ, ದನದಮನೆಯ ಸಗಣಿ ಗಂಜಲಗಳನ್ನು ಬಳಿದು, ಒಳಕ್ಕೆ ಬಂದು ಅಡಿಗೆಯ ಮನೆಯಲ್ಲಿನ ಮುಸುರೆಯನ್ನು ಹೊರಕ್ಕೆ ಹಾಕಿ ನೆಲ ಒಲೆಗಳನ್ನು ತೊಳೆದು ಮನೆಯನ್ನೆಲ್ಲ ಸಾರಿಸಿ ಕಸಹೊಡೆದು, ಮುಸುರೆಯುಜ್ಜಿ ತೊಳೆದಿಡುವಳು. ಅಷ್ಟಾದಮೇಲೆ, ಜೋಳವನ್ನು ಬೀಸಿಕೊಳ್ಳುವುದು ಬತ್ತವನ್ನು ಕುಟ್ಟಿಕೊಂಡು ಅಕ್ಕಿಯನ್ನು ಸಿದ್ಧಮಾಡಿಕೊಳ್ಳುವುದು ಮುಂತಾದ ಕೆಲಸಗಳು ಮಧ್ಯಾಹ್ನದವರೆಗೂ ಆಗುವುವು. ಆ ವೇಳೆಗೆ ಅಡಿಗೆಗಾಗಿ ಮೈತೊಳೆದು ಕೂಗಾಡುತ್ತಾ ಇರುತ್ತಿದ್ದ ಅತ್ತೆಗೆ ಬೇಕಾದ ಮೈಲಿಗೆ ಕೆಲಸಗಳನ್ನೆಲ್ಲ ಮಾಡಿಕೊಟ್ಟು, ಆವರೆಗೆ ಕೂಡಿಬಿದ್ದಿರುತ್ತಿದ್ದ ಬಟ್ಟೆಯ ರಾಸಿಯನ್ನು ಹೊತ್ತುಕೊಂಡು ಕೆರೆಯಬಳಿಗೆ ಹೋಗುವಳು. ಬಟ್ಟೆಯನ್ನು ಒಗೆದು ಹಿಂಡಿಕೊಂಡು ಮನೆಗೆ ಬರುವ ವೇಳೆಗೆ, ಬಚ್ಚಲುಮನೆಯ ಪಾತ್ರೆಗಳೆಲ್ಲ ಬರಿದುಬಿದ್ದಿರುವುವು. ಅವುಗಳಿಗೆಲ್ಲ ನೀರುತುಂಬಿ ಮೈತೊಳೆವ ವೇಳೆಗೆ, ಮನೆಯಲ್ಲಿ ಎಲ್ಲರದೂ ಊಟವಾಗಿ ಹೋಗಿರುವುದು. ಅತ್ತೆಯು, ತಮ್ಮ ಸೊಸೆಯು ಯಾವ ಕೆಲಸಮಾಡದಿದ್ದರೂ ಹೋಗಲಿ, ಹೊತ್ತಿಗೆ ಸರಿಯಾಗಿ ಊಟಕ್ಕೆ ಬರಲೂ ಅವಳಿಗೆ ಆಗುವುದಿಲ್ಲವೆಂದು ಆಕ್ಷೇಪಿಸಿ, ತನ್ನದೂ ಊಟವಾದ

ಮೇಲೆ ಒಂದೆಲೆಯಲ್ಲಿ ಬಡಿಸಿದ್ದ ಪದಾರ್ಥಗಳನ್ನು ಧೂಳು ಕಸ ನೊಣ ಇ ರುವೆಗಳ ಪಾಲಿಗೆಂದು ಅಲ್ಲೊಂದೆಡೆಯಲ್ಲಿ ಎಳೆದಿರುವಳು. ಸಖೂಬಾಯಿ ಯು ತನ್ನ ಕೆಲಸ ಕಾರ್ಯಗಳನ್ನೆಲ್ಲ ತೀರಿಸಿಕೊಂಡು, ಅಡಿಗೆ ಊಟದ ಮನೆ ಗಳ ಬಳಿಗೆ ಬರುವವೇಳೆಗೆ ಅಲ್ಲಿ ಧೂಳುಮುಚ್ಚಿ, ನೊಣ ಇರುವೆಗಳಿಂದ ಮು ತ್ತಲ್ಪಟ್ಟು ಒಣಗುತ್ತಾ ತನಗಾಗಿ ಎಲೆಯಲ್ಲಿ ಬಿದ್ದಿದ್ದ ಅನ್ನಾದಿಗಳು ಗೋ ಚರವಾಗುವುವು. ಏಳೆಂಟುಗಂಟೆಗಳಕಾಲ ದುಡಿದು ಬಳಲಿಹೋಗಿದ್ದ ಆ ಬಾ ಲೆಯು ಆಗಲೇ ನೆಲಕ್ಕೆಕುಳಿತು, ಅಷ್ಟು ಪದಾರ್ಥಗಳನ್ನುತಿಂದು ಎದ್ದು ಕೈ ತೊಳೆದು, ಎಲ್ಲರ ಎಲೆ-ಎಂಜಲುಗಳನ್ನೂ ಬಳಿದೊಗೆದು ಗೋಮಯವಿಕ್ಕಿ ಎಂಜಲುಪಾತ್ರೆ ಮುಸುರೆಗಳನ್ನು ತೊಳೆದಿಕ್ಕಿ, ಒಳಕ್ಕೆ ನೆರಳಿಗೆ ಬಂದು ಒಂ ದುಕ್ಷಣ ಕುಳಿತುಕೊಳ್ಳೋಣವೆನ್ನುವವೇಳೆಗೆ ಎಲೆಹಚ್ಚುವುದಕ್ಕಾಗಿ ಬಿಡಿಎಲೆ ಗಳ ಬುಟ್ಟಿಯು ಸಿದ್ಧವಾಗಿರುವುದು. ಅದು ಮುಗಿಯಿತೆಂಬ ವೇಳೆಗೆ ಹೂಬ ತ್ತಿಗಳನ್ನು ಮಾಡಲು ಹತ್ತಿಯ ಬುಟ್ಟಿಯು ಸಿದ್ಧವಾಗಿರುವುದು. ಆ ಕೆಲ ಸವೂ ತೀರಿತೆಂಬವೇಳೆಗೆ ಬೀಸುವ, ಕುಟ್ಟುವ, ತೊಳೆಸುವ ಮತ್ತಾವುದಾದ ರೊಂದು ಕೆಲಸವಿರುವುದು. ಅವುಗಳನ್ನೆಲ್ಲ ಮುಗಿಸಿ, ಸಾಯಂಕಾಲ ಮತ್ತೊ ಮ್ಮೆ ಮನೆ ಬಾಗಿಲುಗಳನ್ನು ಕಸಹೊಡೆದು, ನೀರು ಚುಮುಕಿಸಿ, ಮನೆಗೆ ಬಂದ ದನಕರುಗಳನ್ನು ಕಟ್ಟಿಹಾಕಿ ಮೇವು ನೀರುಗಳನ್ನು ಕೊಟ್ಟು, ಮನೆ ಯಲ್ಲಿ ದೀಪಗಳನ್ನು ಹಚ್ಚಿಡುವಳು. ಅಷ್ಟಾದಮೇಲೆ ಆ ಗ ರಾತ್ರೆ ಊಟವಾ ಗುವವರೆಗೆ ಎಲ್ಲಾದರೊಂದುಗಳಿಗೆ ನಿಂತಿರಲು ಅವಕಾಶ ದೊರೆಯುವುದು.- ನಿಂತಿರಲು, ಎಂದರೆ ನಿಂತಿರಬೇಕಲ್ಲದೆ ವಿರಾಮವಾಗಿ ಕುಳ್ಳಿರುವುದಕ್ಕಿಲ್ಲ:- ಏಕೆಂದರೆ ಅತ್ತೆಯ ಮನೆಯ ಸೊಸೆಯು ದೊಡ್ಡವರೆದುರಿಗೂ ಅತ್ತೆ ಮಾವಂ ದಿರೆದುರಿಗೂ ಕುಳ್ಳಿರಬಾರದೆಂಬುದು ಅವರ ಅತ್ತೆಯ ಕಟ್ಟಾಜ್ಞೆ. ಕುಳ್ಳಿರ ಬಾರದೆಂಬುದೊಂದು ಮಾತ್ರವಲ್ಲ - ದೊಡ್ಡವರ ಎದುರಿಗೆ ನಿಂತು, ಅವರ ಮುಖ ನೋಡುವಷ್ಟು ಮಟ್ಟಿಗೆ ತಲೆಯೆತ್ತಿ ಮಾತನಾಡಬಾರದು. ಗಟ್ಟಿ ಯಾಗಿ ಮಾತನಾಡಬಾರದು, ನಗಬಾರದು, ಹಿರಿಯರಿದ್ದೆಡೆಯಲ್ಲಿ ನಿಲ್ಲಬಾರ ದು, ಅವರೆದುರಿಗೆ ಕುಳಿತು ಊಟಮಾಡಬಾರದು. ಇವುಗಳೆಲ್ಲವೂ ಅತ್ತೆಯ ಮನೆಯ ಸೊಸೆಯು ಗಮನಿಸಬೇಕೆಂದು ಅವರ ಅತ್ತೆಯು ವಿಧಿಸಿದ ಕಟ್ಟ ಳೆಗಳು. ಮೇಲೆ ಹೇಳಿದಂತೆ ಸಖೂಬಾಯಿಯು ಬೇಸರಗೊಳ್ಳದೆ, ಮೈಗಳ್ಳ

ತನಸಿಲ್ಲವೆ ಸಕಲವಿಧ ಮನೆಗೆಲಸಗಳನ್ನೂ ಕ್ಷಣವಿರಾಮವಿಲ್ಲದೆ ಮಾಡಿಕೊಂಡು ಹೋಗುವಳು. ಎಷ್ಟು ಕೆಲಸಮಾಡಿದರೂ, ಒಂದು ಉತ್ಸಾಹಕರವಾದ ವಾಕ್ಯವನ್ನಾಗಲೀ, ಸ್ನೇಹಪ್ರೇಮಗಳಿಂದ ಕೂಡಿದ ಮಾತು ಕಥೆಗಳನ್ನಾಗಲೀ ಕೇಳಲು ಎಡೆಯಿಲ್ಲ. ಉಂಡೆಯಾ ಉಟ್ಟೆಯಾ ಎಂದು ಕೇಳಿ ಆದರಿಸುವವರಿಲ್ಲ ತಲೆ ಮೈಗಳನ್ನು ನೋಡಿ, ಎಣ್ಣೆನೀರುಗಳನ್ನೆರೆದು ಉಪಚರಿಸುವ ಪ್ರಸಕ್ತಿಯಿಲ್ಲ. ಹೊಟ್ಟೆತುಂಬ ಅನ್ನ ಸಿಕ್ಕಿ, ಕಣ್ಣು ತುಂಬ ನಿದ್ರೆಮಾಡಿದೆಯಾ ಎಂದು ವಿಚಾರಿಸುವವರಿಲ್ಲ. ಮುಖ್ಯವೇನು, ದುಡಿ, ದುಡಿ, ಎಂಬೀ ಶಬ್ದಗಳೇ ಸದಾ ಅವಳ ಕಿವಿಯಲ್ಲಿ ಪ್ರತಿಧ್ವನಿತವಾಗುತ್ತಿರುವವು. ಸಖೂಬಾಯಿಯೂ ಸಹ ಗಾಣಕ್ಕೆ ಕಟ್ಟಲ್ಪಟ್ಟ ಎತ್ತಿನಂತೆ, ಒಂದುಕ್ಷಣ ಒಂದೆಡೆಯಲ್ಲಿ ನಿಲ್ಲಲು ವಿರಾಮವಿಲ್ಲದೆ, ಕತ್ತಲೆ ಹರಿದು ಬೆಳಕಾದಾಗಿನಿಂದ, ರಾತ್ರಿ ಹತ್ತು ಹನ್ನೊಂದು ಗಂಟೆಯವರೆಗೆ ಮೂಗುಪ್ರಾಣಿಯಂತೆ ದುಡಿದು ದುಡಿದು, ನೆಲಕ್ಕೆ ತಲೆಯಿಟ್ಟೇನೇ ಎಂಬಂತಾಗಿ ಒಂದೆಡೆ ಒರಗುವಳು. ಪುನಃ ಪ್ರಾತಃಕಾಲವಾಗುವುದು, ಪುನಃ ಕೆಲಸವು ಪ್ರಾರಂಭವಾಗುವುದು, ಪುನಃ ಕೆಲಸಕಾರ್ಯಗಳು ಕರೆಯುತ್ತಿರುವವು. ದುಡಿಮೆಯು ಆರಂಭಿಸಿ, ರಾತ್ರಿ ಹತ್ತುಗಂಟೆಯವೇಳೆಗೆ ಕೊನೆಯಾಗುವುದು. ಅವಳೂ ಮೂಗು ಮುಚ್ಚಿಕೊಂಡು ದುಡಿಯುವಳು. ಹೀಗೆಯೇ ಕೆಲವುಕಾಲ ನಡೆದುಬಂತು.

ವಾಸ್ತವವಾಗಿ ಮನೆಗೆಲಸಗಳನ್ನೆಲ್ಲ ಸಖೂಬಾಯಿಯೇ ಮಾಡುತ್ತಿದ್ದರೂ ಅವಳ ಅತ್ತೆಯು, ಮಾಡುತ್ತಿದ್ದ ಆಕ್ಷೇಪಣೆಗೆ ಮಾತ್ರ ಕೊನೆ ಮೊದಲೇ ಇರುತ್ತಿರಲಿಲ್ಲ. ಮನಸ್ಸಾಕ್ಷಿಗೆ ವಿರೋಧವಾಗಿ ನಡೆದು ಅಭ್ಯಾಸವಿಲ್ಲದ ಆ ಬಾಲಿಕೆಗೆ, ಯಾರಾದರೂ ಎದುರಿಗಿದ್ದರೆ ಮಾತ್ರವೇ ಒಂದು ಕೆಲಸವನ್ನು ಚೆನ್ನಾಗಿ ಮಾಡಬೇಕು,— ಇಲ್ಲದಿದ್ದರೆ ನಿರ್ಲಕ್ಷ್ಯದಿಂದ ಅರ್ಧಮರ್ಧವಾಗಿ ಮಾಡಿ ಹೇಗೋ ಮುಗಿಸಬೇಕು ಎಂಬ ಭಾವನೆಯು ಮೊದಲಿನಿಂದಲೂ ಇರಲಿಲ್ಲ. ಆದುದರಿಂದ ಪ್ರತಿಯೊಂದು ಕೆಲಸವನ್ನೂ ಎಷ್ಟು ಚೊಕ್ಕಟವಾಗಿ ತನ್ನ ಮನಸ್ಸೊಪ್ಪುವಂತೆ ಮಾಡಿಟ್ಟರೂ ಅದಕ್ಕೆ ಆಕ್ಷೇಪಣೆಯೇನೋ ತಪ್ಪುತ್ತಿರಲಿಲ್ಲ. ಪ್ರಾರಂಭದ ಕೆಲವು ದಿನಗಳು, ಅಂತಹ ಕೆಲಸಗಳನ್ನು ಪುನಃ ಮಾಡುತ್ತಿದ್ದಳು. ಕೊನೆಕೊನೆಗೆ ತನ್ನನ್ನು ಆಕ್ಷೇಪಣೆ ಮಾಡುವುದಕ್ಕೆ ಕಾರಣವು ಕೆಲಸವು ಕೆಟ್ಟಿರುವುದರಿಂದಲಲ್ಲ-

ಅತ್ತೆಯೆನಿಸಿಕೊಂಡು ಸೊಸೆಯನ್ನು ಆಕ್ಷೇಪಿಸದಿದ್ದರೆ ಅತ್ತೆಯೆಂಬ ದೊಡ್ಡಸ್ತಿಕೆಯು ಉಳಿಯುವ ಪರಿಹೇಗೆ ಎಂಬುದಕ್ಕಾಗಿ ಮಾಡುತ್ತಿದ್ದ ಆಕ್ಷೇಪಣೆಗಳವು ಎಂಬ ಭಾವವು ವ್ಯಕ್ತವಾದಮೇಲೆ, ಆಯಾ ಕೆಲಸಗಳನ್ನು ಗಮನಿಸದೆಯೇ ಬಿಟ್ಟುಬಿಡುತ್ತಿದ್ದಳು. ಅವಳ ಅತ್ತೆಯಾದ ಆ ಕರ್ಕಶಿಯು ಕೆಲಸಕಾರ್ಯಗಳಿಗಾಗಿ ತನ್ನಾ ಸೊಸೆಯನ್ನು ಆಕ್ಷೇಪಿಸುತ್ತಿದ್ದುದಷ್ಟುಮಾತ್ರವಲ್ಲ-- ಅವಳ ತಾಯಿತಂದೆಗಳು ಬಡವರು, ನಿರ್ಗತಿಗರು ಭಿಕಾರಿಗಳು ತಮ್ಮೊಂದಿಗೆ ಸರಿಹೋಗುವ ಬೀಗರಲ್ಲ, ಆ ಭಿಕಾರಿಗಳ ಮನೆಯಲ್ಲಿ ಹುಟ್ಟಿ ಬೆಳೆದ ತಮ್ಮಾ ಸೊಸೆಗೆ ದೊಡ್ಡಸ್ತಿಕೆ ಎಂದರೇನೆಂದು ತಿಳಿಯದು; ಹತ್ತು ಜನಗಳೊಂದಿಗೆ ಬಳಕೆಗೊಳ್ಳುವ ಚಾಲಾಖುತನವಿಲ್ಲ ಮಾದೇವಿ, ಮುಂಗೋಪಿ, ಮೂಕಪಶು, ಎಂಬಿವು ಸರ್ವಸಾಮಾನ್ಯ ಆಕ್ಷೇಪಣೆಗಳು.—ತನ್ನ ಮಗನಿಗೆ ಅವರು ಸರಿಯಾಗಿ ಅಳಿಯತನದ ಗೌರವವನ್ನು ನಡೆಯಿಸಲಿಲ್ಲ. ಒಂದುಬಾರಿಯಾದರೂ ಹಬ್ಬೂಟ ಮುಂತಾದ್ದಕ್ಕೆ ಕರೆಸಿ, ಉಡುಗೆರೆ ಉತ್ಸವಗಳನ್ನು ಮಾಡಿ ಉಪಚರಿಸಲಿಲ್ಲ; ಎಂಬೀ ಆಕ್ಷೇಪಣೆಗಳನ್ನಾದರೂ ಆ ಬಾಲಿಕೆಯು ಕೇಳಿ, ಕಣ್ಣೀರಿಟ್ಟು ಸಹಿಸಬೇಕಾಗಿತ್ತು. ಆ ಚಂಡಿಯು ಮನೆಯಲ್ಲಿ, ಆ ದಿಕ್ಕರಿಯಾದ ಬಾಲಿಕೆಯಮೇಲೆ ಇಷ್ಟುಮಟ್ಟಿನ ಅಧಿಕಾರವನ್ನು ನಡೆಯಿಸುತ್ತ, ನಿಷ್ಕಾರಣವಾಗಿ ಆಕ್ಷೇಪಿಸುತ್ತ ಇದ್ದರೂ, ಗಂಡಸರೆನ್ನಿಸಿಕೊಂಡ ಆಕೆಯ ಗಂಡನಾಗಲೀ ಮಾವನಾಗಲೀ, ನ್ಯಾಯವಾವುದು ಅನ್ಯಾಯವಾವುದು ಎಂದು ವಿಮರ್ಶಿಸಿ, ಆ ನಿರ್ದೋಷಿ ಮಗುವನ್ನು ಏಕೆ ಆಕ್ಷೇಪಿಸುವೆ ಎಂದ ಒಂದು ದಿನವಾದರೂ ಕೇಳಿದವರಲ್ಲ - ನಮೂಬಾಯಿಯು ಸಮಾಧಾನದಿಂದ ಆ ಮನೆಯ ದಿವ್ಯಮಾನಗಳನ್ನೆಲ್ಲ ಪರಿಭಾವಿಸಿಕೊಂಡು, ಅದಕ್ಕಾಗಿ ವ್ಯಸನಪಟ್ಟು ಪ್ರಯೋಜನವಿಲ್ಲ- ವ್ಯಸನಪಟ್ಟರಾಗಲೀ, ಚಿಂತಿಸಿದರಾಗಲೀ ತಪ್ಪುವಂತಿಲ್ಲ; ಅದು ಪ್ರಾರಬ್ಧ ಕರ್ಮಕ್ಕೆ ಸಂಬಂಧಪಟ್ಟು ತನ್ನನ್ನು ಅನುಸರಿಸಿಕೊಂಡು ಬಂದುದಾದುದರಿಂದ, ಅನುಭವಿಸದಿದ್ದರೆ ತೀರತಕ್ಕುದಲ್ಲ-ಎಂದು ನಿರ್ಧರಿಸಿಕೊಂಡು, ಅಳದೆ ಕರಗದೆ, ಬೇಸರಪಟ್ಟು ಗೊಣಗಿಕೊಳ್ಳದೆ, ತನ್ನ ವಿಧಿಯನ್ನು ನಿಂದಿಸಿಕೊಳ್ಳದೆ ಪೂರ್ವಾಪರವಿಚಾರ ಮಾಡದೆ ತನ್ನ ತಾಯಿತಂದೆಗಳು ತನ್ನನ್ನು ಆ ಮನೆಗೆ ನೂಕಿದರೆಂದು ಅವರನ್ನು ಆಕ್ಷೇಪಿಸದೆ, ತನ್ನ ಕಷ್ಟವನ್ನು ಕುರಿತು ಸಹಾನುಭೂತ

ಸಹಿಸದೆ ಕಾಡಿಸುತ್ತಿದ್ದಾರೆಂದು ಅತ್ತೆ ಮಾವಂದಿರನ್ನು ದೂಷಿಸಿ ಶಪಿಸದೆ, ತನ್ನ ಗತಿಯೇನೆಂದು ವಿಚಾರಿಸದೆ ಇರುವ ತನ್ನ ಗಂಡನ ಗುಣನಡತೆಗಳಿಗಾಗಿ ಅಸಹ್ಯಪಟ್ಟುಕೊಳ್ಳದೆ, ತನ್ನ ಕೆಲಸವಾಯಿತು ತಾನಾಯಿತು ಒಬ್ಬರ ತಂಟೆಗೆಹೋಗದೆ, ಪರಕೀಯರೊಬ್ಬರೊಡನೆ ಸ್ನೇಹಿಸದೆ-ದ್ವೇಷಿಸದೆ, ತನ್ನ ಪಾಲಿನ ಸಮಸ್ತ ಮನೆಗೆಲಸಗಳನ್ನೂ ಎದುರುತ್ತರವಿಲ್ಲದೆ-ಸುಮ್ಮನೆ ಮಾಡಿಕೊಂಡು ಹೋಗುತ್ತಿದ್ದಳು.

ಈ ವಿವರಣೆಯನ್ನು ಓದುವವರು ಇದನ್ನು ಅತಿಶಯೋಕ್ತಿ ಎಂದು ಬಿಡಬಹುದು. ಅಷ್ಟು ಬಗೆಯಿಂದ ಕೆಲಸಮಾಡಿಕೊಂಡು ಹೋಗುತ್ತಿದ್ದ ಸಖೂಬಾಯಿಯು ಆಕ್ಷೇಪಣೆಗಳನ್ನೆಲ್ಲ ಸಹಿಸಿಕೊಂಡು ಸುಮ್ಮನಿರುತ್ತಿದ್ದಳೆಂದರೆ ಅರ್ಥವೇನು? ಬಾಯಿಂದ ನುಡಿದು ಆಕ್ಷೇಪಿಸದಿದ್ದರೂ, ಮನಸ್ಸಿನಲ್ಲಾದರೂ ಅವರನ್ನು ಕುರಿತು ದ್ವೇಷಿಸದೆ ದೂಷಿಸದೆ ಅಥವ ತನ್ನ ವಿಧಿಯನ್ನು ಕುರಿತು ನಿಂದಿಸಿಕೊಳ್ಳದೆ ಇದ್ದಳೆಂದರೆ ಅದು ಹೇಗೆ ಸಾಧ್ಯ-ಎಂದು ಮುಂತಾಗಿ ಯೋಚಿಸಲವಕಾಶವುಂಟು. ಆದರೆ ಸದ್ಯಃ ಹೇಳಿದುದು, ಸಖೂಬಾಯಿಯ ಜೀವಿತವನ್ನು ಕುರಿತ ಚಿತ್ರದ ಒಂದು ಪಾರ್ಶ್ವ ವರ್ಣನೆ ಮಾತ್ರ. ಆ ಚಿತ್ರದ ಮತ್ತೊಂದು ಪಾರ್ಶ್ವವನ್ನು ಕುರಿತು ಇನ್ನೂ ಹೇಳಿಲ್ಲ. ಆದನ್ನೂ ಓದಿದಮೇಲೆ, ಅಷ್ಟು ದುಃಖ ಸಂಕಟಗಳಲ್ಲೂ ಸಹಿಸಿಕೊಂಡು ಇರುವುದು ಸಖೂಬಾಯಿಗೆ ಸಾಧ್ಯವಿತ್ತು ಎಂದು ಗೋಚರವಾಗಬಹುದು. ವಾಚಕಮಹಾಶಯರು ಸಾವಧಾನದಿಂದ ಮುಂದರಿಸಬೇಕು.

ಸಖೂಬಾಯಿಯು ಚಿಕ್ಕಂದಿನಿಂದಲೂ, ಭಗವದ್ಭಜನೆ, ಹರಿಸೇವೆ, ಸಾಧುಸಜ್ಜನ ಸಹವಾಸ ಮುಂತಾದುವುಗಳನ್ನು ಮೆಚ್ಚುವ ಸ್ವಭಾವದವಳಾಗಿದ್ದಳು ಎಂಬ ವಿಚಾರವು ಈವರೆಗೇ ವ್ಯಕ್ತವಾಗಿದೆಯಲ್ಲವೆ! ಅವಳಿಗೆ ಆ ಮನೆಯಲ್ಲಿ ತನ್ನ ಸ್ಥಾನವಾವುದು ಎಂಬ ಸಂಗತಿಯು ಗೋಚರವಾದುದರೊಂದಿಗೇ ತನಗಿನ್ನು ತೌರುಮನೆಯಿಂದಲಾಗಲೀ, ತನ್ನ ಪತಿಯ ಮೂಲಕವಾಗಲಿ ತನ್ನ ಕಷ್ಟ ಪರಿಹಾರಕ್ಕೆ ಯಾವ ಸಹಾಯವೂ ಒದಗಲಾರದೆಂದು ತಿಳಿವಳಿಕೆಯಾಯಿತು. ಬಡವರಾದ-ಆದರೂ ಸಜ್ಜನರಾದ ತಾಯಿತಂದೆಗಳ ಉದರದಲ್ಲಿ ಜನ್ಮಿಸಿದ ತಾನು ಆಕಸ್ಮಿಕವಾಗಿ ಒದಗಿದ ಸಂಬಂಧದಿಂದ ಅಂತಹ

ಮನೆಯನ್ನು ಹೊಕ್ಕು, ತನ್ನ ತೌರುಮನೆಯಲ್ಲಿ ಕಂಡು ಕೇಳಿ ಅರಿಯು ದ-ಕನಸುಕಾಣದ ಕಷ್ಟಸಂಕಟಗಳಿಗೆ ಒಳಪಟ್ಟು ನರಳಬೇಕಾದುದು ತನ್ನ ಪ್ರಾರಬ್ಧಕರ್ಮದ ಚೇಷ್ಟೆಯಲ್ಲದೆ ಅನ್ಯಥಾ ಅಲ್ಲವೆಂದು ಯೋಚಿಸಿ ನಿರ್ಧರಿಸಿಕೊಂಡಳು. ಪ್ರಾರಬ್ಧಕರ್ಮವು ಅನುಭವಿಸದೆಯೇ ಎಂದಿಗೂ ಪರಿಹಾರವಾಗದೆಂದು ತನ್ನ ತಂದೆಯು ಹೇಳುತ್ತಿದ್ದ ಮಾತು ಆವಳಿಗೆ ಮರೆ ತಿರಲಿಲ್ಲ. ತನ್ನ ಕಷ್ಟಕ್ಕೆ ಕಾರಣವು ಜನ್ಮಾಂತರಕ್ಕೆ ಸಂಬಂಧಪಟ್ಟುದು, ಅದನ್ನು ಅನುಭವಿಸದೆಯೇ - ಮತ್ತಾರ ಸಹಾಯದಿಂದಲೂ ತೀರಿಸಿಕೊ ಳ್ಳಲು ಅವಕಾಶವಿಲ್ಲ, ಎಂದು ತಿಳಿದಮೇಲೆ ಅದನ್ನು ಗೊಣಗಿಕೊಂಡು-ಅಸ ಹ್ಯಪಟ್ಟುಕೊಂಡು ಅನುಭವಿಸುವುದಕ್ಕಿಂತಲೂ ಸಮಾಧಾನದಿಂದಲೇ ಅನು ಭವಿಸಿದರೆ ಮನಸ್ಸಿನಮೇಲೆ ಅದರಿಂದುಂಟಾಗುವ ಭಾರವು ಅಷ್ಟು ಹೆಚ್ಚು ಪ್ರಮಾಣದಿಂದ ಆಗಲಾರದೆಂದು ಅವಳಿಗೆ ಗೋಚರಿಸಿತು. ತನ್ನ ಕಷ್ಟವ ನ್ನಾಗಲೀ, ದುಃಖತಾಪತ್ರಯಗಳನ್ನಾಗಲೀ ಮತ್ತಾರೂ ತೀರಿಸತಕ್ಕವರಿಲ್ಲ ವೆಂದು ಖಚಿತವಾಗಿದ್ದುದರಿಂದ ನೆರೆಹೊರೆಯ ಯಾರೊಂದಿಗೆ ಹೇಳಿಕೊಂಡ ರೂ ಅದರಿಂದ ಯಾವ ಪ್ರಯೋಜನವೂ ಉಂಟಾಗಲಾರದೆಂದೂ - ನಾಲದು ದಕ್ಕೆ ಇನ್ನೂ ದ್ವೇಷವೂ ಕಷ್ಟಗಳೂ ಹೆಚ್ಚಬಹುದೆಂದೂ ತೋರಿತು. ಆದುದರಿಂದ, ಸುಮ್ಮನೆ ತನ್ನ ಕೆಲಸವನ್ನು ಮಾಡಿಕೊಳ್ಳುತ್ತಾ ಮನೆ ಯಾಯಿತು ತಾನಾಯಿತು ಇದ್ದುಬಿಡುವಳಲ್ಲದೆ, ಒಬ್ಬರೊಂದಿಗೆ ಬೆರೆಯದೆ, ತಮ್ಮ ಮನೆಯ ವಿಚಾರವನ್ನು ಕುರಿತ ಒಂದು ಮಾತನ್ನು ಒಬ್ಬರೊಂದಿ ಗಾಡದೆ ಇದ್ದುಬಿಡುವಳು. ಆದರೆ ಯಾರೊಂದಿಗಾದರೂ ಹೇಳಿಕೊಂಡರೆ, ತಮ್ಮ ಅತ್ತೆಗೆ ತಿಳಿದು ಅದರಿಂದ ಪ್ರಮಾದವಾಗುವುದೆಂಬ ಭಯದಿಂದ ಸುಮ್ಮನಿರುತ್ತಿದ್ದಳಾದರೂ, ಮನಸ್ಸಿನಲ್ಲಿ ಅವರ ನಿಷ್ಕಾರುಣ್ಯಭಾವವನ್ನು ಆಕ್ಷೇಪಿಸುತ್ತಾ, ಶಪಿಸುತ್ತಾ ಇರುತ್ತಿರಲಿಲ್ಲವೆಂಬುದು ಹೇಗೆ, ಎಂದರೆ ಸಖೂಬಾಯಿಯು ತನ್ನ ಕಷ್ಟಗಳಿಗೆಲ್ಲ, ತನ್ನ ಪರಾಕೃತ ದುಷ್ಕರ್ಮವೇ ಕಾರಣವೆಂದು ತಿಳಿದಿದ್ದುದರಿಂದ, ಅದು ಬೇರೆಯವ ಮತ್ತಾರನ್ನು ದೂಷಿಸಿ ದರೂ ದ್ವೇಷಿಸಿದರೂ ಪರಿಹಾರವಾಗತಕ್ಕುದಲ್ಲವೆಂಬುದನ್ನು ಚೆನ್ನಾಗಿ ಅರಿತಿದ್ದುದರಿಂದ ಮನಸ್ಸಿನಲ್ಲೂ ಯಾರನ್ನೂ ದ್ವೇಷಿಸುತ್ತಿರಲಿಲ್ಲ. ದ್ವೇಷಭಾವಕ್ಕೆ ಮನಸ್ಸಿನಲ್ಲಿ ಒಂದು ಬಾರಿ ಎಡೆಗೊಟ್ಟರೆ, ಅದು ಪರದೂ

ಷಕೆಯಲ್ಲಿಲ್ಲಸೆ ಅನ್ಯಥಾ ಕೊನೆಗೊಳ್ಳದು - ಎಂಬುದಾದರೂ ಸಖೂಬಾ ಯಿಗೆ ತಿಳಿಯದಿರಲಿಲ್ಲ. ಹೀಗೆ ತನ್ನ ದುಷ್ಕ್ರಿಯೆಗಾಗಿ ಪರರನ್ನು ದ್ವೇಷಿ ಸದಿದ್ದುದು ಮಾತ್ರವಲ್ಲ- ಆ ಸಮಯದಲ್ಲೇ ಅವಳ ಮನಸ್ಸಿನಲ್ಲಿ ಮತ್ತೊಂ ದು ಉನ್ನತಭಾವವೂ ಆಶ್ರಯಗೊಂಡಿದ್ದಿತು. *ಮೇಘಮಾಲೆಯು ಅಂತ ರಿಕ್ಷದಲ್ಲಿ ವಾಯುವಿನ ಚಲನವಲನಗಳನ್ನು ಅನುಸರಿಸಿ ಇತ್ತಲಿಂದತ್ತಲೂ, ಅತ್ತಲಿಂದ ಇತ್ತಲೂ ಸಂಚರಿಸುತ್ತಿರುವಂತೆಯೇ ಮನುಷ್ಯರಾದರೂ, ಸರ್ವ ನಿಯಾಮಕನಾದ ಭಗವಾನನ ಇಚ್ಛಾನುಸಾರವಾಗಿಯೇ, ಭಯಶೋಕಸುಖ ದುಃಖಾದಿಗಳನ್ನು ಅನುಭವಿಸುವರಲ್ಲದೆ, ಕೊಲ್ಲುವುದಕ್ಕಾಗಲೀ, ಕಾಯುವು ದಕ್ಕಾಗಲೀ, ಪ್ರೀತಿಸುವುದಕ್ಕಾಗಲೀ ದ್ವೇಷಿಸುವುದಕ್ಕಾಗಲೀ ಮನುಷ್ಯ ಮಾತ್ರರು ಎಷ್ಟುಮಟ್ಟಿಗೂ ಬಾಧ್ಯರಲ್ಲ ಎಂಬ ಸಂಗತಿಯನ್ನು ಆ ಸಾಧ್ವೀ ರತ್ನವು ನಿಶ್ಚಲಭಾವದಿಂದ ಅರಿತಿದ್ದಳು. ಆದುದರಿಂದ ಅಷ್ಟುಮಟ್ಟಿನ ಕಷ್ಟತಾಪತ್ರಯಗಳಿಗೆ ಸಿಕ್ಕಿದ್ದಾಗಲೂ ಅವಳ ಮನಸ್ಸು ಭಗವತ್ಪರವಾಗಿ ದ್ದಿತಲ್ಲದೆ, ತನ್ನ ಕಷ್ಟಗಳಿಗೆ ಮನೆಯಲ್ಲಿದ್ದ ಆ ವ್ಯಕ್ತಿಗಳು ಕಾರಣರು ಎಂಬ ಭಾವನೆಯಿರಲಿಲ್ಲ. ಆದುದರಿಂದಲೇ ಅವಳಿಗೆ ಅವರಮೇಲೆ ದ್ವೇ ಷಾಸೂಯೆಗಳು ಉಂಟಾಗಲು ಅವಕಾಶವಾಗಲಿಲ್ಲ.

ಹೀಗೆ ಭಗವತ್ಪರಚಿತ್ತವೃತ್ತಿಯುಳ್ಳವಳಾದ ಸಖೂಬಾಯಿಯು ಗೃ ಹಕೃತ್ಯ ಸಂಬಂಧವಾದ ಈ ಕ್ಷುದ್ರವಿಚಾರವನ್ನು ಮನಸ್ಸಿಗೇ ತಂದುಕೊಳ್ಳ ದೆ, ತಾನು ಮಾಡಬೇಕಾದ ಕೆಲಸಕಾರ್ಯಗಳನ್ನೆಲ್ಲಾ ಅವು ತನ್ನ ಹೃದಯ ಸ್ಥನಾದ ಸ್ವಾಮಿಯ ಸೇವೆಯೆಂಬ ಪವಿತ್ರಭಾವನೆಯಿಂದ ಪ್ರೇರಿತಳಾಗಿ ಶ್ರ ದ್ಧಾಭಕ್ತಿಪೂರ್ವಕ ಮಾಡಿಡುವಳು. ಯಾವ ಕೆಲಸ ಪ್ರಾರಂಭಮಾಡುವಾಗ ಲೂ, ವಿಠಲಾ, ಕೃಷ್ಣಾ, ಶ್ರೀನಿವಾಸಾ, ಶ್ರೀಮನ್ನಾರಾಯಣಾ, ಶ್ರೀರಾಮಪ್ರಭೋ ನಿನ್ನ ಸೇವೆ ಎಂದು ಪ್ರಾರಂಭಿಸುವಳು. ಬೀಸುವುದು ಕುಟ್ಟುವುದು ನೀರುಸೇದುವುದು ಬಟ್ಟೆಯೊಗೆಯುವುದು ಮುಂತಾದ ಕಷ್ಟ

* ಭಾಮಿನೀಷಟ್ಪದಿ · ವಾಯುವಶದಲಿ ನಡೆವಮೇಘ ನಿಕಾಯದಂತಿರಲಖಿಳ ಜೀವನಿ ಕಾಯವನು ಭಯಶೋಕ ಸುಖದುಃಖಾನುಭವಗಳಲಿ ॥

ಶ್ರೀಯವಲ್ಲಭನೆಂದೆನಿಪ ನಾರಾಯಣನೆ ನಡೆಸುವನು ಕೊಲ್ಲಲು ಕಾಯಲಿಕೆ ಕವು ಲಾಕ್ಷನಲ್ಲದೆ ಬೇರೆದಾರೆಂದ (ಕನ್ನಡಭಾಗವತ)

ತರ ಕೆಲಸಗಳನ್ನು ಮಾಡುವಾಗ್ಗೆ ಆಯಾಸವಾದರೆ, ಹರೀ ಕೃಷ್ಣಾ ಮು ಕುಂದಾ ಭಕ್ತವತ್ಸಲಾ ಎಂದು ಭಗವನ್ನಾಮೋಚ್ಚಾರಣೆ ಮಾಡುವಳಲ್ಲದೆ, ಅಸ್ ಉಸ್ ಎಂದು ವ್ಯರ್ಥಶಬ್ದಗಳನ್ನು ಉಚ್ಚರಿಸಳು. ವಿಠ್ಠಲ ವಿಗ್ರ ಹವು ಸದಾ ಆಕೆಯ ಉಡಿಯಲ್ಲೇ ಶಯನಿಸಿರುವುದು. ಕೆಲಸಮಾಡಿ ಮಾಡಿ, ಬೇಸರು ತೋರಿತೆಂದರೆ, ಆಗ ಒಡನೆ ಆ ತನ್ನ ಹೃದಯಾರಾಧ್ಯ ಮೂರ್ತಿಯನ್ನು ಕೈಗೆ ತೆಗೆದುಕೊಂಡು, ಅಂಗೈಗಳಲ್ಲಿಟ್ಟುಕೊಂಡು, ಕಣ್ಣಾ ರೆನೋಡಿ, ಆನಂದ ಬಾಷ್ಪವನ್ನು ಸುರಿಸುವಳು. ಪರಮ ಪ್ರೇಮದಿಂದ ಮುತ್ತಿಕ್ಕುವಳು. ಎದೆಗಪ್ಪಿಕೊಳ್ಳುವಳು. 'ನನ್ನ ಸ್ವಾಮಿಯೇ, ನನ್ನ ಬಾಂಧವನೇ ನಿನ್ನ ಹೊರತು ನನಗಿನ್ನಾರು ದಿಕ್ಕು, ರಕ್ಷಕರಾರು, ದೇವಾ, ನನ್ನನ್ನು ಈ ದುಃಖಮಯವಾದ ಭವಬಂಧನದಿಂದ ಪಾರುಮಾಡು. ನಿನ್ನ ಇಚ್ಛಾನುಸಾರವಾಗಿ, ಈ ಭವದಲ್ಲಿರುವವರೆಗೆ ನಿನ್ನ ಚರಣಕಮಲಗಳಲ್ಲಿ ನಿರಂತರ ಭಕ್ತಿ ಭಾಗ್ಯವನ್ನು ಕರುಣಿಸು ' ಎಂದು ಮುಂತಾಗಿ ಪ್ರಾರ್ಥಿಸಿ ಕೊಳ್ಳುವಳು ಮಾನುಷಸಾಮಾನ್ಯವಾದ ಅಶಕ್ತತಾ ಮನೋಭಾವ ವೊದಗಿದಾಗಲೂ, ತನ್ನ ಆ ಲೌಕಿಕ ಕಷ್ಟಗಳಿಗಾಗಿ ದುಃಖವುಂಟಾದಾಗಲೂ ಸಹ ಯಾರನ್ನೂ ನಿಂದಿಸದೆ, ಕೆಲಸಮಾಡಲು ಸಾಧ್ಯವಾಗದ ತನ್ನ ಅಶಕ್ತ ತೆಯನ್ನು ತನ್ನಾಸ್ವಾಮಿಯ ಎದುರಿಗೇ ನಿವೇದಿಸಿಕೊಂಡು, ಆ ಮೂರ್ತಿ ಯನ್ನು ಕಣ್ಣೀರಿನಿಂದ ಅಭಿಷೇಕಿಸುವಳು. ನಿರ್ಭಾಗ್ಯಳಾದ ತನ್ನನ್ನೇಕೆ ಭೂಮಿಯಮೇಲೆ ಹುಟ್ಟಿಸಿದೆಯೆಂದು ಪ್ರಶ್ನಿಸುವಳು. ಹಾಗೇ ವ್ಯಸನಾ ಕ್ರಾಂತಳಾಗಿ, ಒಂದು ಬಾರಿ ಆ ಮೂರ್ತಿಯನ್ನು ದಿಟ್ಟಿಸಿನೋಡಿದಳೆಂಬ ವೇಳೆಗೆ ಮನಸ್ಸಿಗೆ ಏನೋ ಒಂದು ಬಗೆಯ ಶಾಂತತೆತೋರುವುದು. ಒಡನೆ ದುಃಖದ ಹೊಬ್ಬು ಹರಿದುಹೋಗುವುದು. ಮುಖದಲ್ಲಿ ಪ್ರಸನ್ನತೆಯು ಕಂಡುಬರುವುದು. ಒಡನೆ ಆ ತನ್ನ ಸ್ವಾಮಿಯನ್ನು ಎದೆಗಪ್ಪಿಕೊಂಡು, ಮುತ್ತಿಕ್ಕಿ ಉಡಿಯಲ್ಲಿಟ್ಟುಕೊಳ್ಳುವಳು.

ಹೀಗೆಯೇ ಕೆಲವುಕಾಲ ನಡೆದು ಬಂತು. ಅತ್ತೆಗೆ ತನ್ನ ಸೊಸೆಯು ಪ್ರತಿಭಟಿಸದೆ ಎದರಾಡದೆ ಮೌನವಾಗಿ ದುಡಿಯುತ್ತಾ ಇದ್ದುದೂ ಸಹ ಸಹನೆಯಾಗಲಿಲ್ಲ. ಹಾಗೆ ಆದುದೂ ಅಸ್ವಾಭಾವಿಕವಲ್ಲ. ಏಕೆಂದರೆ ಸಜ್ಜ ನನಿಗೆ ಸಜ್ಜನನೂ, ಕುಡುಕನಿಗೆ ಕುಡುಕನೂ, ಜೊತೆಗೆ ಇದ್ದು ತನ್ನ ಮಾತು

ಕಥೆ, ಕೆಲಸಗಳೊಂದಿಗೆ ಸಹಕರಿಸುತ್ತಿದ್ದರೆ ಹೇಗೆ ಸಂತೃಪ್ತಿಯೋ, ಚಾಡಿಕೋರನಿಗೂ ಹಾಗೆಯೇ ತಾನು ಹೇಳುವ ಚಾಡಿಮಾತನ್ನು ಕೇಳಿ ನಿಜವೆಂದು ಒಪ್ಪಿ ಮೆಚ್ಚುವ ಒಬ್ಬನಿಲ್ಲದಿದ್ದರೆ ಮನಸ್ಸಿಗೆ ಸಮಾಧಾನವಿರದು. ಜಗಳಗಂಟನಿಗೆ ಶಾಂತಚಿತ್ತನಾದ ಸಮಾಧಾನಿಯು ಬಳಿಯಲ್ಲಿರುವುದು ಒಗ್ಗದು. ಅವನಿಗೆ ಮತ್ತೊಬ್ಬ ಜಗಳಗಂಟನೇ ಸಿಕ್ಕು ತನ್ನ ಮಾತಿಗೆ ಪ್ರತಿಮಾತನ್ನಾಡುತ್ತ ಬೈದರೆ ಬೈಯುತ್ತ, ಹೊಡೆಯುವ ಪ್ರಮೇಯಬಿದ್ದರೆ, ಪ್ರತಿಯಾಗಿ ಹೊಡೆಯಲೂ ಸಿದ್ಧನಾಗಿದ್ದರೇನೇ ಅವನೊಂದಿಗೆ ಸೆಣೆಸುವನು. ಅಷ್ಟಾದಮೇಲೆ ಮಾತ್ರವೇ ಉದ್ರೇಕಗೊಂಡಿದ್ದ ಮನಸ್ಸು ಶಾಂತವಾಗುವುದು ಹಾಗೆಯೇ ನಮ್ಮ ಸಖೂಬಾಯಿಯ ನಿಷ್ಠುರಪ್ರಕೃತಿಯು, ಆ ಅತ್ತೆಗೆ ಪ್ರತಿದ್ವಂದ್ವಿಯಿಲ್ಲದಿದ್ದುದು ಸಮಾಧಾನವಾಗದೆ, ಅವಳನ್ನು ಒಂದಲ್ಲ ಹತ್ತು ಬಗೆಯಲ್ಲಿ ಆಕ್ಷೇಪಿಸಿ ಕೆಲಸದಲ್ಲಿ ಇಲ್ಲಸಲ್ಲದ ತಪ್ಪುಗಳನ್ನು ಕಂಡುಹಿಡಿದು ನಿಂದಿಸಿ, ಅವಳ ತಂದೆತಾಯಿಗಳನ್ನು ಬೈದು, ಮೂದೇವಿಯೆಂದು ಹೀಯಾಳಿಸಿ ಹೀಗೆ ಎಷ್ಟು ಬಗೆಯಿಂದ ಕಾಡುತ್ತಿದ್ದರೂ, ಸಖೂಬಾಯಿಯು ಎಂದಿನಂತೆಯೇ ಸುಮ್ಮನೆ ಇದ್ದುಬಿಟ್ಟಳಲ್ಲದೆ, ಪ್ರತಿಯಾಡಲಿಲ್ಲ. ನಿರಪರಾಧಿಯಾದ ತನ್ನನ್ನು ಆಕ್ಷೇಪಿಸುವುದೇಕೆಂದು ಕೇಳಲಿಲ್ಲ. ಸಜ್ಜನರಾದ ತನ್ನ ಮಾತಾಪಿತೃಗಳನ್ನು ನಿಂದಿಸುವುದೇಕೆಂದು ಪ್ರಶ್ನೆಮಾಡಲಿಲ್ಲ. ಸುಮ್ಮನಿದ್ದುಬಿಟ್ಟಳು. ಒಂದು ದಿನ ಮಧ್ಯಾಹ್ನದ ಎಂಜಲು ಮುಸುರೆಯ ಕೆಲಸಗಳೆಲ್ಲವೂ ಮುಗಿದ ತರುವಾಯ ಜೋಳವನ್ನು ಬೀಸುತ್ತಾ ಕುಳಿತಿದ್ದಳು ನಿಷ್ಕಾರಣವಾಗಿ ಆ ದಿನ ತನ್ನ ಅತ್ತೆಯು ತನ್ನನ್ನೂ ತನ್ನ ತಾಯಿತಂದೆಗಳನ್ನೂ ಬೈದು ಭಂಗಿಸಿದ ಪ್ರಸಂಗವು ಜ್ಞಾಪಕಬಂದು ವ್ಯಸನವು ಅಧಿಕರಿಸಿತು. ಅತ್ತಿತ್ತನೋಡಿ ಅಲ್ಲಿ ಯಾರೂ ಇಲ್ಲದಿದ್ದುದನ್ನು ಕಂಡು, ತನ್ನ ಉಡಿಯಲ್ಲಿದ್ದ ತನ್ನ ಆ ಪ್ರೇಮಮೂರ್ತಿ ವಿಠ್ಠಲ ವಿಗ್ರಹವನ್ನು ಹೊರಕ್ಕೆ ತೆಗೆದು ಕೈಯಲ್ಲಿ ಹಿಡಿದುಕೊಂಡು, ಕಣ್ಣೀರಿಡುತ್ತಾ,— ‘ಭಕ್ತವತ್ಸಲಾ, ಕರೀಂದ್ರವರದಾ, ದ್ರೌಪದೀ ಮಾನಸಂರಕ್ಷಕಾ, ನನ್ನ ಕಷ್ಟಸಂಕಟಗಳು ಸರ್ವಜ್ಞನಾದ ನಿನಗೆ ಇನ್ನೂ ಅರಿಕೆಯಾಗಿಲ್ಲವೆ? ಇದು ಯಾವ ಜನ್ಮದ ದುಷ್ಕರ್ಮ ಫಲವು! ಕೃಪಾಕಟಾಕ್ಷವಿಟ್ಟು ಈ ದೀನಳನ್ನು ಉದ್ಧರಿಸಲಾರೆಯಾ?’’ ಎಂದು ಮುಂತಾಗಿ ಹಂಬಲಿಸಿಕೊಳ್ಳುತ್ತಿದ್ದಳು. ಅಷ್ಟು ಹೊ

ತ್ತಿಗೆ ಸರಿಯಾಗಿ ಆ ಚಂಡಿ ಅತ್ತೆಯು ಬಂದು ಗೋಡೆಯ ಮರೆಯಲ್ಲಿದ್ದು ಅವಳಾಡಿಕೊಂಡ ಮಾತುಗಳನ್ನು ಕೇಳಿಬಿಟ್ಟಳು. ತನ್ನ ಸೊಸೆಯು ಯಾರೊಂದಿಗೋ ಮಾತನಾಡುತ್ತಿದ್ದಾಳೆಂದು ತಿಳಿದು ಇಣಿಕಿನೋಡಲು ಕೈಯಲ್ಲಿ ಏನೋ ಒಂದು ಬೊಂಬೆಯಿದ್ದಂತೆ ಕಾಣಿಸಿತು. ಒಡನೆ ದುರ್ಭಾವನೆಯಿಂದ ಒಳಕ್ಕೆ ಬಂದು ನೋಡಿದಳು. ಅಷ್ಟರೊಳಗಾಗಿ, ಅತ್ತೆ ಬಂದಳೆಂದು ಗಾಬರಿಗೊಂಡ ಸಖೂಬಾಯಿಯು ಆ ವಿಗ್ರಹವನ್ನು ಉಡಿಯಲಿಟ್ಟುಕೊಂಡು ಎಂದಿನಂತೆ ಬೀಸತೊಡಗಿದಳು. ಇದು ಆ ರಕ್ಕಸಿಗೆ ದುರಭಿಪ್ರಾಯವನ್ನು ಹೆಚ್ಚುಮಾಡಿತು. ತನ್ನ ಸೊಸೆಯು ಮಾಟಗಾತಿಯು, ತನಗೂ ತನ್ನ ಮಗನಿಗೂ ಮಾಟಮಾಡಿ ಕೊಲ್ಲಬೇಕೆಂದು ಆ ಬೊಂಬೆಯನ್ನು ಇಟ್ಟುಕೊಂಡಿದ್ದಾಳೆಂದು ಬಗೆದಳು. 'ಆ ಬೊಂಬೆಯೇನು - ಅಳುತ್ತಿದ್ದೆಯೇಕೆ?' ಎಂದು ಅಧಿಕಾರವಾಣಿಯಿಂದ ಪ್ರಶ್ನಿಸಿದಳು. ಸಖೂಬಾಯಿಯು ಉತ್ತರ ಕೊಡಲಿಲ್ಲ. ಒಡನೆ ಕೋಪವು ಮಿತಿಮೀರಿಹೋಗಲು ಸಮೀಪಕ್ಕೆ ಬಂದು, ಅವಳ ಉಡಿಗೆ ಕೈಹಾಕಿ, ಆ ವಿಗ್ರಹವನ್ನು ತೆಗೆದು ಬೀಸಿ ಹಿತ್ತಿಲ ಅಂಗಳಕ್ಕೆ ಎಸೆದುಬಿಟ್ಟಳು. ಎಂದಿನಂತೆ ಆರಂಭಿಸಿದ್ದ ಬೈಗಳಮಳೆಯಂತೂ ನಿಲ್ಲಲೇ ಇಲ್ಲ.

ತನ್ನ ಆರಾಧ್ಯ ಮೂರ್ತಿಯು ಹಾಗೆ ಎಸೆಯಲ್ಪಟ್ಟುದು, ಸಖೂಬಾಯಿಗೆ ತನ್ನ ಹೃದಯವನ್ನೇ ದೇಹದಿಂದ ಕಿತ್ತು ಎಸೆದಂತೆ ಮಹದ್ವ್ಯಸನವನ್ನುಂಟುಮಾಡಿತು. ಒಡನೆ ಎದ್ದು ಓಡಿಹೋಗಿ ಆ ತನ್ನ ಸರ್ವಸ್ವನಿಧಿಯನ್ನು ಎತ್ತಿ ಇಟ್ಟುಕೊಂಡಳು. ಮತ್ತು ಅಂದು ಮಾತ್ರ - 'ಅಯ್ಯೋ ನನ್ನನ್ನು ಎಷ್ಟುಬೇಕಾದರೂ ನಿಂದಿಸಿರಿ. ಈ ಬೊಂಬೆಯು ಪಾಪ, ನಿಮಗೇನುಮಾಡಿತು; ಅದನ್ನೇಕೆ ಕಿತ್ತೆಸೆಯಬೇಕು?' ಎಂದು ನುಡಿದಳು. ಸರಿ ಅಷ್ಟೆ! ಆ ಮಾತುಗಳು ಕಿವಿಗೆ ಬಿದ್ದುದೇ ತಡ. ಹೋ ತನ್ನ ಸೊಸೆಯು ತನಗೆ ಎದುರು ವಾದಿಸಿದಳೆಂದೂ, ತನ್ನ ಮಾತನ್ನು ಆಕ್ಷೇಪಿಸಿದಳೆಂದೂ ಮುಂತಾಗಿ ನೆರೆಹೊರೆಯವರ ಮುಂದೆಲ್ಲಾ ಪಂಚಾಯಿತಿ ನಡೆಸಿ, ಕೂಗಿ ಚೀರಿ ಅಬ್ಬರಿಸಿಬಿಟ್ಟಳು. - 'ಇನ್ನು ಮುಂದೆ ಈ ಮನೆಯಲ್ಲಿರಲು ನನ್ನಿಂದ ಆಗದು!' ಎಂದು ರಕ್ಕಸಿಯಂತೆ ಅಬ್ಬರಿಸುತ್ತಿದ್ದಳು. ಆ ವೇಳೆಗೆ ಸಖೂಬಾಯಿಯ ಗಂಡನು ಮನೆಗೆಬಂದು, ತನ್ನ ತಾಯಿಯ ಆರ್ಭಟವನ್ನು

ಕೇಳಿ ಕಾರಣವೇನೆಂದು ವಿಚಾರಿಸಿದನು.— ತಾಯಿಯು ಒಡನೆ ಕುಂಭದ್ರೋಣ ಮಳೆ ಸುರಿದಂತೆ, ಒಂದಕ್ಕೆ ಹತ್ತು ನೂರು ಸಾವಿರವಾಗಿ, ತನ್ನ ಸೊಸೆಯು ತನ್ನ ಮೇಲೆ ಪ್ರಯೋಗಿಸಿದ ಆಕ್ಷೇಪಣೆಗಳೆಂಬ ಅಕ್ಷಯ ಬಾಣ ಪರಂಪರೆಗಳನ್ನು ವರ್ಣಿಸಿ ವರ್ಣಿಸಿ ಪೇಳಿ - ಹಾಡಿ ಹಾಡಿಕೊಂಡು ಅಳತೊಡಗಿದಳು. ಸಖೂಬಾಯಿಯು ಈ ಅಗಾಧ ಪ್ರಸಂಗವನ್ನು ಕಂಡು, ಏನೂ ತೋರದೆ, ತನ್ನ ಪಾಡಿಗೆ ತಾನು ಬೀಸುತ್ತಾ ಕುಳಿತಿದ್ದಳು. ತನ್ನ ತಾಯಿಯು ನುಡಿದ ಆ ಮಾತುಗಳು ಕಿವಿಗೆ ಬಿದ್ದೊಡನೆಯೇ, ಪೂರ್ವಾಪರ ಜ್ಞಾನವನ್ನರಿಯದ ಆ ನರಪಶುವು ಒಡನೆ ಮೂಲೆಯಲ್ಲಿದ್ದ ಒಂದು ಬೆತ್ತವನ್ನು ಕೈಗೆ ತೆಗೆದುಕೊಂಡು, ಆ ಸಾಧ್ವೀಮಣಿಯ ಬಳಿಗೆ ಬಂದು.—'ನನ್ನ ತಾಯಿಗೆ ಎದುರುತ್ತರ ಕೊಟ್ಟು ಆಕ್ಷೇಪಿಸುತ್ತೀಯಾ ? ಆ-ನನ್ನನ್ನು ಯಾರೆಂದು ತಿಳಿದೆ ?" ಎಂದು ನುಡಿದು ಹತ್ತಾರು ಏಟುಗಳನ್ನು ಸೆಳೆದುಬಿಟ್ಟನು. ಸಖೂಬಾಯಿಗೆ ಬೆನ್ನಮೇಲೂ, ರಟ್ಟೆಗಳಮೇಲೂ ಬಾಸುಂಡೆಗಳು ಮೂಡಿದುವು. ಕಣ್ಣು ಕತ್ತಲಿಟ್ಟುಹೋಯಿತು. ತಲೆ ಗಿರ್ರೆಂದು ತಿರುಗಿ ಆ ಬಾಲಿಕೆಯು ಪಾಪ, ಮೂರ್ಛೆಹೋಗಿ ಬಿದ್ದುಬಿಟ್ಟಳು. ತನ್ನ ಮನಸ್ಸಿನಲ್ಲಿ ಹುಟ್ಟಿದ ಕೋಪವು ಹಾಗೆ ಪರ್ಯವಸಾನವಾದುದನ್ನು ಕಂಡು ಅತ್ತೆಯ ಮನಸ್ಸು ಸಮಾಧಾನವಾಯಿತು. ಅತ್ತೆಯ ಮನೆಯ ಅಗಾಧ ಸುಖಾನುಭವ ಮಾಡಿದ ಸಖೂಬಾಯಿಯು ಹಾಗೆಯೇ ಬಿದ್ದಿದ್ದು-ಬಳಿಕ ಎಷ್ಟೋ ಹೊತ್ತಿನಮೇಲೆ ಎಚ್ಚತ್ತಳು.

— ❧ —

## ಅಧ್ಯಾಯ ೪ "ಪಂಡರಾಪುರಿಗೆ ಪ್ರಯಾಣ"

ಸಾಧ್ವೀಮಣಿ ಸಖೂಬಾಯಿಯು ದುಷ್ಕರ್ಮವಶವಾಗಿ, ಪತಿ-ಅತ್ತೆ ಮಾವಂದಿರಿಂದ ಅಷ್ಟುಮಟ್ಟಿನ ದುಃಖ ಸಂಕಟಗಳಿಗೆ ಒಳಪಟ್ಟಿದ್ದರೂ ಕೂಡ, ಎಂದಿನಂತೆ ಅವರನ್ನು ನಿಂದಿಸದೆ ದ್ವೇಷಿಸದೆ ಯಥಾಪೂರ್ವವಾಗಿ ತನ್ನ ಕೆಲಸಗಳನ್ನು ತಾನು ಮಾಡಿಕೊಂಡು ಇದ್ದುಬಿಟ್ಟಳು. ನಿರಪರಾ

ಧಿಯೂ, ನಿರ್ಗತಿಕಳೂ ಆದ ಆ ಬಾಲಿಕೆಗೆ ಪ್ರಾಪ್ತವಾದ ಅಸಹನೀಯ ದುಃಖವು ನೆರೆಹೊರೆಯಲ್ಲಿ ವಾಸಿಸಿದ ಸ್ತ್ರೀಯರ ಕರುಳು ಮರುಗಿಸಿತು. ಆದರೆ ಅವರಲ್ಲಿ ಯಾರೂ, ಆ ಅತ್ತೆ ರಾಕ್ಷಸಿಯನ್ನು ಕುರಿತು, ನಿಮ್ಮ ಸೊಸೆಯನ್ನು ಸ್ನೇಹ ಪ್ರೇಮಗಳಿಂದ ನೋಡಿಕೊಳ್ಳಲಾಗದೆ ಎಂದು ಸಲಹೆ ಕೊಡುವಷ್ಟು ಧೈರ್ಯಗೊಳ್ಳದಾದರು. ಅವಳ ಬಾಯ ಎದುರುನಿಂತು, ನಿರ್ವಹಿಸಿಕೊಳ್ಳಲು ಯಾರಿಂದ ಸಾಧ್ಯ ? ಒಂದು ದಿನ ಆ ಅತ್ತೆಯ ಕಣ್ಣದುರಿನಿಂದ ಮರೆಯಾಗಿ, ಸಖೂಬಾಯಿಯು, ನೀರಿಗೆಂದು ನದಿಗೆ ಹೋಗಿದ್ದಾಗ, ಅವರಲ್ಲಿ ಕೆಲವರು ಆಕೆಯನ್ನು ಕಂಡು - 'ಅಮ್ಮಾ ಸಖೂ, ಇದೇನೆ ನಿನ್ನ ಅವಸ್ಥೆ ! ನಿನ್ನ ಊರಾವುದು ? ನಿನಗೆ ತಾಯಿತಂದೆಗಳಾರು ? ಒಡಹುಟ್ಟುಗಳಿಲ್ಲವೆ ? ಇದೇನು ಈ ರಾಕ್ಷಸರ ಕೈಗೆ ಸಿಕ್ಕು ಹೀಗೆ ದುಃಖಪಡುವುದು ಇದಾವ ಜನ್ಮದ ಕರ್ಮವೇ ಇದು ? ನಿಮ್ಮ ತಂದೆತಾಯಿಗಳಿಗೆ ಸಮಾಚಾರ ಕಳುಹಿಸಿ ಕೆಲವು ದಿನಗಳಮಟ್ಟಿಗೆ ಅಲ್ಲಿಗಾದರೂ ಹೋಗಿ ಸುಖವಾಗಿರಬಾರದೇನೆ ? ' ಎಂದು ಪ್ರಶ್ನಿಸಿದರು. ಅವರ ಆ ಮಾತನ್ನು ಕೇಳಿ ಸಖೂಬಾಯಿಯು - 'ಅಮ್ಮಾ ಪರದೇಶಿಯಾದ ನನ್ನ ವಿಷಯದಲ್ಲಿ ಇಷ್ಟುಮಟ್ಟಿನ ಪ್ರೀತಿವಿಶ್ವಾಸಗಳನ್ನಿಟ್ಟು, ನನ್ನ ಯೋಗಕ್ಷೇಮವನ್ನು ವಿಚಾರಿಸಿದ್ದಕ್ಕಾಗಿ ನಿಮಗೆಲ್ಲರಿಗೂ ವಂದಿಸುತ್ತೇನೆ. ನನಗೆ ತಾಯಿತಂದೆಗಳೂ, ಬಂಧುಬಾಂಧವರೂ ಇದ್ದಾರೆ. ಜನ್ಮರಹಿತನೂ, ಸೃಷ್ಟಿಸ್ಥಿತಿಲಯಾದಿಗಳಿಗೆ ಕಾರಣಕರ್ತೃವೂ, ಅನಂತಕೋಟಿಬ್ರಹ್ಮಾಂಡಗಳಿಗೆ ಏಕಮಾತ್ರ ನಾಯಕನೂ ಭಕ್ತವತ್ಸಲನೂ, ಸಮಸ್ತ ಪ್ರಪಂಚಗಳಿಗೂ ಆದಿಭೂತನೂ ಆಧಾರ ಸ್ವರೂಪನೂ ಆದ ಶ್ರೀಮನ್ನಾರಾಯಣಸ್ವರೂಪಿಯಾದ ವಿಠ್ಠಲನೇ ನನ್ನ ತಂದೆಯು. ಸರ್ವಲೋಕಮಾತೆಯಾದ ರುಕ್ಮಿಣೀದೇವಿಯೇ ನನ್ನ ತಾಯಿಯು. ಸರ್ವಸಂಗ ಪರಿತ್ಯಾಗಮಾಡಿದವರೂ ಸದಾಚಾರ ಸಂಪನ್ನರೂ, ಜ್ಞಾನನಿಷ್ಠರೂ ಆದ ಭಗವದ್ಭಕ್ತರೇ ನನ್ನ ಒಡಹುಟ್ಟಿದವರು- ಬಂಧುಗಳು ಅಂತಹ ಭಾಗವತಶ್ರೇಷ್ಠರಿಗೆ ನೆಲೆವೀಡಾದ-ಆವಾಸವಾದ ಪಂಢರಾಪುರವೇ ನನ್ನ ಜನ್ಮಭೂಮಿಯು ತಾಯಿಯರೇ, ಈ ಆಶ್ಚರ್ಯಕರ ಪ್ರಪಂಚದಲ್ಲಿ ಅನಂತ ಜೀವರಾಶಿಗಳಲ್ಲಿ ಒಬ್ಬೊಬ್ಬರೂ- ಒಂದೊಂದೂ ತಮ್ಮತಮ್ಮ ಜನ್ಮಾಂತರೀಯ ಕರ್ಮಗಳನ್ನನುಸರಿಸಿ ವಿವಿಧ ಕಷ್ಟಸುಖಗಳ

ಹಾಳಾಗುತ್ತಿರುವುದಲ್ಲದೆ ಯಾರನ್ನು ಯಾರು ಹಿಂಸಿಸುವವರು! ಹಿಂಸೆ ಪಡುವವರು ಯಾರು? ಎಲ್ಲವೂ ಭಗವಂತನ ವಿಚಿತ್ರ ಮಹಿಮೆಯಿಂದ ಸಾಗುತ್ತಿರುವುವು '' ಎಂದು ಬಹು ಸಮಾಧಾನದಿಂದಲೇ ನುಡಿದುಬಿಟ್ಟಳು. ಅಂತಹ ವಿಚಿತ್ರ ದುಃಖಪರಂಪರೆಗಳನ್ನು ಅನುಭವಿಸುತ್ತಿದ್ದಾಗಲೂ, ಮನಸ್ಸಿನಲ್ಲಿ ಲೇಶಮಾತ್ರವೂ ಆ ತನ್ನ ಅತ್ತೆಮನೆಯವರ ಮೇಲೆ ದ್ವೇಷವಿಲ್ಲದೆ ಅವರನ್ನು ದೂಷಣೆಮಾಡದೆ, ಸಮಾಧಾನದಿಂದಲೇ ಇದ್ದ ಆಕೆಯನ್ನು ಕಂಡು ಎಲ್ಲರೂ ಪರಮಾಶ್ಚರ್ಯಪಟ್ಟು, ಆಕೆಯು ಪಾಂಡುರಂಗಸ್ವಾಮಿಯ ಭಕ್ತಶ್ರೇಷ್ಠಳು ಎಂದುಕೊಂಡು ಹೊರಟುಹೋದರು.

ಒಂದಾನೊಂದುದಿನ ಎಂದಿನಂತೆ ಕೃಷ್ಣಾನದಿಗೆ ನೀರಿಗೆಂದು ಹೋಗಿದ್ದಾಗ್ಗೆ, ಶ್ರೀಪಂಢರಾಪುರಕ್ಕೆ ಯಾತ್ರೆಹೋಗುವ ಭಕ್ತಾದಿಗಳ ಗುಂಪೊಂದನ್ನು ಸಖೂಬಾಯಿಯು ನೋಡಿದಳು. ಅವರೆಲ್ಲರೂ ಕೈಯಲ್ಲಿ ತಾಳಗಳನ್ನು ಹಿಡಿದು, ಕಣ್ಣಲ್ಲಿ ಆನಂದಬಾಷ್ಪವನ್ನು ಉದುರಿಸುತ್ತಾ, ಪರಮಾನಂದ ಪರವಶರಾಗಿ ವಿಠ್ಠಲನ ನಾಮಭಜನೆಯಲ್ಲಿದ್ದುದನ್ನು ಕಂಡು, ಸಖೂಬಾಯಿಯು, ತಾನು ಕೊಡವನ್ನು ತೆಗೆದುಕೊಂಡು ನದಿಗೆ ನೀರಿಗಾಗಿ ಬಂದಿದ್ದುದನ್ನು ಮರೆತು, ಕರ್ಣಾನಂದಕರವಾದ ಆ ಭಗವನ್ನಾಮಸಂಕೀರ್ತನೆಯನ್ನು ಕೇಳುತ್ತಾ ಅಲ್ಲೇ ನಿಂತುಬಿಟ್ಟಳು. ಹಾಗೆಯೇ ಎಷ್ಟೋ ಹೊತ್ತು ಕಳೆದುಹೋಯಿತು. ಸಖೂಬಾಯಿಗೆ ಮನೆಯ ಜ್ಞಾಪಕವೇ ಬರಲಿಲ್ಲ. ಮಧ್ಯದಲ್ಲಿ ಜೊತೆಯಲ್ಲಿದ್ದ ಯುವತಿಯೊಬ್ಬಳು,— ' ಇದೇನೆ ಸಖೂ, ಹೊತ್ತಾಗಲಿಲ್ಲವೆ? ಮನೆಗೆ ಬರುವುದಿಲ್ಲವೇನೆ! ಈ ದಿನ ನಿಮ್ಮ ಅತ್ತೆಯು ಪುನಃ ಮಗ್ಗಲು ಮುರಿಯುತ್ತಾಳೆಯೆಂಬ ದಿಗಿಲು ನಿನಗೆ ಸ್ವಲ್ಪವೂ ಇಲ್ಲವೆ?'' ಎಂದಳು. ಆ ಮಾತುಗಳನ್ನು ಕೇಳಿದರೂ, ಸಖೂಬಾಯಿಯ ಮನಸ್ಸು ಚಲಿಸಲಿಲ್ಲ. ಅಲ್ಲಿಂದ ಏಳಬೇಕೆನ್ನಿಸಲಿಲ್ಲ. ಪರವಶಳಾಗಿ ಕೇವಲಚಿತ್ರಪ್ರತಿಮೆಯಂತೆ ಕುಳಿತಿದ್ದ ಆಕೆಯು, ತನ್ನಾ ಸಂಗಾತಿಯನ್ನು ಕುರಿತು, ಇವರೆಲ್ಲರೂ ಪಂಢರಾಪುರಕ್ಕೆ ಹೋಗುತ್ತಾರಂತೆ ! ನಾನೂ ಇವರೊಂದಿಗೇ ಹೋಗಿ ಸ್ವಾಮಿದರ್ಶನ ಮಾಡಿಕೊಂಡು ಬಂದುಬಿಡುತ್ತೇನೆ.'' ಎಂದು ನುಡಿದಳು. ಜತೆಗಾತಿಯು, ಅವಳ ಅತ್ತೆಯ ಕರ್ಕಶಸ್ವಭಾವ, ಗಂಡನ ಚಂಡಿತನ, ಮಾವನ ನಿರ್ದಯತೆ ಮುಂತಾದುವುಗಳನ್ನು ಅವಳ ಜ್ಞಾಪಕಕ್ಕೆ

ತಂದು ಹೇಳಿದ ಹಿತವಾದಗಳೆಲ್ಲವೂ ಏನೂ ಪ್ರಯೋಜನಕ್ಕೆ ಬರಲಿಲ್ಲ. ತರುವಾಯ ಇನ್ನು ಸಖೂಬಾಯಿಯು ಅಲ್ಲಿಂದ ಏಳಲಾರಳೆಂಬುದನ್ನು ತಿಳಿದ ಶಾಂತಾಬಾಯಿಯೆಂಬ ಆಕೆಯ ಜತೆಗಾತಿಯು ಮನೆಗೆಬಂದು, ಸಖೂನ ಅತ್ತೆಯ ಎದುರಿಗೆ ನಿಮ್ಮ ಸೊಸೆಯು ಪಂಡರಾಪುರಕ್ಕೆ ಹೋಗುವ ಯಾತ್ರಿಕರೊಂದಿಗೆ ತಾನೂ ಹೋಗುತ್ತೇನೆಂದು ನದೀ ತೀರದಲ್ಲಿ ಕುಳಿತಿದ್ದಾಳೆ.' ಎಂದು ಹೇಳಿಬಿಟ್ಟಳು.

ಆ ಮಾತನ್ನು ಕೇಳಿದೊಡನೆಯೇ, ಸಖೂಬಾಯಿಯ ಗಂಡನೂ ಮತ್ತು ಅತ್ತೆಯೂ ರೋಷಭೀಷಣರಾಗಿ ಬಾಯಲ್ಲಿ ಅವಳ ವಿಷಯವಾಗಿ ಉಚಿತಾನುಚಿತಗಳೆಂಬ ವಿವೇಚನೆಯಿಲ್ಲದೆ. ಹಲವು ಬಗೆಯ ವಾಕ್ಯಗಳನಾಡುತ್ತ, ನದೀತೀರಕ್ಕೆ ಬಂದರು. ಅಲ್ಲ ಭಕ್ತಬೃಂದದಲ್ಲಿ ಕೈಚಪ್ಪಾಳೆಗಳಿಂದ ತಾಳಹಾಕುತ್ತಾ, ವಿಠ್ಠಲನ ನಾಮಸಂಕೀರ್ತನೆಯಿಂದ ಇಹವನ್ನೇ ಮರೆತು ಪರಮಾನಂದಸಾಗರದಲ್ಲಿ ಓಲಾಡುತ್ತಾ ಕುಳಿತಿದ್ದ ಆ ಸಾಧ್ವೀರತ್ನವನ್ನು ಕಂಡು ಕೋಪವು ಮಿತಿಮೀರಲು, ಬೆನ್ನ ಎಲುಬುಗಳು ಮುರಿದುಹೋಗುವಂಥೆ ಧಪಧಪನೆಂದು ಬೆನ್ನಮೇಲೂ, ಕೆನ್ನೆಗಳಮೇಲೂ ಹೊಡೆದು, ಬಾಯಿಗೆ ಬಂದಂತೆ ಬೈದು ನಿಂದಿಸುತ್ತಾ, ಜಡೆಯನ್ನು ಹಿಡಿದು ಎತ್ತಿ ತಳ್ಳಿಕೊಳ್ಳುತ್ತಾ ಮನೆಗೆ ಕರೆತಂದು, ಒಂದು ನೂಲ ಹಗ್ಗವನ್ನು ತೆಗೆದುಕೊಂಡು, ಕಂಭಕ್ಕೆ ಕಟ್ಟಿಹಾಕಿ, ಕೈಕಾಲು ನ್ನೆಗಳು ಕೊರೆದುಹೋಗುವಂತೆ ಬಿಗಿದು ಬಿಟ್ಟರು. ಆ ಏಟುಗಳನ್ನೂ, ಎಳೆದಾಟವನ್ನೂ ಸಹಿಸಿಕೊಂಡು, ಹಾಗೆ ಕಂಭಕ್ಕೆ ಕಟ್ಟಲ್ಪಟ್ಟಾಗಲೂ ಸಹ ಆ ಸಾಧ್ವೀರತ್ನವು, ಮನಸ್ಸಿನಲ್ಲಿ ಲೇಶಮಾತ್ರವೂ ಕಾತರಗೊಳ್ಳದೆ, 'ವಿಠ್ಠಲ ವಿಠ್ಠಲ, ಜಯ ಜಯವಿಠ್ಠಲ, ಪಾಂಡುರಂಗ ವಿಠ್ಠಲ' ಎಂದು ಪಾಂಡುರಂಗನ ಮಂಗಳಕರ ನಾಮಗಳನ್ನು ಭಜನೆ ಮಾಡುತ್ತಲೇ ಇದ್ದಳು. ನಿರ್ದಯರಾದ ಆ ನರಪಶುಗಳು, ಅಷ್ಟು ಮಟ್ಟಿಗೆ ಶಿಕ್ಷಿಸಿದ ಮೇಲೂ ಅವಳ ಕಟ್ಟುಗಳನ್ನು ಬಿಚ್ಚದೆಯೂ, ಅನ್ನ ನೀರುಗಳನ್ನು ಕೊಡದೆಯೂ, ಹಾಗೆಯೇ ಬಿಟ್ಟುಬಿಟ್ಟರು.

ಆ ದಿನ ಮಧ್ಯರಾತ್ರಿಯ ವೇಳೆಯಲ್ಲಿ ಒಂದು ಚಮತ್ಕಾರ ನಡೆಯಿತೆಂದು ಒಂದು ಕಥೆಯು ಆಕೆಯ ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ. ಅಘಟನ ಘಟನಾ ಪಟೀಯನಾದ ಲೋಕೇಶ್ವರನ ವಿಚಿತ್ರಮಹಿಮೆಯಿಂದ ಲೋಕ

ದಲ್ಲಿ ಎಂತೆಂತಹ ಆಶ್ಚರ್ಯಕರ ಸಂಗತಿಗಳು ನಡೆಯುವುವೆಂದು ಹೇಳಲಳವಲ್ಲ. ಅಲ್ಲದೆ, ಭಕ್ತಾಪಾಯಭುಜಂಗಗಾರುಡಮಣಿಯಾದ ಶ್ರೀ ವಿಷ್ಣುಮೂರ್ತಿಯಾದರೂ, ತನ್ನ ಭಕ್ತರನ್ನು ಸಂರಕ್ಷಿಸುವುದಕ್ಕಾಗಿ, ಎಂತೆಂತಹ ವಿಚಿತ್ರ ಪರಿಸ್ಥಿತಿಗಳಿಗೆ ಒಳಪಡುವನೆಂಬುದನ್ನು ಹೇಳಲಿಕ್ಕೆ ಬಾರದು. ಲೀಲಾವಿನೋದಿಯಾದ ಪರಮಾತ್ಮನು, ಆಗ ಒಂದು ಲೀಲೆಯನ್ನು ಆಡಿ ಸಂತೋಷಪಡಲು - ಅಲ್ಲಲ್ಲ, ತನ್ನ ಭಕ್ತೋತ್ತಮಳಾದ ಸಖೂಬಾಯಿಯನ್ನು ಸಂತೋಷಪಡಿಸಲು ಇಚ್ಛಿಸಿದನು. ಈ ಸಂದರ್ಭದಲ್ಲಿ ನಡೆಯಿತೆಂದು ಆಕೆಯ ಚರಿತ್ರೆಯಲ್ಲಿ ಹೇಳಲ್ಪಟ್ಟಿರುವ ಕಥೆಯು ಅತಿ ವಿಚಿತ್ರವಾದುದು. ಭಗವಂತನ ಮತ್ತು ಭಗವದ್ಭಕ್ತವರ್ಯರ ಕ್ರಿಯೆಗಳು ಮತ್ತು ಮಹಿಮೆಗಳು ಮುಂತಾದ ಸಂಗತಿಗಳಲ್ಲಿ, ಶ್ರದ್ಧಾವಿಶ್ವಾಸಗಳಿಲ್ಲದ, ಭಾವುಕರಲ್ಲದವರು ಈಕಥೆಯನ್ನು-'ಸುಳ್ಳು, ಸುಳ್ಳು, ಶುದ್ಧಸುಳ್ಳು- ಅಸಂಭವ' ಎಂದು ಒಂದೇ ಮಾತಿನಲ್ಲಿ ತೀರ್ಮಾನಿಸಿಬಿಡಲು ಸಾಧ್ಯ! ಆದರೆ, ಭಾವುಕರಾದ ಜನರು, ಅಘಟನಘಟನಾ ಸಾಮರ್ಥ್ಯವುಳ್ಳ ಪರಮಾತ್ಮನು ಸ್ವಯಂ ಸೃಷ್ಟಿಕರ್ತನಾಗಿರುವಾಗ, ಸ್ವತಃ ಇಚ್ಛೆಗೊಂಡರೆ ಆತನಿಂದ ಯಾವ ಕೆಲಸಮಾಡಲು ಸಾಧ್ಯ-ಯಾವುದಸಾಧ್ಯ ? ಗಸಗಸೆಷ್ಟು ಆಲದ ಬೀಜದಲ್ಲಿ ಅಗಾಧ ವೃಕ್ಷವಾಗುವ ಶಕ್ತಿಯನ್ನೂ ಮನುಷ್ಯ, ಮೃಗ ಪಶು ಪಕ್ಷ್ಯಾದಿಗಳ ಶರೀರದಲ್ಲಿ ಸ್ವಸ್ವರೂಪದ ಪ್ರಾಣಿಗಳನ್ನು ಸೃಷ್ಟಿಮಾಡುವ ಶಕ್ತಿಯನ್ನೂ ಇಟ್ಟಿರುವ ಜಗನ್ನಾಟಕ ಸೂತ್ರಧಾರಿಯಾದ ಸರ್ವಶಕ್ತನಿಗೆ ಅಸಾಧ್ಯವಾದುದಾವುದು? ಎಂದು ನಂಬಿ, ಆಕೆಯ ಚರಿತ್ರೆಯಲ್ಲಿ ನಡೆದುದೆಂದು ಹೇಳಲ್ಪಟ್ಟಿರುವ ಈ ಕಥೆಯನ್ನೂ ಶತಾಂಶ ನಿಶ್ಚಯವೆಂದು ನಂಬುವರು. ನಾವು ಪ್ರತ್ಯಕ್ಷ ಕಾಣದಿದ್ದರೂ ನಿಜವೆಂದು ನಂಬಬೇಕಾಗಿರುವ ಹಲವು ಸಂಗತಿಗಳು ವ್ಯವಹಾರದಲ್ಲಿ ಒದಗುವುವಲ್ಲವೆ? ಆದರೆ, ಪ್ರತ್ಯಕ್ಷವಾಗಿ ಕಾಣದಿದ್ದುದನ್ನು ನಂಬಲಾರೆವೆಂದು ಸೋಗುಮಾಡಿ, ಈ ಕಥೆಯೂ ಚರಿತ್ರೆಯೂ ಎಲ್ಲವೂ ಸುಳ್ಳು- ಎನ್ನುವವರಿಗೆ ಅವರು ಕಣ್ಣಿನಿಂದ ಕಂಡಿರದಿದ್ದ, ಅವರ ಅಜ್ಜಅಜ್ಜಿಯರಿಂದಲೇ, ಅವರ ತಂದೆತಾಯಿಯರು ಹುಟ್ಟಿಬಂದರೆಂಬುದನ್ನು ತಾನೇ ಹೇಗೆ ನಿಶ್ಚಯಿಸಿಕೊಡಲು ಸಾಧ್ಯ!

ಇದಂತಿರಲಿ- ಇತ್ತ ಆ ದಿನರಾತ್ರಿ ವಿಠ್ಠಲನು, ತನ್ನಾಭಕ್ತಳ ಅಪೇಕ್ಷೆಯನ್ನು ಪೂರ್ಣಗೊಳಿಸಲು ಇಚ್ಛಿಸಿದನು. ಯಾತ್ರಿಕರ ಗುಂಪಿನಲ್ಲಿನ ಒಬ್ಬ ಸ್ತ್ರೀಯಂತೆ ವೇಷಧಾರಣಮಾಡಿ, ಸಖೂಬಾಯಿಯು ಕಟ್ಟಲ್ಪಟ್ಟಿದ್ದ ಕಂಭದ ಬಳಿಗೆ ಬಂದು, ವಿಠ್ಠಲಸ್ವಾಮಿಯು- 'ಅಮ್ಮಾ ನೀನು ನಿಶ್ಚಯವಾಗಿ ಪಂಡರಾಪುರಕ್ಕೆ ವಿಠ್ಠಲನ ಸನ್ನಿಧಿಗೆ ಹೋಗಲು ಇಚ್ಛಿಸಿದ್ದೀಯಾ?' ಎಂದು ಕೇಳಿದಂತಾಯಿತು. ಕೈ ಮೈಗಳು ಕೊರೆದುಹೋಗುವಂತೆ ಹಗ್ಗದಿಂದ ಬಿಗಿಯಲ್ಪಟ್ಟು ಕೈಮುಗಿದುಕೊಂಡು ಕಣ್ಣೀರು ಸುರಿಸುತ್ತ, ಆದರೂ ಪರಮಾನಂದದಿಂದ ಶ್ರೀ ವಿಠ್ಠಲನ ಭಜನೆಯಲ್ಲಿ ತೊಡಗಿ ಮೈಮರೆತಿದ್ದ ಸಖೂಬಾಯಿಯು, ಅಕಸ್ಮಾತ್ತಾಗಿ ತನ್ನ ಕಿವಿಗೆ ಬಿದ್ದ ಆ ಮಾತುಗಳಿಗಾಗಿ ಪರಮಾಶ್ಚರ್ಯಪಟ್ಟು, ಕಣ್ಣುಬಿಟ್ಟು ನೋಡಿ, ಒಂದು ಬಾರಿ ನಿಟ್ಟುಸಿರುಬಿಟ್ಟು- 'ಅಯ್ಯೋ ನಿರ್ಭಾಗ್ಯಳಾದ ನನಗೆ ಅಂತಹ ಲಭ್ಯವುಂಟೆ!'' ಎಂದು ನುಡಿದಳು. ಆಗ ಆ ವೇಷಧಾರೀ ವಿಠ್ಠಲನು- 'ಮಗು ಸಖೂ, ಯೋಚಿಸಬೇಡಮ್ಮಾ ಹೋಗುವೆಯಂತೆ!'' ಎಂದು ನುಡಿದು ಸದ್ದಾಗದಂತೆ ಆ ಕಟ್ಟುಗಳನ್ನೆಲ್ಲ ಬಿಚ್ಚಿ ಆಕೆಯನ್ನು ನದೀತೀರದವರೆಗೆ ಕರೆತಂದು, ಅಲ್ಲೇ ಮಂಟಪದಲ್ಲ ಇಳಿದಿದ್ದ ಆ ಭಕ್ತವೃಂದದಲ್ಲಿ ಬಿಟ್ಟು- 'ಅಮ್ಮಾ ಸಖೂ, ನಿಶ್ಚಿಂತಳಾಗಿ ಇವರೊಂದಿಗೆ ವಿಠ್ಠಲನ ಸನ್ನಿಧಿಗೆ ಹೋಗಿ ದರ್ಶನಮಾಡಿಬಾ' ಎಂದು ಹೇಳಿದನು. ಆಗ ಸಖೂಬಾಯಿಯು- 'ಅಮ್ಮಾ ದೀನಳಾದ ನನ್ನ ವಿಷಯದಲ್ಲಿ ಇಷ್ಟುಮಟ್ಟಿಗೆ ಕನಿಕರಪಡುವ ನೀನು ಯಾರೋ ಪರಿಚಯವಾಗಲಿಲ್ಲ. ನಾನೇನೋ ಮನೆಯಿಂದ ಹೊರಟುಬಂದುಬಿಟ್ಟೆ, ನನ್ನ ವಿಚಾರವು ಮನೆಯಲ್ಲಿ ನನ್ನ ಅತ್ತೆಗೂ ಪತಿಗೂ ತಿಳಿಯಿತೆಂದರೆ ಒಡನೆ ನನ್ನನ್ನು ಎಲ್ಲಿದ್ದರೂ ಹುಡುಕಿ ಜೀವಂತ ದಹಿಸಿಬಿಡುವರು. ಇದಕ್ಕೇನು ಮಾಡುವುದು?'' ಎಂದಳು. ಆಗಲಾವೇಷಧಾರಿಣಿಯು-' ಯೋಚಿಸಬೇಡ. ನಾನು ನಿನ್ನಂತೆಯೇ ವೇಷವನ್ನು ಧರಿಸಿ ನಿಮ್ಮ ಮನೆಯಲ್ಲಿದ್ದುಬಿಡುವೆನು. ನೀನು ನಿಶ್ಚಿಂತೆಯಿಂದ ಈ ಸಾಧುಗಳೊಂದಿಗೆ ಹೋಗಿ ಸ್ವಾಮಿ ದರ್ಶನಮಾಡಿಕೊಂಡು ಬಂದುಬಿಡು, ಯೋಚಿಸಬೇಡ. ಎಲ್ಲವೂ ಸುರಕ್ಷಿತವಾಗಿ ನಡೆಯುವುದು. ಹೋಗು' ಎಂದು ಹೇಳಿದಳು.

ಸಖೂಬಾಯಿಗೆ ಆ ಸಂದರ್ಭದಲ್ಲಿ, - ತನ್ನ ಬದಲಿಗೆ ಅವಳು ತನ್ನ ಮನೆಯಲ್ಲಿ ಇರುವುದು ಹೇಗೆ ಸಾಧ್ಯ ? ರೂಪು ಗುಣನಡತೆಗಳನ್ನು ತಿಳಿದು ತನ್ನ ಅತ್ತೆ ಮಾವಂದಿರು ಸಂದೇಹಗೊಳ್ಳದೆ ಇರುವರೆ - ಎಂಬುದೊಂದೂ ತೋರಲಿಲ್ಲ. ಭಕ್ತ್ಯಾಧಿಕ್ಯದಿಂದ ಹುಚ್ಚುಳಂತಾಗಿದ್ದ ಆ ಸಾಧ್ವಿಯು, ಮಿಕ್ಕ ಎಲ್ಲಾ ಯೋಚನೆಗಳನ್ನೂ ಮನಸ್ಸಿನಿಂದ ದೂರಕ್ಕೆ ತಳ್ಳಿ- ' ವಿಠ್ಠಲ ವಿಠ್ಠಲ, ಪಾಂಡುರಂಗವಿಠ್ಠಲ, ಪುಂಡರೀಕ ವರದವಿಠ್ಠಲ '' ಎಂದು ಮುಂತಾಗಿ ಭಜನೆ ಮಾಡುತ್ತ ಆನಂದಸಾಗರದಲ್ಲಿ ಓಲಾಡುತ್ತ ಪ್ರಯಾಣಮಾಡಿಬಿಟ್ಟಳು. ಭಾವನಾ ಪ್ರಪಂಚದಲ್ಲಿ ತನ್ಮಯಳಾಗಿ ಭಜನೆಮಾಡುತ್ತಿದ್ದ ಅವಳಿಗೆ ಮಾ ರ್ಗ ಮ ಧ್ಯ ದ ಲ್ಲಿ, ಒಂದು ವೇಳೆ ದಿವ್ಯದರ್ಶನವುಂಟಾಗಿ ರುಕ್ಮಿಣೀ ಸತ್ಯಭಾಮಾ ಸಮೇತನಾದ ಶ್ರೀ ಕೃಷ್ಣಸ್ವಾಮಿಯು ಪ್ರತ್ಯಕ್ಷವಾದಂತಾಯಿತು. ಸಖೂಬಾಯಿಯು ತನ್ನ ಹೃದಯಾಂತರ್ಯಾಮಿಯಾಗಿದ್ದ ಆ ದೇವದೇವೋತ್ತಮನ ದಿವ್ಯ ಸುಂದರ ವಿಗ್ರಹವನ್ನು ಎದುರಿನಲ್ಲಿ ಕಂಡು ಪರಮಾನಂದಸ್ವಾಂತಳಾಗಿ ಭಗವಂತನ ಕಲ್ಯಾಣಗುಣಗಳನ್ನು ಮನಸಾರೆ ಹೊಗಳಿದಳು. ದೈವಾವೇಶ ಬಂದವಳಂತೆ, ಭಗವದ್ದರ್ಶನದಿಂದ ಬಾಹ್ಯಜ್ಞಾನವೇಯಿಲ್ಲದೆ, ಕೇವಲ ಅಂತರ್ಮುಖಿಯಾಗಿ ಇದ್ದ ಆಕೆಯನ್ನು ಕಂಡು ಆ ಗುಂಪಿನಲ್ಲಿದ್ದವರೆಲ್ಲರೂ, ಆಕೆಯಾರೋ ಮಹಾನುಭಾವಳೆಂದೂ, ವಿಠ್ಠಲಸ್ವಾಮಿಯ ಪರಮಾನುಗ್ರಹಕ್ಕೆ ಪಾತ್ರಳೆಂದೂ ತಿಳಿದು, ಆಕೆಯ ಬಳಿಗೆಬಂದು ಕೈ ಜೋಡಿಸಿಕೊಂಡು - 'ಅಮ್ಮಾ ಸಾಧ್ವೀಮಣಿ, ನೀನು ಯಾರಮ್ಮಾ, ಎಲ್ಲಿಗೆ ಹೊರಟಿರುವೆ? ' ಎಂದು ಮುಂತಾಗಿ ಪ್ರಶ್ನಿಸಿದರು. ಅದಕ್ಕೆ ಸಖೂಬಾಯಿಯು - 'ಅಪ್ಪಾ ನಾನೊಬ್ಬ ಅನಾಥಳು. ಶ್ರೀ ವಿಠ್ಠಲಮೂರ್ತಿಯ ದರ್ಶನಮಾಡಿ ಬರಬೇಕೆಂದು ಹರಿಪ್ರೇರಣೆಯಾದುದರಿಂದ ಹೊರಟಿದ್ದೇನೆ' ಎಂದು ನುಡಿದಳು. ಮುಂದೆ, ಎಲ್ಲರೂ ಪ್ರಯಾಣಮಾಡಿ, ಪಂಡರಾಪುರದ ಸಮೀಪಕ್ಕೆ ಬಂದರು. ಸಖೂಬಾಯಿಯು ದೂರದಿಂದಲೇ ವಿಠ್ಠಲದೇವಾಲಯದ ಗೋಪುರ ಪ್ರಾಕಾರಾದಿಗಳನ್ನು ನೋಡಿ, ರೋಮಾಂಚವಾಗಿ ಕಣ್ಣುಗಳಿಂದ ಆನಂದಾಶ್ರುಯುಗಳು ಸುರಿಯುತ್ತಿರಲು ಹೆಜ್ಜೆ ನಮಸ್ಕಾರಗಳನ್ನು ಹಾಕಲಾರಂಭಿಸಿದಳು. ಆ ಸಾಧುಗಳೆಲ್ಲರೂ, ಆ ಯುವತಿಯ ಭಕ್ತಿಭಾಗ್ಯಕ್ಕೆ ಅದ್ಭುತಗೊಂಡರು. ಬಾಯಲ್ಲಿ, ನಾರಾಯಣ,

ಗೋವಿಂದ, ಮುಕುಂದ, ಮುರಮರ್ದನ, ವಿಠ್ಠಲ ಮುಂತಾದ ಭಗವನ್ನಾಮೋಚ್ಚಾರಣೆಯಲ್ಲದೆ, ಬೇರೊಂದು ಶಬ್ದವೇ ಇಲ್ಲದೆ, ಸಖೂಬಾಯಿಯು ಪರಮೋತ್ಸಾಹದಿಂದ ಪ್ರಯಾಣಮಾಡಿ, ಪಂಡರಾಪುರಿಯನ್ನು ಸೇರಿ, ಪುಣ್ಯತಮವಾದ ಚಂದ್ರಭಾಗಾನದಿಯಲ್ಲಿ ಸ್ನಾನವನ್ನು ತೀರಿಸಿಕೊಂಡು, ದೇವಾಲಯವನ್ನು ಪ್ರವೇಶಿಸಿ, ತಾನು ಬಹು ದಿನಗಳಿಂದಲೂ ಹೃದಯಕ್ಕು ಹರವಲ್ಲಿಟ್ಟುಕೊಂಡು ಆರಾಧಿಸುತ್ತಿದ್ದ ಯೋಗಿಜನಮಂದಾರನಾದ ಸ್ವಾಮಿಯನ್ನು ಕಣ್ಣಾರೆ ದರ್ಶನಮಾಡಿ ಧನ್ಯಳಾದಳು. ದಿನದಿನವೂ ಆ ಪುಣ್ಯತೀರ್ಥದಲ್ಲಿ ಸ್ನಾನಮಾಡುತ್ತಲೂ, ದೇವಾಲಯದಲ್ಲಿ ಪ್ರದಕ್ಷಿಣೆ ನಮಸ್ಕಾರ ನಾಮಭಜನೆ ಮುಂತಾದುವುಗಳಲ್ಲಿ ನಿರತಳಾಗಿದ್ದು ಸ್ವಾಮಿಗೆ ನಡೆಯುತ್ತಿದ್ದ ಬಗೆಬಗೆಯ ಉತ್ಸವವೈಭವಗಳನ್ನು ಕಣ್ತುಂಬ ನೋಡುತ್ತಲೂ ತನ್ನ ಸಮಾನಭಾಗ್ಯಶಾಲಿನಿಯು ಲೋಕದಲ್ಲೇ ಇಲ್ಲವೆಂದು ಪರಮ ಸಂತುಷ್ಟಳಾಗಿದ್ದುಬಿಟ್ಟಳು.



## ಅಧ್ಯಾಯ ೫ "ಮಹಾಲಕ್ಷ್ಮೀವರಪ್ರಸಾದ"

ಸಖೂಬಾಯಿಯು ಮೇಲ್ಕಂಡಂತೆ, ಹರಿಸೇವೆಯಲ್ಲಿ ಮಗ್ನಳಾಗಿ ಪಾಂಡುರಂಗಸ್ವಾಮಿಯ ಸನ್ನಿಧಿಯಲ್ಲಿದ್ದ ಕಾಲದಲ್ಲಿ, ಇತ್ತ ಆಕೆಯ ಅತ್ತೆಯ ಮನೆಯಲ್ಲಿ, ನಡೆಯಿತೆಂದು ಹೇಳಲ್ಪಟ್ಟಿರುವ ವಿಚಾರವು ಇನ್ನೂ ವಿಸ್ಮಯಕರವಾಗಿರುವುದು. ಸಖೂಬಾಯಿಯನ್ನು ಯಾತ್ರಿಕರೊಂದಿಗೆ ಪಂಡರಾಪುರಿಗೆ ಕಳುಹಿಸಿದ ತರುವಾಯ, ಸ್ತ್ರೀವೇಷಧಾರಿಯಾಗಿದ್ದ ವಿಠ್ಠಲಸ್ವಾಮಿಯು, ನೇರವಾಗಿ ಆಕೆಯ ಅತ್ತೆಯ ಮನೆಗೆಬಂದು, ಅಲ್ಲಿ ಸಖೂಬಾಯಿಯನ್ನು ಕಟ್ಟಿಹಾಕಿದ್ದ ಕಂಭಕ್ಕೆ ನಿಂತುಕೊಂಡು ಹಗ್ಗದ ಬಂಧನವನ್ನು ತೊಡಗಿಸಿಕೊಂಡನಂತೆ! ಮಾರನೆಯ ಪ್ರಾತಃಕಾಲ, ಮನೆಯಲ್ಲಿದ್ದ ಆಕೆಯ ಅತ್ತೆಯೂ ಗಂಡ ಮತ್ತು ಮಾವಂದಿರೂ ಎದ್ದು ನೋಡಲಾಗಿ ಎಂದಿನಂತೆ ಸಖೂಬಾಯಿಯೇ ಕಂಭಕ್ಕೆ ಬಿಗಿಯಲ್ಪಟ್ಟು ಇದ್ದುದು ಕಾಣಬಂದಿತು.

ಕಣ್ಣುಗಳು ಮುಚ್ಚಿವೆ, ಕಣ್ಣಿಂದ ಆನಂದಬಾಷ್ಪವೋ ಅಥವ ದುಃಖಾಶ್ರುವೋ, ಎಂತೂ ಜಲಧಾರೆಯು ನಿರಂತರವಾಗಿ ಸುರಿಯುತ್ತಿದೆ ಕೈಕಾಲುಗಳು ಬಿಗಿದುಹೋಗಿವೆ. ಹತ್ತಿರಕ್ಕೆ ಬಂದು ನೋಡಿದರು. ತುಟಿಗಳು ಮಾತ್ರ ಅಲುಗಾಡುತ್ತಿವೆ. ಸಮೀಪದಲ್ಲಿ ಕಿವಿಗೊಟ್ಟು ಕೇಳಿದರು-ವಿಠ್ಠಲ ವಿಠ್ಠಲ, ಪಾಂಡುರಂಗವಿಠ್ಠಲ, ಎಂಬ ಮುಂತಾದ ಭಗವನ್ನಾಮೋಚ್ಚಾರಣೆಯಾಗುತ್ತಿದೆ. ಗಂಡ ಮತ್ತು ಅತ್ತೆ ಈ ಇಬ್ಬರೂ ಕೆಲಹೊತ್ತು ದಿಟ್ಟಿಸಿನೋಡುತ್ತಾ ನಿಂತುಕೊಂಡರು. ಹಾಗೆ ಸ್ವಲ್ಪಹೊತ್ತು ನೋಡುತ್ತಿರಲಾಗಿ, ಅಂದು ಏಕೋ ಅವರ ಮನಸ್ಸು ವ್ಯತ್ಯಸ್ತವಾದಂತಾಯಿತು. ಆಕೆಯ ವಿಷಯದಲ್ಲಿ ದಯಾಭಾವವಂಕುರಿಸಿತು.-'ಅಯ್ಯೋ ಪಾಪ ಪರದೇಶಿ ಹುಡುಗಿ, ಬಹುನೊಂದಳು' ಎಂದುಕೊಂಡು ಒಡನೆ ಆ ಕಟ್ಟುಗಳನ್ನು ಬಿಚ್ಚಿದರು. ಗಂಡನು, ಇನ್ನು ಮನೆಗೆಲಸಗಳನ್ನೂ ಅಡಿಗೆಯನ್ನೂ ಮಾಡೆಂದನು. ರೂಪಧಾರಿಣಿಯಾದ ಸಖೂಬಾಯಿಯು. ಒಡನೆ ಎಂದಿನಂತೆಯೇ ಮನೆಯ ಕೆಲಸಕಾರ್ಯಗಳನ್ನು ಮಾಡತೊಡಗಿದಳು. ಪ್ರಾತಃಕಾಲದಿಂದ ಹಿಡಿದು ರಾತ್ರಿ ಹತ್ತು ಗಂಟೆಯವರೆಗೂ ಹಿಂದೆ ಮಾಡುತ್ತಿದಂತೆಯೇ, ದನಕರುಗಳ ಸಗಣಿ ಗಂಜಲಗಳನ್ನು ಬಳಿಯುವಿಕೆ, ಪಾತ್ರೆಪದಾರ್ಥಗಳನ್ನು ಶುದ್ಧಿಗೊಳಿಸುವಿಕೆ, ಎಂಜಲು ಮುಸುರೆ, ನೀರುಸೇದುವುದು, ಬಟ್ಟೆಯೊಗೆಯುವುದು, ಕುಟ್ಟುವುದು ಬೀಸುವುದು ಎಲೆ ಹಚ್ಚುವುದು, ಒಂದಿಗೇ ಅಡಿಗೆಮಾಡಿ ಎಲ್ಲರಿಗೂ ಬಡಿಸುವುದು, ಮುಂತಾದ ಸಮಸ್ತ ಕಾರ್ಯಗಳೂ ಯಥಾಕ್ರಮವಾಗಿ ನಡೆಯುತ್ತಿದ್ದುವು. ಅಡಿಗೆ ಮಾಡುವ ಕೆಲಸವು ಹೊಸದಾಗಿ ವಹಿಸಲ್ಪಟ್ಟುದಾದರೂ, ಆಕೆಯು ಮಾಡಿದ ಷಡ್ರಸೋಪೇತವಾದ ಆ ಅಡಿಗೆಯನ್ನು ಊಟಮಾಡಿದವರು, ಅಂತಹ ರುಚಿಕರವಾದ ಅಡಿಗೆಯನ್ನು ತಮ್ಮ ಜನ್ಮದಲ್ಲೇ ಊಟಮಾಡಿರಲಿಲ್ಲವೆಂದುಕೊಂಡರು. ಆಕೆಯ ಜಾಣ್ಮೆಯನ್ನು ಬಹು ಬಗೆಯಿಂದ ಪ್ರಶಂಸಿಸಿದರು. ಆಕೆಯ ವಿಷಯದಲ್ಲಿ ಪತಿಗೂ ಅತ್ತೆಮಾವಂದಿರಿಗೂ ಬಾಯಿಂದ ವ್ಯಕ್ತಪಡಿಸಲಾಗದಂತಹ ಒಂದು ಬಗೆಯ ಪ್ರೇಮಭಾವವು ಉದಯಿಸಿತು. ಮುಂದೆ ಆ ಮನೆಯಲ್ಲಿ ಆಕೆಯ ಜೀವನವು, ಸುಲಲಿತವಾಗಿ ಸಾಗಿತೆಂದು ಹೇಳಬೇಕಾದುದಿಲ್ಲ. ವೈಕುಂಠಾಧಿಪತಿಯಾದ ಸಾಕ್ಷಾತ್ ವಿಠ್ಠಲಸ್ವಾಮಿಯೇ ಭಕ್ತರಕ್ಷಣೆಗಾಗಿ, ಆದೊಂದು

ಬಗೆಯ ವಿಚಿತ್ರಲೀಲೆಯನ್ನು ಕೈಕೊಂಡು ನಿಂತಿರುವಾಗ ಈ ನೂತನ ಸಖೂಬಾಯಿಯ ಗುಣ ನಡತೆ ಮಾತು ಕಥೆಗಳಲ್ಲಿ ಮನೆಯವರಿಗೆ ಯಾವ ಬಗೆಯ ಸಂದೇಹಕ್ಕೂ ಆಸ್ಪದವೇ ಉಂಟಾಗಲಿಲ್ಲವೆಂದರೆ ಅತಿಶಯವೇನು?

ಇತ್ತ ಸಖೂಬಾಯಿಯ ಮನೆಯಲ್ಲಿ ವಿಠ್ಠಲನು ರೂಪಾಂತರದಿಂದ ಹೀಗೆ ನಿಂತುಬಿಟ್ಟನು; ಅತ್ತ ಸಖೂಬಾಯಿಯು ನಿರಂತರ ಹರಿಸೇವೆ, ಹರಿ ಭಜನೆ ಸಂತಜನರ ಸಹವಾಸ ಮುಂತಾದುವುಗಳಲ್ಲಿ ಮಗ್ನಳಾಗಿ ಮತ್ತಾವ ವಿಚಾರವನ್ನೂ ಗಮನಿಸದೆಯೇ ಇದ್ದುಬಿಟ್ಟಳು. ಹೀಗೆಯೇ ಬಹುದಿನಗಳು ಕಳೆದುಹೋದುವಂತೆ. ಬರುತ್ತ ಬರುತ್ತ ಆ ಸಾಧ್ವೀಮಣಿಗೆ ಶ್ರೀ ಪಂಡರಿನಾಥನ ಪಾದಾರವಿಂದಗಳಲ್ಲಿ ಅತ್ಯುತ್ಕಟವಾದ ಭಕ್ತಿಭಾವವೇರ್ಪಟ್ಟು ದೇವಸ್ಥಾನದಿಂದ, ಆತನ ಸಾನ್ನಿಧ್ಯವನ್ನು ಬಿಟ್ಟು ಹೊರಕ್ಕೆಹೋಗುವುದೆಂಬ ವಿಚಾರವೇ ಹೃದಯಕ್ಕೆ ಯಾತನೆಯನ್ನುಂಟುಮಾಡುವುದಾಯಿತು. ಸಖೂಬಾಯಿಯು ಭಕ್ತ್ಯತಿಶಯದಿಂದ ಮೈಮರೆತು, ಒಂದುದಿನ ಪಾಂಡುರಂಗಸ್ವಾಮಿಯ ಪಾದಸಮೀಪಕ್ಕೆ ನಡೆದು ಎರಡು ಕೈಗಳಿಂದಲೂ ಆ ದಿವ್ಯ ಪಾದಗಳನ್ನು ಆಲಂಗಿಸಿಕೊಂಡು - 'ಪ್ರಭೋ ವಿಶ್ವನಾಥಾ, ಈ ದೀನಳನ್ನು ನಿನ್ನ ಪಾದಾರವಿಂದದಲ್ಲಿ ಸೇರಿಸಿಕೊಂಡು ಭವಬಂಧನದಿಂದ ಉದ್ಧರಿಸು,' ಎಂದು ಪ್ರಾರ್ಥಿಸಿಕೊಂಡಳು. ಆ ಸಾಧ್ವಿಯ ಭಕ್ತಿಭಾವವು ಎಷ್ಟು ಉತ್ಕಟವಾಗಿದ್ದಿತೆಂದು ಹೇಗೆ ವರ್ಣಿಸಲು ಸಾಧ್ಯ! ಒಡನೆ ಆಕೆಯ ದೇಹದಿಂದ ಪ್ರಾಣವಾಯುವು ಹಾರಿಹೋಯಿತು. ಸಖೂಬಾಯಿಯು ವಿಠ್ಠಲಸ್ವಾಮಿಯ ಪಾದಗಳನ್ನು ಆಲಂಗಿಸಿಕೊಂಡೇ ಇದ್ದಾಳೆ. ಸುತ್ತಲೂ ಇದ್ದ ಭಕ್ತಾದಿಗಳೂ, ಇತರರೂ ಎಷ್ಟೋಹೊತ್ತು ನೋಡಿದರು. ಸಖೂಬಾಯಿಯು ಸ್ವಾಮಿಯ ಪಾದಸನ್ನಿಧಿಯನ್ನು ಬಿಟ್ಟು ಈಚೆಗೆ ಹೊರಟುಬರುವ ಮಾರ್ಗವೇ ತೋರಲಿಲ್ಲ. ಆಕೆಯ ಹೆಸರುಹಿಡಿದು ಕೂಗಿದರು. ಅದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ತರುವಾಯ ಸಮೀಪದಲ್ಲಿದ್ದ ಕೆಲವುಂದಿ ಸ್ತ್ರೀಯರು, ಆಕೆಯ ಮೈಮುಟ್ಟಿ ಅಲುಗಿಸಿದರು. ಅದರಿಂದಲೂ ಏನೂಪ್ರಯೋಜನವಾಗಲಿಲ್ಲ. ಉಪಾಯವಿಲ್ಲದೆ ವಿಠ್ಠಲವಿಗ್ರಹದ ಪಾದಗಳ ಸುತ್ತಲೂ ಇದ್ದ ಆಕೆಯ ಬಾಹುಬಂಧನವನ್ನು ಬಿಡಿಸಿ ಈಚೆಗೆ ತಂದರು. ಆಗ ಆಕೆಯ ದೇಹದಲ್ಲಿ ಪ್ರಾಣವಾಯು ಸಂಚಾರವು ನಿಂತುಹೋಗಿದೆಯೆಂಬ ವಿಚಾ

ರವು ಗೊತ್ತಾಯಿತು. ಎಲ್ಲರೂ ಗಾಬರಿಯಾದರು. ವಿಠ್ಠಲನ ಪಾದಸನ್ನಿಧಿಯಲ್ಲೇ ಪ್ರಾಣತ್ಯಾಗಮಾಡಿದ ಆಕೆಯ ಸಮಾನ ಪುಣ್ಯಶಾಲಿಗಳು ಮತ್ತೊಬ್ಬರಿಲ್ಲವೆಂದು ಪ್ರಶಂಸೆ ಮಾಡಿದರು. ಅಂತಹ ಅನಾಯಾಸ ಮರಣವು ಮಹಾಧನ್ಯಾತ್ಮರಿಗಲ್ಲದೆ ಇತರರಿಗೆ ಲಭ್ಯವಾಗದೆಂದುಕೊಂಡರು.

ಸರಿ, ಮುಂದೆ ಹೇಳಬೇಕಾದುದೇನು ? ಒಡನೆ ಶವವನ್ನು ಹೊರಕ್ಕೆ ತಂದು ದಹನ ಸಂಸಾರಕ್ಕೆ ಬೇಕಾದ ಪ್ರಯತ್ನಗಳನ್ನು ನಡೆಯಿಸಸಾಗಿದರು. ಊರಿನ ಆಬಾಲವೃದ್ಧ ಸ್ತ್ರೀಪುರುಷರೆಲ್ಲರೂ ನೆರೆದು ಆ ಸಾಧ್ವಿಯ ಮೃತ ಕಳೇವರವನ್ನು ಪರಮ ಗೌರವದಿಂದ ಕಂಡು-ಮಹಾ ಪುಣ್ಯವತಿಯೆಂದು ಪೂಜಿಸಿದರು. ಮುತ್ತೈದೆಯರನೇಕರು ಆಕೆಯ ಆತ್ಮತೃಪ್ತಿಗೆಂದು ಅನೇಕ ಮರದ ಬಾಗಿನಗಳನ್ನೂ ಸೀರೆ ಕುಪ್ಪುಸಗಳನ್ನೂ ದಾನವಾಗಿ ಕೊಟ್ಟರು. ಅರಶಿನ ಕುಂಕುಮಾದಿ ಮಂಗಲ ದ್ರವ್ಯಗಳು ಸೂರೆಯಾದುವು. ಭಜನೆ ಪಂಗಡಗಳವರು, ಶವದ ಮುಂದೆಯೂ ಹಿಂದೆಯೂ ಬಂದು, ವಿಠ್ಠಲಸ್ವಾಮಿಯ ಅನಂತ ಮಹಿಮೆಗಳನ್ನೂ, ಆತನ ಭಕ್ತಶ್ರೇಷ್ಠರ ದಿವ್ಯ ಚರಿತ್ರೆಗಳನ್ನೂ ಮನಸಾರೆ ಹೊಗಳಿದರು. ಶವವು ಸ್ಮಶಾನಾಭಿಮುಖವಾಗಿ ಸಾಗಿತು. ಊರಿನಲ್ಲಿದ್ದವರೆಲ್ಲರೂ ಚಿಕ್ಕವರು ದೊಡ್ಡವರೆನ್ನದೆ ಆ ಸಾಧ್ವೀಮಣಿಯ ಅಕಾಲ ಮೃತ್ಯುವಿಗಾಗಿ ಶೋಕಿಸಿದರು. ಸ್ಮಶಾನದಲ್ಲಿ ಶ್ರೀಗಂಧದ ಕೊರಡುಗಳು, ಕರ್ಪೂರ, ಗುಗ್ಗುಳ, ದಶಾಂಗ ಮುಂತಾದ ಪರಿಮಳ ದ್ರವ್ಯಗಳಿಂದಲೇ ಚಿತಿಗೆಯನ್ನೇರ್ಪಡಿಸಿ ಆ ಭಕ್ತಳ ಪಾಂಚಭೌತಿಕದೇಹವನ್ನು ಅಗ್ನಿನಾರಾಯಣನಿಗೆ ಸಮರ್ಪಿಸಿದರು. ಸ್ವಲ್ಪ ಹೊತ್ತಿನೊಳಗಾಗಿಯೇ ಆ ದೇಹವು ಭಸ್ಮೀಭೂತವಾಯಿತು. ತರುವಾಯ, ಸ್ಮಶಾನಕ್ಕೆ ಹೋಗಿದ್ದವರೆಲ್ಲರೂ ಆ ಭಕ್ತೋತ್ತಮಳ ಪ್ರಶಂಸೆಯ ಮಾತು ಕಥೆಗಳನ್ನೇ ಆಡುತ್ತಾ, ತಮ್ಮ ತಮ್ಮ ಮನೆಗಳನ್ನು ಸೇರಿಕೊಂಡರು. ಮುಂದೆ ಅನೇಕದಿನಗಳವರೆಗೂ, ಆಕೆಯ ಆ ಚರಿತ್ರೆಯೇ ಆ ಊರಿನ ಪ್ರತಿಮನೆಯ ಮಾತಾಗಿ ಪರಿಣಮಿಸಿತು.

ತರುವಾಯ ನಡೆಯಿತೆಂದು ಹೇಳಲ್ಪಟ್ಟಿರುವ ಕಥೆಯಂತೂ ಇನ್ನೂ ಅದ್ಭುತವಾದುದು. ಸಖೂಬಾಯಿಯ ಭೌತಿಕ ದೇಹವು, ಮೇಲ್ಕಂಡಂತೆ ಭಸ್ಮಾವಶೇಷವಾಗಿ ಹೋಯಿತಷ್ಟೆ ! ಸಖೂಬಾಯಿಯು ಸ್ವಸ್ವರೂಪ ತನ್ನ

ಅತ್ತೆಯ ಮನೆಯನ್ನು ಸೇರಿ, ಅಲ್ಲಿಯ ಕೆಲಸಕಾರ್ಯಗಳನ್ನು ವಹಿಸಿ ನಿಲ್ಲು ವವರೆಗೆ ಆಕೆಯ ರೂಪುಧಾರಣೆಮಾಡಿ ಅಲ್ಲಿ ಒಗತನಕ್ಕೆ ನಿಂತಿದ್ದ ವಿಠ್ಠಲ ಸ್ವಾಮಿಯು ಹಿಂದಿರುಗಿ ಬರುವಂತಿಲ್ಲ. ಇಲ್ಲಿ ಸಖೂಬಾಯಿಯು ಮೃತಳಾಗಿ ಆಕೆಯ ದೇಹವು ಬೂದಿಯಾದುದರಿಂದ, ಆಕೆಯು ಪುನಃ ತನ್ನ ಮನೆಗೆ ಹೋಗುವ ಸಂಭವವೇ ಇಲ್ಲ. ಈ ಪರಿಸ್ಥಿತಿಯು ಬಾಹ್ಯ ಜಗತ್ತಿಗೆ ಗೋ ಚರವಾಗಲಿಲ್ಲವಾದರೂ, ವಿಠ್ಠಲಸ್ವಾಮಿಯ ದೇವಿಯಾದ ರಖುಮಾಯಿ (ರುಕ್ಮಿಣೀದೇವಿ) ಗೆ ಅತಿಶಯ ಚಿಂತೆಗೆ ಕಾರಣವಾಯಿತು. ತನ್ನ ಭರ್ತನು ಭಕ್ತರಕ್ಷಣಾಪೇಕ್ಷೆಯಿಂದ ಅನೇಕವೇಳೆಗಳಲ್ಲಿ ಇಂತಹ ಸಂಕಟಕ್ಕೆ ಒಳಪಡು ವುದನ್ನು ಕಂಡು, ಆ ದೇವಿಯು ವಿಶೇಷವಾಗಿ ಮರುಗಿ, ಆಗ ತನ್ನ ಭರ್ತ ನಾದ ಸ್ವಾಮಿಯನ್ನು ಬರಮಾಡಿಕೊಳ್ಳಲು, ಸಖೂಬಾಯಿಯನ್ನು ಪುನಃ ತನ್ನ ಗಂಡನ ಮನೆಗೆ ಹೋಗುವಂತೆ ಮಾಡುವುದೊಂದಲ್ಲದೆ, ಬೇರೇ ಮಾ ರ್ಗವಿಲ್ಲವೆಂದು ಯೋಚಿಸಿದಳು. ಒಡನೆ ಆ ಕ್ಷೇತ್ರವಾಸಿಗಳಾದ ಕೆಲವುಂ ದಿ ಭಕ್ತರಿಗೆ, ಸಖೂಬಾಯಿಯ ಶವದಹನವಾದ ಸ್ಥಳದಲ್ಲಿದ್ದ ಆಕೆಯ ಅಸ್ಥಿ ಗಳನ್ನು ಹುಡುಕಿ ತರಬೇಕೆಂದು ಮಹಾಮಾತೆಯು ಸ್ವಪ್ನದಲ್ಲಿ ಹೇಳಿದಂತೆ ಪ್ರೇರಣೆಯಾಯಿತು. ಅವರು ತತ್ಕ್ಷಣವೇ ಸ್ಮಶಾನಕ್ಕೆ ಹೋಗಿ ಅಲ್ಲಿ ಹು ಡುಕಲಾಗಿ, ಆ ಪುಣ್ಯಶೀಲಳ ಅಸ್ಥಿಗಳ ಬಳಿ, 'ವಿಠ್ಠಲ ವಿಠ್ಠಲ' ಎಂಬ ನಾಮೋಚ್ಚಾರಣೆಯು ನಡೆದಿದ್ದುದನ್ನು ಕಂಡು, ಪರಮ ಭಕ್ತಿಯಿಂದ ಅವು ಗಳನ್ನಾರಿಸಿಕೊಂಡು ತಂದು, ದೇವಿಯ ಬಳಿ ಒಪ್ಪಿಸಿದರು. ಜಗಜ್ಜನನಿ ಯಾದ ಆ ದೇವಿಯು, ಕರುಣಾಕಟಾಕ್ಷದಿಂದ ಆ ಅಸ್ಥಿಗಳನ್ನು ನೋಡಲು ಅವುಗಳ ಮೂಲಕವಾಗಿ, ಸಖೂಬಾಯಿಯ ಮೊದಲಿನ ದೇಹವೇ ಲೇಶಮಾ ತ್ರವೂ ವ್ಯತ್ಯಾಸವಿಲ್ಲದಂತೆ ರೂಪುಗೊಂಡಿತು. ಈ ವಿಚಿತ್ರ ಪ್ರಸಂಗವನ್ನು ಕಂಡು ಅಲ್ಲಿದ್ದವರೆಲ್ಲರೂ ಪರಮಾಶ್ಚರ್ಯ ಮಗ್ನರಾದರು.

ತರುವಾಯ ರಖುಮಾಯಿಯು ಸಖೂಬಾಯಿಯನ್ನು ಬಳಿಗೆ ಕರೆದು- 'ಮಗಳೇ ನಿನ್ನ ಅಲೌಕಿಕಭಕ್ತಿಪಾಶಕ್ಕೆ ಒಳಪಟ್ಟು ನನ್ನ ಪತಿಯು ನಿನ್ನ ಗಂಡನ ಮನೆಯಲ್ಲಿ ನಿನ್ನ ರೂಪವನ್ನು ಧಾರಣೆಮಾಡಿ, ನಿನ್ನ ಗಂಡ ಮತ್ತು ಅತ್ತೆಮಾವಂದಿರ ಸೇವೆಯಲ್ಲಿ ನಿಂತಿದ್ದಾರೆ. ತಾಯಿಾ ನೀನಿನ್ನು ಸಾವಕಾ ಶಮಾಡದೆ ಇಲ್ಲಿಂದ ಪ್ರಯಾಣಮಾಡಿ, ಮನೆಯನ್ನು ಸೇರಿ, ನನ್ನ ಪತಿಯು

ಪುನಃ ಇಲ್ಲಿಗೆಬಂದು ಸೇರುವಂತೆ ಅನುಕೂಲಪಡಿಸನ್ನು. ಇನ್ನುಮುಂದೆ ಚಿಂತಿಸಬೇಡ. ನಿನ್ನ ಗೃಹಜೀವನವು ನಿಶ್ಚಿಂತೆಯಿಂದ ಸಾಗುವುದು. ನಿನ್ನ ಪತಿಯೂ ಅತ್ತೆಮಾವಂದಿರೂ ನಿನ್ನ ವಿಷಯದಲ್ಲಿ ಸ್ನೇಹಪ್ರೇಮಗಳನ್ನು ಳ್ಳವರಾಗುವರು. ನೀನು ಸಕಲವಿಧ ಸುಖಸಂಪತ್ತುಗಳನ್ನೂ, ಸಂತಾನ ಸೌಭಾಗ್ಯವನ್ನೂ ಪಡೆದು, ಚಿರಕಾಲ ಮುತ್ತೈದೆತನವನ್ನನುಭವಿಸಿ, ಕೊ ನೆಯಲ್ಲಿ ಮುತ್ತೈದೆಯಾಗಿಯೇ ದೇಹತ್ಯಾಗಮಾಡಿ ಸದ್ಗತಿಯನ್ನೈದುವೆ' ಎಂದು ಆಶೀರ್ವಾದಮಾಡಿದಳು.

ತನ್ನ ಇಷ್ಟದೈವವಾದ ವಿಠ್ಠಲಸ್ವಾಮಿಯು ತನಗಾಗಿ ಅಂತಹ ನೀಚ ಪರಿಸ್ಥಿತಿಗೆ ಒಳಪಟ್ಟು ತನ್ನ ಗಂಡ ಮುಂತಾದವರ ಸೇವೆಗೆ ತೊಡಗಿದನೆಂ ಬುದನ್ನು ಕೇಳಿದ ತರುವಾಯ ಸಖೂಬಾಯಿಗೆ ಹೃದಯವೇ ಕಿತ್ತು ಹೊರ ಕ್ಕೆಬಂದಷ್ಟು ಸಂಕಟವುಂಟಾಯಿತು. ಮುಂದೆ ಒಂದುಕ್ಷಣವೂ ಆ ಸ್ಥಳ ದಲ್ಲಿ ನಿಲ್ಲದೆ, ಜೊತೆಗೆ ಯಾರೂ ಇಲ್ಲದಿದ್ದುದನ್ನೂ ಗಮನಿಸದೆ ಏಕಾಂಗಿ ಯಾಗಿ ಹೊರಟು, ಬಹು ಶೀಘ್ರಪ್ರಯಾಣದಿಂದ ತನ್ನ ಅತ್ತೆಯ ಮನೆಯಿ ದ್ದ ಊರಿನ ಸಮೀಪಕ್ಕೆ ಬಂದಳು. ಅಲ್ಲಿ, ವಿಠ್ಠಲವೇಷದ ಸಖೂಬಾಯಿ ಯು ಅಂದು ನೀರಿನ ಬಿಂದಿಗೆಯೊಂದನ್ನು ಕಂಕುಳಲ್ಲೂ ಮತ್ತೊಂದನ್ನು ತಲೆಯಮೇಲೂ ಇಟ್ಟುಕೊಂಡು ನದಿಗೆ ನೀರಿಗಾಗಿ ಬರುತ್ತಿದ್ದುದು ಸಖೂ ಬಾಯಿಗೆ ಕಾಣಿಸಿತು. ಮಿಕ್ಕವರಿಗೆ ಯಾವ ವ್ಯತ್ಯಾಸವೂ ಕಾಣದಿದ್ದರೂ, ಸಖೂಬಾಯಿಗೆ ಮಾತ್ರ, ಅದು ನಿಜವಾಗಿಯೂ ವಿಠ್ಠಲನ ರೂಪಾಂತರವೇ ಎಂಬುದು ಸ್ಪಷ್ಟವಾಗಿತ್ತು. ಒಡನೆ, –'ಹೇ ಸ್ವಾಮಿ ವಿಠ್ಠಲಾ, ನನಗಾ ಗಿ ದೇವದೇವನಾದ ನೀನು ಇಂತಹ ನೀಚಕಾರ್ಯವನ್ನೂ ಕೈಕೊಳ್ಳಲು ಮ ನಸ್ಸುಮಾಡಿದೆಯಾ? ನಿನ್ನ ಭಕ್ತಿಪರಾಧೀನತೆಯು ಅನ್ಯಾದೃಶ್ಯವಾದು ದು' ಎಂದು ನುಡಿಯುತ್ತಾ, ಈ ದೀನಳ ಅಪರಾಧವನ್ನು ಮನ್ನಿಸು ಎಂ ದು ಪ್ರಾರ್ಥಿಸುತ್ತಾ, ಆನಂದಬಾಷ್ಪವು ಕಣ್ಣುಗಳನ್ನು ಮುಚ್ಚುತ್ತಿರಲು, ಆ ವ್ಯಕ್ತಿಯ ಪಾದಗಳನ್ನು ಹಿಡಿದು ಆ ಮಾರ್ಗದ ಹುಡಿಮಣ್ಣಿನಮೇಲೆ ಯೇ ಮಲಗಿಬಿಟ್ಟಳು. ಮುಂದೆ ಹೇಳುವುದೇನು? ಮನೆಯಿಂದ ಕೊಡಗ ಳನ್ನುಹೊತ್ತು ತಂದಿದ್ದ ಸಖೂಬಾಯಿಯ ರೂಪವು ಒಡನೆ ಅದೃಶ್ಯ ವಾಗಿ ಹೋಯಿತು. ಸಖೂಬಾಯಿಯು ಬಹುಹೊತ್ತು ಹಾಗೆಯೇ

ಬಿದ್ದು ಪರವಶಳಾಗಿದ್ದಳು. ಆ ಸಂಗತಿಯನ್ನು ಕಂಡವರು, ಆಕೆಯ ಮನೆಯಲ್ಲಿ ತಿಳಿಸಲು, ಅವರು ಗಾಬರಿಗೊಂಡುಬಂದು, ಆಕೆಯನ್ನು ಅಲ್ಲಿಂದ ಮನೆಗೆ ಕರೆದೊಯ್ದು ಉಪಚರಿಸಿದರು. ಆಗ ಸಖೂಬಾಯಿಯು, ಅಷ್ಟುದಿನಗಳೂ ಅಲ್ಲಿದ್ದು ಕೆಲಸಮಾಡಿಕೊಂಡಿದ್ದುದು, ತಾನಲ್ಲವೆಂದೂ ವಿಠೋಬನೇ ತನ್ನ ಸ್ವರೂಪದಿಂದ ಅಲ್ಲಿದ್ದನೆಂದೂ, ತಾನು ಫಂಡರಾಪುರದಲ್ಲಿ ವಿಠ್ಠಲಸ್ವಾಮಿಯ ದರ್ಶನಕ್ಕಾಗಿ ಹೋಗಿದ್ದೆನೆಂದೂ ಮುಂತಾಗಿ ನಡೆದ ಸಂಗತಿಯನ್ನೆಲ್ಲಾ ಹೇಳಲಾಗಿ, ಸ್ವಾಮಿಯ ಆ ಅದ್ಭುತಮಹಿಮೆಗಾಗಿ ಎಲ್ಲರೂ ಪರಮಾಶ್ಚರ್ಯಪಟ್ಟರು. ತಮ್ಮ ಸೊಸೆಯು, ಅಷ್ಟುಮಟ್ಟಿಗೆ ಭಗವತ್ಪ್ರೀತಿಪಾತ್ರಳಾಗಿದ್ದುದನ್ನು ಕಂಡು ಆಕೆಯ ಅತ್ತೆಮಾವಂದಿರಿಗೆ ಆಕೆಯ ವಿಷಯದಲ್ಲಿ ಅತಿಶಯ ಭಕ್ತಿ ಗೌರವಗಳುಂಟಾದುವು. ಪತಿಯೂ ತನ್ನ ಪತ್ನಿಯನ್ನು ವಿಶೇಷ ಗೌರವಭಾವದಿಂದ ಕಾಣತೊಡಗಿದನು. ಅವಳನ್ನು ಕಂಭಕ್ಕೆ ಕಟ್ಟಿಹಾಕಿದಂದಿನಿಂದ ಆವರೆಗೆ ನಡೆದ ಚರಿತ್ರೆಯೆಲ್ಲವೂ ಒಂದು ಸ್ವಪ್ನದಂತೆ, ಅವರ ಮನಃಪ್ರಪಂಚದೆದುರಿಗೆ ಹೊಳೆದು ಮರೆಯಾಗಿಹೋಯಿತು. ಸಖೂಬಾಯಿಯ ಸಂಸಾರಯಾತ್ರೆಯು ಮುಂದೆ, ಮಹಾಲಕ್ಷ್ಮೀವರಪ್ರಸಾದದಿಂದ ಸರ್ವವಿಧಸುಖಸಂಪತ್ತುಗಳಿಂದ ಪೂರ್ಣವಾಗಿ ಸುಗಮವಾಗಿ ಸಾಗತೊಡಗಿತು.



## ಉ ಪ ಸಂ ಹಾ ರ

ಈ ಚರಿತ್ರೆಯು ಮೇಲೆ ಹೇಳಲ್ಪಟ್ಟಂತೆ ನಡೆದಿರುವುದು ಶುದ್ಧ ಅಸಂಭವವೆಂದು ಹೇಳುವವರಿಗಾಗಿ ಈ ಕಥೆಯು ಬರೆಯಲ್ಪಟ್ಟುದಲ್ಲವೆಂದು ಕೊನೆಯದಾಗಿ ಇಲ್ಲಿ ವಿಜ್ಞಾಪಿಸಬೇಕಾಗಿದೆ. ಭಕ್ತರ ಚರಿತ್ರೆಯ ಉಪಯೋಗವು ಭಕ್ತರಿಗಾಗಿಯಲ್ಲದೆ, ತಾರ್ಕಿಕರಿಗಾಗಿಯಲ್ಲ-ತಾರ್ಕಿಕರು ತಮ್ಮ ಕಾರ್ಯ ಕಾರಣ ಭಾವದಿಂದ ವಿಮರ್ಶಿಸಿ ಸಿದ್ಧಾಂತೀಕರಿಸಲಾಗದ ಅನೇಕಾನೇಕ ಸಂಗತಿಗಳು, ಭಕ್ತರ ನಿಶ್ಚಲ ಭಕ್ತಿಭಾವಕ್ಕೆ ವಶವಾಗಿ ಫಲಪ್ರದ

ವಾದ ಉದಾಹರಣೆಗಳು ಲೋಕದಲ್ಲುಂಟು. ಆದರೆ, ಭಕ್ತರಿಗಾಗಿಯೇ ಆದರೂ ಸುಳ್ಳು ಸುಳ್ಳು ವಿಚಾರಗಳನ್ನೂ, ಅಸಂಭವನೀಯ ವಿಚಾರಗಳನ್ನೂ ಹೇಳಬಹುದೋ ಎಂದರೆ, ಪ್ರೇಮವಶವಾಗಿ ಲೌಕಿಕವಾಗಿ ನಡೆವ ಹಲವು ಅಸಂಭವನೀಯ ವಿಚಾರಗಳಂತೆಯೇ ಭಗವಂತನೂ, ಭಕ್ತನ ಅವಿರಳ ಪ್ರೇಮಕ್ಕೆ ವಶನಾಗಿ, ಭಕ್ತಿಪಾಶದಿಂದ ಬದ್ಧನಾಗಿ, ಅನೇಕ ಕಾರ್ಯಗಳನ್ನು ಮಾಡುವುದು ಸಂಭವವಲ್ಲವೆಂದು ಹೇಗೆ ಹೇಳಲಾದೀತು? ಪತ್ನಿಯ-ಪುತ್ರರ ಪ್ರೇಮಪಾಶದಿಂದ ಬದ್ಧನಾದ ಒಬ್ಬ ಮನುಷ್ಯನು, ತನ್ನನ್ನು ಒಂಬತ್ತು ತಿಂಗಳಕಾಲ ಗರ್ಭದಲ್ಲಿಟ್ಟುಕೊಂಡು ಹೊತ್ತು, ಅಸಹನೀಯ ವೇದನೆಯನ್ನನುಭವಿಸಿ, ಹೇಳಲಾಗದಷ್ಟು ಕಷ್ಟನಷ್ಟಗಳನ್ನು ಅನುಭವಿಸಿ, ಸಲಹಿ ದೊಡ್ಡವನನ್ನಾಗಿ ಮಾಡಿದ ತಾ ಯಿ ಯ ನ್ನೂ ಮರೆಯಬಹುದೆಂದಮೇಲೆ ಅದು ಸಂಭವನೀಯ ವಿಚಾರವೇ ? ಇದರಂತೆಯೇ ಮಾನುಷ ದೃಷ್ಟಿಯಿಂದ ಅಸಂಭವನೀಯವೆಂದು ಕಂಡುಬರುವ ಹಲವು ವಿಚಾರಗಳುಂಟು. ಇವುಗಳೆಲ್ಲವೂ ಸರ್ವಸಾಮಾನ್ಯವೆಂಬಂತೆ ಸಂಭವಿಸುತ್ತಲೇ ಇರುವಲ್ಲಿ, ಸರ್ವಶಕ್ತನಾದ ಜಗಜ್ಜನ್ಮಾದಿ ಕಾರಣನು ಅನಂತ ಲೀಲಾವಿನೋದಿಯಾದುದರಿಂದ ಭಕ್ತೋತ್ತಮರ ಭಕ್ತಿ ಪಾಶಕ್ಕೆ ಬದ್ಧನಾಗಿ ಇಂತಹದೊಂದು ಕಾರ್ಯವು ನಡೆಯಲೆಡೆಗೊಟ್ಟನೆಂದರೆ ಅದರಲ್ಲಿ ಆಶ್ಚರ್ಯವೇನು ? ಅಘಟನಘಟನಾ ಸಮರ್ಥನಾದ ಸರ್ವಶಕ್ತಿಮಾ ಪರಮಾತ್ಮನಿಗೆ ಯಾವ ಕೊರತೆಯುಂಟು ?

ಇದಂತಿರಲಿ. ಭಾವನಾಮಯ ಸಾಮ್ರಾಜ್ಯದಲ್ಲಿ ನಿರಂಕುಶವಾಗಿ ಸಂಚರಿಸುತ್ತಿರುವ ಭಗವದ್ಭಕ್ತರ ಕಾರ್ಯಕಲಾಪಗಳನ್ನು ಕುರಿತು, ಭಕ್ತಿಯೆಂಬುದರ ಗಂಧವನ್ನೇ ಅರಿಯದ ಅಜ್ಞರಾದ ನಾವು, ನಮ್ಮ ಅಲ್ಪ ಪಾತ್ರಿಯಿಂದಲೇ ಮಹಾನುಭಾವರಾದ ಅವರ ಅದ್ಭುತ ಶಕ್ತಿಸಾಮರ್ಥ್ಯಗಳನ್ನೂ ಅಳತೆಮಾಡತೊಡಗುವುದು ಸಾಧುವಲ್ಲ-ಸಮಂಜಸವಲ್ಲ. ಭಕ್ತಿಭಾವದಲ್ಲಿ ಅವರ ಸ್ಥಾನಕ್ಕೆ ಏರಿದಮೇಲೆ, ಅವರ ಸರಿಸಮಾನ ಸ್ಥಾನದಲ್ಲಿ ನಿಂತು ಅವರ ಕಾರ್ಯವು ಸಮಂಜಸವಾದುದೇ- ಸಾಧ್ಯವಾದುದೇ ಎಂದು ವಿಮರ್ಶಿಸಲೆಡೆಯುಂಟು. ಅಲ್ಲಿಯವರೆಗೂ, ಜನಸಮಾಜದಲ್ಲಿ ಭಗವದ್ಭಕ್ತಿಭಾವದ ಅಭಿವೃದ್ಧಿಗಾಗಿ, ಆದರ್ಶಸ್ವರೂಪವಾಗಿರುವ ನಮ್ಮ ಕಥಾನಾಯಿಕೆ ಸಾಧ್ವೀಮಣಿ ಸಖೂಬಾಯಿಯಂತಹ ಭಗವದ್ಭಕ್ತಾಗ್ರೇಸರರ ಚರಿತ್ರೆಗಳಲ್ಲಿರುವ

ಅಮೌಲ್ಯ ವಿಷಯಗಳನ್ನು ನಂಬಿ, ಮೊದಲು ಭಗವಂತನ ಪಾದಾರವಿಂದಗಳಲ್ಲಿ ಭಕ್ತಿ ಭಾಗ್ಯವನ್ನೊಂದನ್ನು ಗಳಿಸಿಕೊಳ್ಳೋಣ. ತರುವಾಯ ಅದನ್ನನುಸರಿಸಿ ಸಕಲವೂ ಪ್ರಾಪ್ತವಾಗುವುದು. 'ನಂಬಿ ಕೆಟ್ಟವರಿಲ್ಲ' ಎಂಬ ದಾಸರಾಯರ ವಾಕ್ಯದ ಅಂತರಾರ್ಥವನ್ನು ಗ್ರಹಿಸಿ, ಜಗನ್ನಾಯಕನ ಪಾದಪದ್ಮಗಳಲ್ಲಿ ಭಕ್ತಿಭಾಗ್ಯವನ್ನು ಗಳಿಸುವ ಮನೋಭಾವವು, ಈ ಸಾಧ್ವೀಮಣಿಯ ಚರಿತ್ರ ಪಠನಮಾಡುವ ಸರ್ವರಿಗೂ ಪ್ರಾಪ್ತಿಸುವಂತೆ ಭಗವದನುಗ್ರಹವಾಗಲಿ.

ತಥಾಸ್ತು.

---

--॥ ಶ್ರೀರಾಮಸಹಾಯಃ ॥--

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ :—**

'ಜೋಸೆಫ್ ಮ್ಯಾಝಿನಿ' ಎಂಬ ನಮ್ಮ ಪ್ರಕೃತ ಕಥಾನಾಯಕನು, ಯೂರೋಪುಖಂಡದ ಇಟಲೀ ದೇಶೋದ್ಧಾರಕನು. ಹತ್ತೊಂಬತ್ತನೆಯ ಶತಮಾನದಲ್ಲಿ ಇಟಲೀದೇಶದ ಸ್ಥಿತಿಯು ಬಹು ಶೋಚನೀಯವಾಗಿತ್ತು. ದೇಶದಲ್ಲಿ ಒಳಜಗಳಗಳೂ, ಪರಸ್ಪರ ಅಪನಂಬಿಕೆಯೂ, ಸ್ವಾಭಿಮಾನ ಶೂನ್ಯತೆಯೂ ಸರ್ವತ್ರ ಮನೆಮಾಡಿಕೊಂಡಿದ್ದುವು. ದೇಶವೆಲ್ಲವೂ ನೂರಾರು ಭಾಗಗಳಾಗಿ ವಿಭಾಗಿಸಲ್ಪಟ್ಟಿದ್ದು, ಅಲ್ಪಸ್ವಲ್ಪ ಭಾಗಗಳಿಗೆ ಯಜಮಾನರಾಗಿದ್ದ ಪಾಳಯಗಾರರಂತಹ ಅಧಿಪತಿಗಳು ನಿರಂಕುಶರಾಗಿ ತಮ್ಮ ಮನಬಂದಂತೆ ರಾಜ್ಯಭಾರಮಾಡುತ್ತಿದ್ದರು. ಈ ಅಧಿಪತಿಗಳು ಕೇವಲ ಸ್ವಾರ್ಥಸಾಧಕರಾಗಿಯೂ ಸಮೀಪದ ಆಸ್ಟ್ರಿಯಾ ಚಕ್ರಾಧಿಪತ್ಯಕ್ಕೆ ಅಡಿಯಾಳುಗಳಾಗಿ ಅದರ ಕೈಯಸೂತ್ರದ ಬೊಂಬೆಗಳಂತೆಯೂ ನಡೆಯುತ್ತಿದ್ದರು. ಈ ಪಾರತಂತ್ರ್ಯದ ಮೂಲಕ ಪ್ರಜಾ ಸಮುದಾಯದಲ್ಲಿ, ಸರ್ವವಿಧ ಅಭಿವೃದ್ಧಿಗಳೂ ಕುಂಠಿಸಿಹೋದುವು. ಪರದಾಸ್ಯವು ಅವರಲ್ಲಿ ದಾಸ್ಯ ಮನೋಭಾವವನ್ನು ಬೇರೂರಿಸಿ, ಮಾತೃದೇಶಾಭಿಮಾನ, ಮಾತೃಭಾಷಾಭಿಮಾನ, ಧರ್ಮಾಭಿಮಾನ ಮುಂತಾದುವುಗಳನ್ನೆಲ್ಲ ಮೂಲೆಗೊತ್ತಿಸಿತು. ಜನರಲ್ಲಿ ಕರ್ತವ್ಯನಿಷ್ಠೆಯು ಲೋಪವಾಯಿತು. ಸತ್ಯ ಧರ್ಮ ನ್ಯಾಯಗಳು ಜನರ ಮನಸ್ಸಿನಿಂದ ಮರೆಯಾಗಿ, ಸ್ವಾರ್ಥಸಾಧನೆಯು ಪರಮಧರ್ಮವೋ ಎನ್ನುವಂತೆ ಎಲ್ಲರಲ್ಲೂ ವ್ಯಾಪಿಸಿತು. ಪ್ರತಿಯೊಬ್ಬನೂ ತನ್ನ ತನ್ನ ಸ್ವಾರ್ಥತೆಯನ್ನು ಮಾತ್ರವೇ ಕುರಿತು ಗಮನಿಸುವವನಾದಮೇಲೆ ಮುಂದೆ ಹೇಳಬೇಕಾದುದೇನು! ಸರ್ವತ್ರ, ಅಶಾಂತತೆಯು ತಪ್ಪದೆ ವ್ಯಾಪಿಸಿತು. ಸ್ವಾರ್ಥಸಾಧನೆಯೆಂಬ ಈ ಭೂತಕ್ಕೆ ಬಲಿಯಾದ ಪ್ರಜೆಗಳು ಪರಕೀಯರ ಮನೋವೃತ್ತಿಯನ್ನು ಆಶ್ರಯಿಸಿ ನಡೆಯಲು ಹಿಂಜರಿಯದಂತಾದರು.

ಹೀಗಾಗಿ ಅಂದಿನ ಇಟಲೀದೇಶವು, ಪರಾಧೀನವಾಗಿ ತೊಳಲುತ್ತಿರುವ ಇಂದಿನ ಹಿಂದೂಸ್ಥಾನದಂತೆ ಅಸಂತುಷ್ಟವಾಗಿ ಅಭಿವೃದ್ಧಿಯ ಮಾರ್ಗವರಿಯದೆ ತೊಳಲುತ್ತಿದ್ದಿತು. ಅಂತಹ ಸಂದರ್ಭದಲ್ಲಿ ಜನ್ಮಿಸಿ, ಅಸಹನೀಯ ಕಷ್ಟನಷ್ಟಗಳನ್ನನುಭವಿಸಿ ದೇಶೋದ್ಧಾರಮಾಡಿದ ಮಹಾಪುರುಷನು ನಮ್ಮ ಕಥಾನಾಯಕನಾದ ಜೋಸೆಫ್ ಮ್ಯಾಝಿನಿಯು.

ಮ್ಯಾಝಿನಿಯು ತನ್ನ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಜನ್ಮಾವಧಿ ಶ್ರಮಿಸಿದನಾದರೂ, ಆತನು ರಾಜಕೀಯ ಪುರುಷನಲ್ಲ. ಆತನು ಸೈನ್ಯಸರಂಜಾಮು ಯುದ್ಧಸಾಮಗ್ರಿಗಳನ್ನು ತನ್ನ ಹಿಂದಿಟ್ಟುಕೊಂಡು ಯಾರೊಂದಿಗೂ ರಣರಂಗದಲ್ಲಿ ಹೋರಾಡಿ ಪರರ ವಶದಲ್ಲಿದ್ದ ರಾಜ್ಯವನ್ನು ಅವರ ಕೈಯಿಂದ ಕಿತ್ತುಕೊಳ್ಳಲು ಹವಣಿಸಿದ ಯೋಧನಲ್ಲ. ಸ್ವಾಭಾವಿಕವಾಗಿ ಆತನು ತತ್ವಜ್ಞಾನಿಯು, ಕೇವಲ ಶಾಂತಸ್ವಭಾವದವನು. ದೇಶವು ಸುಭಿಕ್ಷವಾಗಿದ್ದಿದ್ದರೆ ಆತನು, ರಾಜಕಾರಣಕ್ಕೇ ಇಳಿಯದೆ, ಕೇವಲ ಗ್ರಂಥ ರಚನೆ, ತತ್ವ ಚಿಂತನೆ ಮುಂತಾದುವುಗಳಲ್ಲೇ ತನ್ನ ಕಾಲವನ್ನು ಕಳೆದಿರಬಹುದಾಗಿತ್ತು. ಆದರೆ, ಆಗಿನ ದೇಶಸ್ಥಿತಿಯು, ಶಾಂತತೆ ಸಮಾಧಾನಗಳ ಬೆಳೆವಣಿಗೆಗೆ ಯೋಗ್ಯವಾದುದಾಗಿರಲಿಲ್ಲವಾದುದರಿಂದ, ಆತನು ತನ್ನ ತತ್ವಚಿಂತನೆ ಮುಂತಾದ ಕೆಲಸಗಳನ್ನು ದೂರದಲ್ಲಿಟ್ಟು, ಸಧ್ಯದಲ್ಲಿ ಅತ್ಯಾವಶ್ಯಕವಾಗಿದ್ದ, ಪರದಾಸ್ಯ ನಿವಾರಣೆ, ಸ್ವಾತಂತ್ರ್ಯಪ್ರಾಪ್ತಿ, ದೇಶದ ಏಕರಾಷ್ಟ್ರೀಯತೆ, ಸ್ವಾಭಿಮಾನದ ಬೆಳೆವಣಿಗೆ ಮುಂತಾದ ಕಾರ್ಯಗಳಿಗೇ ಮನಸ್ಸು ಕೊಟ್ಟು ಜನ್ಮಾವಧಿ ಶ್ರಮಿಸಬೇಕಾಯಿತು. ಸ್ವಾರ್ಥತೆಗೆ ತಿಲಾಂಜಲಿಯಿತ್ತು, ಮಾನಾಪಮಾನಗಳನ್ನು ಗಣಿಸದೆ, ಕಷ್ಟನಷ್ಟಗಳನ್ನು ಲೆಕ್ಕಿಸದೆ, ದೇಶಹಿತಸಾಧನೆಯೇ ಪರಮಧರ್ಮವೆಂದು ನಂಬಿ, ಸೆರೆಮನೆಯ ವಾಸ, ದೇಶಭ್ರಷ್ಟತೆ ಮುಂತಾದುವುಗಳಿಗಾಗಿ ಬೆದರದೆ-ಮರುಗದೆ, ದೇಶಸೇವೆ ಎಂಬ ಆ ಒಂದು ಕಾರ್ಯಕ್ಕಾಗಿಯೇ ಜನ್ಮವೆತ್ತಿದವನೋ ಎಂಬಂತೆ ನಿಶ್ಚಲ ಮನೋಭಾವದಿಂದ ನಡೆದ ಧೀರನು ನಮ್ಮ ಕಥಾನಾಯಕನು.

ಮ್ಯಾಝಿನಿಯು, ಸ್ವಾಭಿಮಾನ ರಹಿತವಾಗಿದ್ದ ಅಂದಿನ ಇಟಲಿಯ ಜನಾಂಗದಲ್ಲಿ ಏಕಾಂಗಿಯಾಗಿ ದುಡಿದು ಜನತೆಗಿರುವ ಹಕ್ಕು ಬಾಧ್ಯತೆಗಳು,

ಶಕ್ತಿಸಾಮರ್ಥ್ಯಗಳು ಮುಂತಾದ ತಿಳಿವಳಿಕೆಯನ್ನು ಅವರ ಗಮನಕ್ಕೆ ತಂದಿತ್ತು, ಮೃತಪ್ರಾಯವಾಗಿದ್ದ ಆ ದೇಶವನ್ನು ಪುನರುಜ್ಜೀವಿತವಾದುದನ್ನಾಗಿ ಮಾಡಲು, ಆತನಿಗಿದ್ದ ಶಕ್ತಿಯೆಂದರೆ ಆತ್ಮವಿಶ್ವಾಸವೊಂದೇ! ಈ ಆತ್ಮವಿಶ್ವಾಸಕ್ಕೆ ತಾನು ನ್ಯಾಯಮಾರ್ಗದಲ್ಲಿದ್ದೇನಾದ್ದರಿಂದ ತನಗೆ ಭಗವತ್ಸಹಾಯವು ಬೆನ್ನಹಿಂದೆಯೇ ಇರುವುದೆಂಬ ನಂಬಿಕೆಯೇ ಮುಖ್ಯಕಾರಣವು! ಮ್ಯಾಝಿನಿಯು ಲೋಕದೃಷ್ಟಿಗೆ ಗೋಚರವಾಗುವಂತೆ ಇಟಲಿಯ ಐಕ್ಯತೆಯನ್ನು ಸಾಧಿಸಲಿಲ್ಲ. ಜನತೆಯು ಅವನನ್ನು ಹಿಂಬಾಲಿಸಲಿಲ್ಲ ಅವನ ಉದಾತ್ತ ತತ್ವಗಳು ಅಂದು ಮಾನ್ಯವಾಗಲಿಲ್ಲ. ಆದರೂ ಆತನ ಆ ಬಗೆಯ ಅಪಜಯದಲ್ಲೇ ಜಯವಿಲ್ಲದಿಲ್ಲ. ಇಟಲಿಯಲ್ಲಿ ಮಾತ್ರವೇ ಏಕೆ ಯೂರೋಪುಖಂಡದಲ್ಲೇ ಜನಜಾಗೃತಿಯನ್ನುಂಟುಮಾಡಿದ ಕೀರ್ತಿಯು ಆತನ ಪಾಲಿನದು. ತನ್ನ ಭವ್ಯವಾಣಿಯಿಂದಲೇ ಆತನು ತನ್ನ ಜನಾಂಗದ ಹೃದಯದಲ್ಲಿ ಶಾಶ್ವತವಾದೊಂದು ಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದೇವಿಯ ಪ್ರಾಣಪ್ರತಿಷ್ಠೆಮಾಡಿ ಯಶೋದುಂದುಭಿಯನ್ನು ಮೊಳಗಿಸಿದ್ದಾನೆ. ದಾಸ್ಯಭಾವನಿವಾರಣೆಯಾಗಿ ಜನತೆಯ ಮಾನಸಪ್ರಪಂಚದಲ್ಲಿ ನಡೆಯಬೇಕಾಗಿದ್ದ ಇಷ್ಟುಮಟ್ಟಿನ ಸುಧಾರಣೆಯು ಆತನಿಂದಲೇ ಪ್ರಾರಂಭವಾಯಿತು. ಹಾಗೆ ಒಂದುಬಾರಿ ಪ್ರಾರಂಭವಾದ ಸ್ವಾತಂತ್ರ್ಯಕಾಂಕ್ಷೆಯು ಜನಾಂಗದ ಹೃದಯಪೀಠದಿಂದ ಸುಲಭಕ್ಕೆ ಅಳಿಸಿಹೋಗುವುದೇನು?

ಈ ಮಹನೀಯನ ಜೀವಿತವೂ, ಭಾರತ ಬಾಲಕರಿಗೆ – ಮುಖ್ಯವಾಗಿ ಕರ್ಣಾಟಕ ಬಾಲಕರಿಗೆ ಅತ್ಯಾವಶ್ಯಕವಾಗಿ ಪರಿಚಯವಿರಬೇಕಾದುದು! ಅದನ್ನು ಇಲ್ಲಿ ಯಥಾಮತಿ ಕೊಡಲಾಗುತ್ತದೆ. ಗ್ರಂಥಮಾಲಾಭಿಮಾನಿಗಳು, ಎಂದಿನಂತೆ ಇದಕ್ಕೂ ಯೋಗ್ಯಪ್ರೋತ್ಸಾಹವನ್ನೀಯುವುದರೊಂದಿಗೆ ತಮ್ಮ ಮಿತ್ರಬಾಂಧವರಲ್ಲೂ ಗ್ರಂಥಮಾಲೆಗೆ ಪ್ರಚಾರವನ್ನು ಕಲ್ಪಿಸಿಕೊಟ್ಟು, ನಮ್ಮ ಭಾಷಾಸೇವೆಯೊಂದಿಗೆ ಸಹಕರಿಸಬೇಕಾಗಿ ಪ್ರಾರ್ಥನೆ.

ಬೆಂಗಳೂರು
ತಾ. ೫-೧೧-೧೯೩೧

ಇತಿ ಸುಜನವಿಧೇಯ
**ಯಂ. ರಾಮರಾವ್**

---

*'Life, then, was given you by God that you might direct your individual faculties to the development of the faculties of your fellowmen, and that you might contribute by your work some portion to that collective work of improvement and that discovery of the truth which the generations slowly but continuously carry on. You must educate yourselves and educate others; perfect yourselves and perfect others.'*

*THE DUTIES OF MAN,*
*by Joseph Mazzeni.*

॥ ಶ್ರೀರಾಮಸಹಾಯಂ ॥

## ಇಟಲೀ ದೇಶೋದ್ಧಾರಕ

# ಜೋಸೆಫ್ ಮ್ಯಾಝಿನಿ

---

**ಅಧ್ಯಾಯ ೧** **"ಜನನ-ಬಾಲ್ಯ"**

ಸ್ವಾತಂತ್ರ್ಯಪ್ರಾಪ್ತಿಗಾಗಿ ಇಂದು ನಮ್ಮ ಮಾತೃಭೂಮಿ-ಈ ಭಾರತದೇಶದಲ್ಲಿ ನಡೆಯುತ್ತಿರುವ ಆತ್ಮಯಜ್ಞದ ಅಗ್ನಿಕುಂಡದಲ್ಲಿ ಯಜ್ಞೇಶ್ವರನನ್ನು ಪ್ರತಿಷ್ಠಿಸಿದ ಜನಾಂಗಗಳು ಪ್ರಪಂಚದಲ್ಲಿ ಹಲವುಂಟು! ಲೋಕದ ಯಾವುದೊಂದು ಜನಾಂಗಕ್ಕೆ ಸ್ವಾತಂತ್ರ್ಯವೆಂಬೊಂದು ಭಾಗ್ಯವಿಲ್ಲದಿದ್ದ ಮೇಲೆ ಮಿಕ್ಕ ಎಂತಹ ಭಾಗ್ಯಗಳು ಎಷ್ಟಿದ್ದರೂ, ಎಲ್ಲವೂ ಪರಕೀಯರ ಸುಖಸಂತೋಷಗಳನ್ನು ವೃದ್ಧಿಗೊಳಿಸುವ ಸಾಧನಗಳಾಗಿ ಪರಿಣಮಿಸುವುವಲ್ಲದೆ ಬೇರಲ್ಲ. ಲೋಕದಲ್ಲಿ ಜನ್ಮಿಸಿದ ಪ್ರತಿಯೊಂದು ಪ್ರಾಣಿಯೂ ಶ್ವಾಸೋಚ್ಛ್ವಾಸಗಳನ್ನು ನಡೆಯಿಸತಕ್ಕುದು ಹೇಗೆ ಅದರ ಜನ್ಮಸಿದ್ಧ ಹಕ್ಕಾಗಿದೆಯೋ ಹಾಗೆಯೇ ತನ್ನ ಇಚ್ಛಾನುಸಾರವಾಗಿ ತನ್ನ ಕೆಲಸ ಕಾರ್ಯಗಳನ್ನು ನಡೆಯಿಸಿಕೊಳ್ಳಲು ಸ್ವಾತಂತ್ರ್ಯವಿರಬೇಕಾದುದೂ ಪ್ರತಿಯೊಬ್ಬ ಮನುಷ್ಯನ ಜನ್ಮಸಿದ್ಧ ಹಕ್ಕು ಎನ್ನಲು ಸಂಶಯವಿಲ್ಲ. ಪ್ರಾಣರಕ್ಷಣೆಗೆ ಅತ್ಯಾವಶ್ಯಕವಾದ ಈ ಶ್ವಾಸೋಚ್ಛ್ವಾಸ ಕ್ರಿಯೆಯು ಮತ್ತಾವುದೊಂದು ಅಂಗಕ್ಕೆ ಅಧೀನವಾಗಿರದೆ ಜಾಗ್ರತ್ಸ್ವಪ್ನ ಸುಸುಪ್ತ್ಯವಸ್ಥೆಗಳಲ್ಲೂ ನಿರ್ಬಾಧಕವಾಗಿ ಸಾಗುತ್ತಿರುವುದರಿಂದಲೇ ಒಂದು ಪ್ರಾಣಿಯ ಜೀವನ ಯಾತ್ರೆಯು ನಿಶ್ಚಿಂತೆಯಿಂದ ಸಾಗಲು ಅವಕಾಶವಿದೆ. ಹಾಗಲ್ಲದೆ, ಕಣ್ಣು-ಬಾಯಿಗಳಂತೆ ಮೂಗೂ ಸಹ ಮತ್ತೊಂದು ಅಂಗದ ಸಮಯವನ್ನು ಕಾಯ್ದಿದ್ದು - ಸಹಕಾರವನ್ನು ನಿರೀಕ್ಷಿಸಿಕೊಂಡಿದ್ದು, ತೆರೆದು-ಮುಚ್ಚಿ ತನ್ನ ಕೆಲಸಗಳನ್ನು ನಡೆಯಿಸಬೇಕು

ಎಂಬಂತೆ ಇದ್ದಿದ್ದರೆ ಅಂದು ಜೀವನಸ್ಥಿತಿಯು ಈಗಿನಗಿಂತಲೂ ವ್ಯತ್ಯಸ್ತ ವಾಗಿರುತ್ತಿದ್ದಿತೆನ್ನಲು ಸಂದೇಹವಿಲ್ಲ.

ಜನ್ಮಸಿದ್ಧಹಕ್ಕಾದ ಈ ಸ್ವಾತಂತ್ರ್ಯವು ಒಂದು ವ್ಯಕ್ತಿ ಅಥವ-ಜನಾಂಗದಲ್ಲಿ ನಾಶವಾಗಲು ಪರಕೀಯರ ಹೃದಯದಲ್ಲಿ ಸರ್ವಾಧಿಕಾರಮಾಡುತ್ತಿರುವ ಸ್ವಾರ್ಥತೆಯೇ ಪ್ರಬಲಕಾರಣವು. ಒಬ್ಬ ವ್ಯಕ್ತಿಯ ಅಥವ ಜನಾಂಗದ ಅಧಿಕ ಸ್ವಾರ್ಥತೆಯಿಂದ ಅಪಹೃತವಾದ ಸ್ವಾತಂತ್ರ್ಯವನ್ನು ಪುನಃ ಗಳಿಸಬೇಕಾದಾಗ್ಗೆ, ಹಾಗೆ ಜಿತನಾದವನು ತನ್ನಲ್ಲಿಯ ಸ್ವಾರ್ಥತೆಯನ್ನು ನೀಗಿ ಆತ್ಮಯಜ್ಞಕ್ಕೆ ಸಿದ್ಧನಾಗುವುದೊಂದಲ್ಲದೆ ಬೇರೊಂದು ಉಪಾಯವೇ ಇಲ್ಲ. ಒಬ್ಬನ ಸ್ವಾತಂತ್ರ್ಯದ ಅಪಹರಣದಲ್ಲಿ ಬೇರೊಬ್ಬನಿಂದ ಎಷ್ಟುಮಟ್ಟಿನ ಸ್ವಾರ್ಥತೆಯು ವ್ಯಯಮಾಡಲ್ಪಟ್ಟಿತೋ, ಅದರ ಸಂಗ್ರಹಣದಲ್ಲಿ ಮತ್ತೊಬ್ಬನಿಂದಲೂ ಅದಕ್ಕೆ ಸಮಪ್ರಮಾಣದ ನಿಸ್ವಾರ್ಥತೆಯು ಪ್ರಕಟಿಸಲ್ಪಟ್ಟಿರಲ್ಲದೆ, ಕಳೆದ ಆ ಸ್ವಾತಂತ್ರ್ಯವು ಪುನಃ ಲಬ್ಧವಾಗುವುದು ಅಸಂಭವ. ಆದುದರಿಂದ ದುಷ್ಕರ್ಮವಶವಾಗಿ ಪರದಾಸ್ಯಕ್ಕೆ ಸಿಲುಕಿದ ಯಾವನೊಬ್ಬ ವ್ಯಕ್ತಿ ಅಥವ ಜನಾಂಗವು, ಸ್ವಾತಂತ್ರ್ಯವನ್ನು ಗಳಿಸಬೇಕೆಂದರೆ, ಈ ಅಗಾಧ ಆತ್ಮಯಜ್ಞಕ್ಕೆ ಸಿದ್ಧವಿದ್ದರಲ್ಲದೆ ಅದು ಎಂದಿಗೂ ಸಾಧ್ಯವಾಗದು. ಜೀವರತ್ನ ಸಮಾನವಾದ ಈವೊಂದು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಮನುಷ್ಯನು ತನ್ನ ಸರ್ವಸ್ವವನ್ನೂ ಕೊನೆಗೆ ಪ್ರಾಣವನ್ನೂ ಬೆಲೆಯಾಗಿ ಕೊಟ್ಟರೂ ಅದು ಅಲ್ಪವೇ ಇರುವುದು. 'ಆತ್ಮಾರ್ಥಂ ಪೃಥಿವೀಂ ತ್ಯಜೇತ್' ಆತ್ಮಸಿದ್ಧಿಗಾಗಿ ಅರ್ಥಾತ್ ಮೋಕ್ಷ ಪ್ರಾಪ್ತಿಗಾಗಿ ಪೃಥವಿಯನ್ನು ಎಂದರೆ ಸರ್ವಸ್ವವನ್ನೂ ತ್ಯಜಿಸಬೇಕು ಎಂದು ಆರ್ಯೋಕ್ತಿಯುಂಟಲ್ಲವೆ ! ಮೋಕ್ಷಪ್ರಾಪ್ತಿಗೆ ಬಂಧಕ ಸಾಮಗ್ರಿಗಳಾದ ಸಮಸ್ತವನ್ನೂ ನಿರ್ದಾಕ್ಷಿಣ್ಯವಾಗಿ ನೀಗಿ, ಬಂಧನದಿಂದ ಬಿಡುಗಡೆ ಹೊಂದಬೇಕಾದುದೇ ಮನುಷ್ಯನ ಪರಮ ಪುರುಷಾರ್ಥವು. ಇಂತಹ ಪುರುಷಾರ್ಥವನ್ನು ಸಾಧಿಸದಿದ್ದರೆ, ಮನುಷ್ಯನ ಬಾಳ್ವೆಯಿಂದಲಾದರೂ ಪ್ರಯೋಜನವೇನು ?-ಮೋಕ್ಷವೆಂಬುದು ಜನನ ಮರಣರೂಪವಾದ ಸಂಸಾರಬಂಧವಿಮೋಚನೆಯಿಂದ ಗಳಿಸಬೇಕಾದ ಬಿಡುಗಡೆಯು. ಸ್ವಾತಂತ್ರ್ಯವೆಂಬುದು ಲೌಕಿಕವಾದ ಪರದಾಸ್ಯ ಪರಾಧೀನ ಪರರ ಇಚ್ಛಾನುಕೂಲರಾಗಿ ನಡೆವ ದಾಸ್ಯಮನೋಭಾವ ಮುಂತಾದ ಬಂಧನಗಳಿಂದ ಪಡೆಯು

ಬೇಕಾದ ಬಿಡುಗಡೆಯು. ಪಾರತ್ರಿಕವಾಗಿ ಗಳಿಸಬೇಕಾದ ಮೋಕ್ಷಕ್ಕೆ, ಲೌಕಿಕವಾಗಿ ಗಳಿಸಬೇಕಾದ ಸ್ವಾತಂತ್ರ್ಯದ ಅಭಾವವೊಂದು ದೊಡ್ಡ ಪ್ರತಿಬಂಧಕವು. ಆದುದರಿಂದ ಪ್ರತಿಯೊಬ್ಬ ಮನುಷ್ಯನೂ ಧರ್ಮ, ಅರ್ಥ, ಕಾಮ ಎಂಬ ಲೌಕಿಕ ಪುರುಷಾರ್ಥಗಳನ್ನು ಗಳಿಸಬೇಕಾದರಾಗಲೀ ಅಥವ ಮೋಕ್ಷವೆಂಬ ಪರಮ ಪುರುಷಾರ್ಥವನ್ನು ಗಳಿಸಬೇಕೆಂದು ಇಚ್ಛಿಸಿದರಾಗಲೀ, ಪ್ರಾರಂಭಕ್ಕೆ ಲೌಕಿಕವಾದ-ಭೌತಿಕ ಸ್ವಾತಂತ್ರ್ಯವನ್ನು ತಪ್ಪದೆ ಗಳಿಸಿರಬೇಕು. ಮೋಕ್ಷಸುಖವೆಂಬುದು ಯೋಗ್ಯ ಗುರುವಿನ ಆಶ್ರಯದಿಂದ ಯೋಗ್ಯ ಪಾತ್ರವಾಗಿದ್ದರೆ-ಯೋಗ್ಯ ಸಾಧನೆಯಾಗದಿದ್ದರೆ ಲಭ್ಯವಾದೀತೆ ? ಹಾಗೆಯೇ ಸ್ವಾತಂತ್ರ್ಯ ಪ್ರಾಪ್ತಿಯೂ ಸುಲಭವಾಗಿ ಲಭಿಸದು. ಅದಕ್ಕೂ ಯೋಗ್ಯ ಗುರುಬೇಕು. ತಕ್ಕಷ್ಟು ಸಾಧನೆ ನಡೆಯಬೇಕು. ಆತ್ಮಯಜ್ಞವಾಗಬೇಕು. ಅಂತಹ ಯೋಗ್ಯ ಗುರುಗಳೂ - ಯಾಜ್ಞಿಕರೂ ಆಗಲರ್ಹರಾದ ಮಹನೀಯರು ಲೋಕಚರಿತ್ರೆಯಲ್ಲಿ ಹಲವರು ದೊರೆಯುವರು. ಸ್ವಾತಂತ್ರ್ಯ ದೇವಿಯ ಉಪಾಸಕರಾದ ಅಂತಹ ಆಚಾರ್ಯ ಪುರಷರಲ್ಲಿ ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಇಟಲೀ ದೇಶದಲ್ಲಿ ಜನ್ಮಿಸಿ ಮಹತ್ಕಾರ್ಯ ನಡೆಸಿದ ನಮ್ಮ ಕಥಾನಾಯಕನು ಅಗ್ರಗಣ್ಯನು. ಆತನ ಚರಿತ್ರೆಯು ಇಲ್ಲಿ ಯಥಾಸಾಧ್ಯವಾಗಿ ಕೊಡಲ್ಪಡುವುದು. ವಾಚಕ ಮಹಾಶಯರು ಮುಂದರಿಯಬೇಕು.

ಯೂರೋಪುಖಂಡದ ದಕ್ಷಿಣಭಾಗದಲ್ಲಿ ಇಟಲಿಯೆಂಬೊಂದು ಪುರಾತನ ದೇಶವಿದೆ. ಈ ದೇಶವು ಮೆಡಿಟರೇನಿಯನ್ ಅಥವ ಭೂಮಧ್ಯಸಮುದ್ರದೊಳಕ್ಕೆ ಚಾಚಿಕೊಂಡು ರೋಂ, ವೆನಿಸ್, ನೇಪಲ್ಸ್ ಮುಂತಾದ ಪುರಾತನ ಪಟ್ಟಣಗಳಿಂದ ಪ್ರಸಿದ್ಧವಾಗಿದೆ. ಈಗ ಬ್ರಿಟಿಷರು ಪ್ರಪಂಚದ ಬಹುಭಾಗಗಳನ್ನು ಸ್ವಾಧೀನಪಡಿಸಿಕೊಂಡು ಬಹು ಬಲಿಷ್ಠ ಜನಾಂಗವೆಂದು ಹೆಸರುವಾಸಿಯನ್ನು ಪಡೆದಿರುವಂತೆಯೇ, ಒಂದಾನೊಂದು ಕಾಲದಲ್ಲಿ ಈ ರೋಮನರೂ ಮಹಾಪ್ರಬಲರೆನ್ನಿಸಿ, ಆಗಿನ ಯೂರೋಪುಖಂಡದ ಬಹುಭಾಗಗಳನ್ನು ವಶಪಡಿಸಿಕೊಂಡು ರಾಜ್ಯವಾಳುತ್ತಿದ್ದರು. ಕಾಲಕ್ರಮದಲ್ಲಿ ಅವರ ಪ್ರಾಬಲ್ಯವು ಅಳಿದು ಇಟಲಿದೇಶವು ಛಿದ್ರಛಿದ್ರಗಳಾಗಿ ಹಂಚಿಹೋಯಿತು. ಫ್ರಾನ್ಸ್ ಮತ್ತು ಆಸ್ಟ್ರಿಯಾ ದೇಶಗಳ ಅರಸರು ತಮಗೆ ಅನುಕೂಲ ತೋರಿ

ದಂತೆಲ್ಲ, ಆದರ ಕೆಲ ಕೆಲ ಭಾಗಗಳನ್ನು ಸ್ವಾಧೀನಪಡಿಸಿಕೊಂಡು ಆಳತೊಡಗಿದರು. ಮಿಕ್ಕ ಕೆಲಭಾಗಗಳನ್ನು ಪೂರ್ವದಿಂದಲೂ ಅಲ್ಲೇ ನೆಲೆಸಿದ್ದ ನಮ್ಮ ಸೀಮೆಯ ಪಾಳೆಯಗಾರರಂತಹ ಚಿಕ್ಕಪುಟ್ಟ ಅರಸರು ಆಕ್ರಮಿಸಿಕೊಂಡು ಆಳತೊಡಗಿದರು. ಆ ಕಾಲದಲ್ಲಿ - ಆ ದೇಶದಲ್ಲಿ ಎಲ್ಲಿ ನೋಡಿದರೂ ದಂಗೆದರೋಡೆಗಳು, ಕಳ್ಳತನ ಸುಳ್ಳು ಮೋಸ ಲಂಚರುಷುವತ್ತುಗಳು ಮುಂತಾದುವು ನಿರ್ಭಯವಾಗಿ ನಡೆಯುತ್ತಿದ್ದುವು. ಪ್ರಜೆಗಳ ಧನಮಾನ ಪ್ರಾಣಗಳಿಗೆ ರಕ್ಷಣೆಯಿರಲಿಲ್ಲ. ಅಧಿಕಾರಿಗಳು ಸ್ವಸುಖಲೋಲುಪರೂ ಸ್ವಾರ್ಥಪರರೂ ಆಗಿದ್ದುದರಿಂದ ಪ್ರಜೆಗಳ ಕಷ್ಟನಷ್ಟಗಳು ಮೇರೆಮೀರಿದ್ದುವು. ಪ್ರಜೆಗಳು ದಂಗೆಯೆದ್ದು ನಿರಂಕುಶರಾದ ರಾಜರನ್ನೂ ಅಧಿಕಾರಿಗಳನ್ನೂ ಕೊನೆಗಾಣಿಸಿ, ತಮ್ಮ ಕ್ಷೇಮವನ್ನು ತಾವು ಸ್ಥಾಪಿಸಿಕೊಳ್ಳಬಹುದೆಂದರೆ ಅವರಲ್ಲಿ ಐಕಮತ್ಯವಾಗಲೀ, ಅಂತಹ ಐಕಮತ್ಯಭಾವ ಕಲ್ಪನೆಗೆ ಅವಕಾಶವಾಗಲೀ ಇರಲಿಲ್ಲ. ಸ್ವಾತಂತ್ರ್ಯಾಪೇಕ್ಷೆಯಿಂದ ತಮ್ಮ ದೇಶೀಯರಲ್ಲಿ ಐಕಮತ್ಯವನ್ನು ನೆಲೆಗೊಳಿಸಬೇಕೆಂದು ಪ್ರಯತ್ನಿಸುತ್ತಿದ್ದ ವರ್ತಮಾನ ಪತ್ರಗಳಿಗೂ, ಲೇಖನಗಳಿಗೂ ಗ್ರಂಥಗಳಿಗೂ ಉಳಿಗಾಲವಿರಲಿಲ್ಲ. ಪ್ರಜೆಗಳು ನಿಶ್ಯಂಕೆಯಿಂದ ತಮ್ಮ ಮನೋಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಿರಲಿಲ್ಲ. ಅಧಿಕಾರಿಗಳಾಗಲಿ ರಾಜ್ಯಾಂಗದವರಾಗಲಿ ನಡೆಯಿಸಿದ ಅನ್ಯಾಯದ ಆಚರಣೆಯನ್ನು ನಿರ್ಭಯವಾಗಿ ಆಡಿ ತೋರಿಸುವವನು ರಾಜದ್ರೋಹಿಯೆಂದು ಪರಿಗಣಿಸಲ್ಪಟ್ಟು, ಸೆರೆಮನೆಯಲ್ಲಿ ವಿವಿಧ ಕಷ್ಟನಷ್ಟಗಳ ಪಾಲಾಗಿ ಕೊಳೆಯಬೇಕಾಗಿತ್ತು.

ದೇಶಸ್ಥಿತಿಯು ಹೀಗೆ ಶೋಚನೀಯವಾಗಿದ್ದ ಸಂದರ್ಭದಲ್ಲೇ ಆ ದೇಶದ ಜಿನೋವಾ ಎಂಬೊಂದು ನಗರದ ಪಿಯಾ ಲೋಮೇಲಿನಾ ಎಂಬೊಂದು ಸ್ಥಳದಲ್ಲಿ ೧೮೦೫ನೆಯ ಜೂನ್ ೨೨ನೆಯ ಶುಭದಿನದಲ್ಲಿ ಜೋಸೆಫ್ ಮ್ಯಾಝಿನಿಯು ಜನ್ಮವೆತ್ತಿದನು. ಆತನ ತಂದೆಯು ವಿಶ್ವವಿದ್ಯಾನಿಲಯದಲ್ಲಿ ಶರೀರ ಶಾಸ್ತ್ರದ ಪಂಡಿತನಾಗಿ ಹೆಸರುವಾಸಿಯನ್ನು ಪಡೆದಿದ್ದನು. ಆತನು ಬಹು ದಯಾಳು-ಉದಾರಿ. ಧನವಂತರು ದರಿದ್ರರು ಎಂಬ ಭೇದಭಾವವಿಡದೆ ಕಷ್ಟದಲ್ಲಿ ಸಿಕ್ಕಿದವರಿಗೆ ತನ್ನ ಕೈಯಲ್ಲಾದ ಸಹಾಯವನ್ನು ಶಕ್ತಿ ಲೋಪವಿಲ್ಲದೆ ಮಾಡುವನು. ಆತನ ಪತ್ನಿಯೂ ದಯಾ ಸ್ವಭಾವದವಳು,

ಸಿಶ್ಚಲಚಿತ್ತಳು, ಬುದ್ಧಿವಂತಳು. ಸ್ವಕೀಯಕಷ್ಟನಷ್ಟಗಳನ್ನು ಲಕ್ಷ್ಯ ಮಾಡದೆ ಪರೋಪಕಾರನಿರತಳಾಗಿರುವಳು ಆ ದಂಪತಿಗಳು ತಮ್ಮ ಸುತ್ತುಮುತ್ತಲೂ ವ್ಯಾಪಿಸಿದ್ದ ರಾಜಕೀಯ ವಾತಾವರಣವನ್ನು ಚೆನ್ನಾಗಿ ಅರಿತಿದ್ದು ಮನೆಯಲ್ಲಿ ಸರ್ವದಾ ಆ ವಿಷಯದಲ್ಲಿ ಮಾತುಕಥೆಗಳನ್ನಾಡುತ್ತಿದ್ದರು. ಮ್ಯಾಜಿನಿಯ ತಾಯಿಯು ಬಹು ಖಂಡಿತಪ್ರಕೃತಿಯ ಹೆಂಗಸು. ಚಿಕ್ಕಂದಿನಿಂದಲೂ ತನ್ನ ಮಕ್ಕಳು ಕಷ್ಟಸಹಿಷ್ಣುಗಳೂ ವಿಚಾರಪರರೂ ಆಗುವಂತೆ ಪ್ರಯತ್ನಿಸಿ - ಲಕ್ಷ್ಯಪೂರ್ವಕ ಬೆಳೆಸಿದಳು. ತನ್ನ ಮನೆಯ ಆ ನಾಲ್ಕುಗೋಡೆಗಳ ಮಧ್ಯದಲ್ಲೇ ಗವರ್ನರರೇ ಮುಂತಾದ ರಾಜ್ಯಾಧಿಕಾರಿಗಳು ರಾಜ್ಯಾಡಳಿತಗಳಲ್ಲಿ ಮಾಡುವ ಅಸಭ್ಯವರ್ತನೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುತ್ತಿದ್ದಳು. ಪ್ರಜಾಸ್ವಾತಂತ್ರ್ಯ ವಿಷಯದಲ್ಲಿ ಪಕ್ಷಪಾತವನ್ನುಂಟಾಗಿದ್ದ ಅವರ ಮಾತುಗಳು ಚಿಕ್ಕವಯಸ್ಸಿನ ಮ್ಯಾಝಿನಿಯ ಮನಸ್ಸಿನಮೇಲೆ ವಿಶೇಷಪರಿಣಾಮವನ್ನುಂಟುಮಾಡಿದುವು ಮ್ಯಾಝಿನಿಯು ತನ್ನ ಮೂವರು ಸೋದರಿಯರೊಂದಿಗೂ, ತಾಯಿತಂದೆಗಳೊಂದಿಗೂ ವಾಸಿಸಿದ್ದ ಅವರ ಆ ಮನೆಯನ್ನು ಲೊಮೇಲಿಯಾದಲ್ಲಿ ಇನ್ನೂ ರಕ್ಷಿಸಿಟ್ಟಿದ್ದಾರೆ. 'ಅರಮನೆಗಳ ನಗರ'ವೆಂದು ಪ್ರಸಿದ್ಧವಾದ ಜೆನೋವಾವನ್ನು ಸಂದರ್ಶಿಸುವ ಪ್ರತಿಯೊಬ್ಬ ಪ್ರಯಾಣಿಕನೂ, ತಪ್ಪದೆ ಆತನ ಆ ಜನ್ಮಗೃಹಕ್ಕೂ ಹೋಗಿ ನೋಡಿಬರುವುದುಂಟು. ಹಾಗೆ ಸಂದರ್ಶಿಸಿದ ಪ್ರತಿಯೊಬ್ಬನಿಗೂ ಅಲ್ಲಿ ಹಾಜರಿರುವ ನೌಕರನೊಬ್ಬನು, ಮ್ಯಾಝಿನಿಯಿಂದ ರಚಿತವಾಗಿ ಲೋಕೋತ್ತರವಾದುದೆಂದು ಹೆಸರಾಗಿರುವ 'Duties of Man' ಎಂದರೆ 'ಮಾನುಷ ಕರ್ತವ್ಯ' ಎಂಬೊಂದು ಅಮೌಲ್ಯ ಗ್ರಂಥದ ಒಂದು ಪ್ರತಿಯನ್ನು ಉಚಿತವಾಗಿ ಕೊಡುವುದುಂಟು.

ಉದಾರಸ್ವಭಾವದ ಮಾತಾಪಿತೃಗಳಿಂದ ಜನನಹೊಂದಿ ಪ್ರಜಾಸ್ವಾತಂತ್ರ್ಯ ಪಕ್ಷಪಾತವುಳ್ಳ ಮಾತುಕಥೆಗಳು ಸದಾ ನಡೆಯುತ್ತಿದ್ದ ಆ ಮನೆಯ ವಾತಾವರಣದಲ್ಲಿ ಬೆಳೆದ ಜೋಸೆಫ್ ಮ್ಯಾಝಿನಿಯ ಚಿತ್ತವೃತ್ತಿಯು, ಅದಕ್ಕೆ ತಕ್ಕಂತೆಯೇ ರೂಪುಗೊಂಡು ಚಿಕ್ಕಂದಿನಿಂದಲೂ, ಆತನನ್ನು, ಆತನ ಜೀವಿತೋದ್ದೇಶಸಾಧನೆಗೆ ಯೋಗ್ಯನನ್ನಾಗಿ ತಯಾರಿಸಿತು.

———

ಅಧ್ಯಾಯ ೨ "ದೇಶಭ್ರಷ್ಟತೆ"

ಚಿಕ್ಕಂದಿನಲ್ಲಿ ಮ್ಯಾಝಿನಿಯು ದೃಢಗಾತ್ರನಾಗಿರಲಿಲ್ಲ ಬಹು ಸೂಕ್ಷ್ಮ ಪ್ರಕೃತಿಯವನಾಗಿದ್ದ ತನ್ನ ಮಗನ ದೇಹಾರೋಗ್ಯದ ವಿಷಯದಲ್ಲ ಆತನ ತಂದೆಯು ಆಗಾಗ ಬಹು ವಿಚಾರಪಡುತ್ತಿದ್ದುದುಂಟು. ಆದರೆ ಬಾಲಕನು ಮೇಧಾವಿಯೂ, ಸೂಕ್ಷ್ಮಮತಿಯೂ, ಗಾಂಭೀರ್ಯಶಾಲಿಯೂ ಆಗಿ ತನ್ನ ತಾಯಿ ತಂದೆಗಳ ಪ್ರೇಮಪಾತ್ರನಾಗಿದ್ದನು ಅವನು ಚಿಕ್ಕಂದಿನಲ್ಲಿ ಪಾಠಶಾಲೆಯಲ್ಲಿ ಮಾಡಿದ ವಿದ್ಯಾಭ್ಯಾಸವೆಂದರೆ ಅತ್ಯಲ್ಪಕಾಲ. - ಮನೆಯಲ್ಲೇ ಒಬ್ಬ ವೃದ್ಧ ಉಪದೇಶಿಯು ಅವನಿಗೆ ಲ್ಯಾಟಿನ್ಭಾಷೆಯ ವ್ಯಾಕರಣವನ್ನು ಕಲಿಸಿದ್ದನು. ಸ್ವಾತಂತ್ರ್ಯ ಪ್ರಿಯರೆಂದರೆ ಅವರ ವಿಷಯದಲ್ಲಿ ಅವನಿಗೆ ಅತಿಶಯ ಪ್ರೇಮ ಉತ್ಪನ್ನವಾಗುತ್ತಿತ್ತು. ಸ್ವಾತಂತ್ರ್ಯ ಪ್ರಿಯರಾದ ಗ್ರೀಸ್ ಮತ್ತು ರೋಂ ದೇಶಗಳ ಪೂರ್ವಿಕ ಮಹನೀಯರ ಚರಿತ್ರೆಗಳನ್ನು ಅವನು ಅತ್ಯಾದರದಿಂದ ಕೇಳಿ ಉತ್ಸಾಹಗೊಳ್ಳುತ್ತಿದ್ದನು. - ಹಾಗೆಯೇ ಸ್ವಾತಂತ್ರ್ಯ ಮನೋಭಾವದ ತನ್ನ ದೇಶೀಯರಿಗೆ ಕಷ್ಟಪ್ರಾಪ್ತವಾದರೆ ಅದು ತನಗೆ ಪ್ರಾಪ್ತವಾದುದೋ ಎಂಬಂತೆ ಮರುಗುವನು. ಅವನು ಒಂಬತ್ತು ವರ್ಷವಯಸ್ಕನಾಗಿದ್ದಾಗ ಫ್ರಾನ್ಸ್ ಚಕ್ರವರ್ತಿ ನೆಪೋಲಿಯನನ ಆಳ್ವಿಕೆಯು ಅಂತ್ಯವಾಗಿ ಅವನು ಸೆರೆಯಾಗಿ ಎಲ್ಬಾ ದ್ವೀಪಕ್ಕೆಹೋದ ವಾರ್ತೆಯು ತಿಳಿಯಿತು. ಮ್ಯಾಝಿನಿಯ ತಂದೆಯು, ನೆಪೋಲಿಯನನು ಇಟಲೀದೇಶದಲ್ಲೇ ಜನ್ಮಿಸಿ, ನಿರಂಕುಶರಾದ ರಾಜರ ಅಧಿಕಾರವನ್ನು ಮುರಿಯುವುದಕ್ಕಾಗಿ ಹೆಣಗಿದ ಶೂರನೆಂಬ ಸಂಗತಿಯನ್ನು ಆ ಬಾಲಕನ ಗಮನಕ್ಕೆ ತಂದಿದ್ದನು. ಅದನ್ನು ಕೇಳಿದ ಮ್ಯಾಝಿನಿಯು ಆತನಿಗೆ ಪ್ರಾಪ್ತವಾದ ಕಷ್ಟಕ್ಕಾಗಿ ಅತಿಶಯ ಮರುಗಿದನು. - ಅವನ ಮನಸ್ಸು ಅಷ್ಟು ಕೋಮಲವಾದುದು.

ಮ್ಯಾಝಿನಿಯು ತನ್ನ ಹದಿನಾಲ್ಕನೆಯ ವಯಸ್ಸಿನಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ಆ ಕಾಲದ ವಿದ್ಯಾಭ್ಯಾಸ ಪದ್ಧತಿಯು, ಬಾಲಕರ ಮನೋಧರ್ಮವನ್ನನುಸರಿಸಿ ನಡೆಯದೆ ನಿಸರ್ಗವಿರೋಧವಾದ ಒಂದು ಬಗೆಯ ಕಠೋರಕ್ರಮವನ್ನನುಸರಿಸಿ ನಡೆಯುತ್ತಿತ್ತು

ವಿದ್ಯಾಭ್ಯಾಸದಲ್ಲಿ ವಿದ್ಯಾರ್ಥಿಗಳಿಗೆ ಉತ್ಸಾಹವುಂಟಾಗುವುದಕ್ಕೆ ಪ್ರತಿಯಾಗಿ ಬೇಸರವೂ ವಿರೋಧವೂ ಹುಟ್ಟುವಂತಿದ್ದಿತು. ಸ್ವಭಾವವಾಗಿ ಸ್ವಾತಂತ್ರ್ಯ ಮನೋಭಾವವುಳ್ಳವನಾಗಿದ್ದ ಮ್ಯಾಝಿನಿಗೆ ಆ ಬೋಧಕರ ನಡತೆಯೂ ವಿದ್ಯಾರ್ಥಿಗಳು ತಮ್ಮ ಆಜ್ಞಾಬದ್ಧರಾಗಿ ನಡೆಯಬೇಕೆಂದು ಅವರು ಏರ್ಪಡಿಸುತ್ತಿದ್ದ ಕಟ್ಟಳೆಗಳೂ ಅನ್ಯಾಯವೆಂದು ತೋರಿ ಅನೇಕವೇಳೆ ಅವನನ್ನು ರೇಗಿಸುತ್ತಿದ್ದುವು. ಅಂತಹ ಸಂದರ್ಭಗಳಲ್ಲೆಲ್ಲ, ಮ್ಯಾಝಿನಿಯು ಅನ್ಯಾಯವೆಂದು ತೋರುವ ಅಂತಹ ಕಟ್ಟಳೆಗಳನ್ನು ಮುರಿದು, ತನಗೆ ಯುಕ್ತವೆಂದು ತೋರಿದಂತೆಯೇ ನಡೆಯುವನು. ಅವನ ಈ ಹಟಮಾರಿತನವನ್ನು ಕುರಿತು ಉಪಾಧ್ಯಾಯರು ಅವನ ತಂದೆಯ ಎದುರಿಗೂ ಹೇಳುವರು. ಆದರೂ ಏನೂ ಪ್ರಯೋಜನವಾಗುತ್ತಿರಲಿಲ್ಲ. — ಆದರೆ ಇತರ ವಿಚಾರಗಳಲ್ಲಿ ಆ ಬಾಲಕನ ಗುಣನಡತೆಗಳು ಅತಿ ಮೋಹಕವಾಗಿದ್ದುವು. ಅವನ ನಯವಿನಯಗಳು, ಸೂಕ್ಷ್ಮಮತಿ, ಗಾಂಭೀರ್ಯಯುಕ್ತ ನಡೆನುಡಿಗಳು, ಇವು ಅವನ ಸಹಪಾಠಿಗಳಿಗೆಲ್ಲರಿಗೂ ಪ್ರಿಯಕರವಾಗಿ ಅವನಿಗೆ ಉಚ್ಚಸ್ಥಾನವನ್ನು ಗಳಿಸಿಕೊಟ್ಟಿದ್ದುವು. ಅವನ ಸಹಪಾಠಿಯಾದ ಒಬ್ಬಾನೊಬ್ಬ ಗೆಳೆಯನು ಅವನ ವಿಚಾರವಾಗಿ ಬರೆಯುವಾಗ - 'ಮ್ಯಾಝಿನಿಯು ಮಿತವ್ಯಯಿಯೂ, ಆಡಂಬರವನ್ನು ಮೆಚ್ಚದ ಸರಳ ಪ್ರಕೃತಿಯವನೂ ಆಗಿದ್ದರೂ, ತನ್ನ ಸುತ್ತುಮುತ್ತಲೂ ಇದ್ದ ಆರ್ತರಿಗೆ ಸಹಾಯಮಾಡುವಲ್ಲಿ ಎಂದಿಗೂ ಹಿಂದಾಗುತ್ತಿರಲಿಲ್ಲ. ಒಂದೊಂದುವೇಳೆ, ಹಾಗೆ ಸಹಾಯಮಾಡುತ್ತಿದ್ದುದರಲ್ಲಿ ಹದ್ದುಮೀರಿ ಹೋಗುತ್ತಿದ್ದುದೂ ಉಂಟು. ಕೇವಲ ನಿರ್ಗತಿಕರಾದ ಸಹಪಾಠಿಗಳಿಗೆ, ಅವನು ತನ್ನ ಪುಸ್ತಕಗಳು ದುಡ್ಡು ಕೊನೆಗೆ ಮೈಗೆ ತೊಟ್ಟಿದ್ದ ಬಟ್ಟೆಗಳನ್ನು ಸಹ ಕೊಟ್ಟು ಸಂತೋಷಪಡಿಸುತ್ತಿದ್ದ ದಯಾಸ್ವಭಾವವು ಅವನಲ್ಲಿತ್ತು' ಎಂದು ಹೇಳಿದ್ದಾನೆ.

ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ತರುವಾಯ, ತಂದೆಯ ಅಭಿಪ್ರಾಯವನ್ನನುಸರಿಸಿ, ಆತನು ಮಾಡುತ್ತಿದ್ದ ಉದ್ಯೋಗವನ್ನೇ ಅನುಸರಿಸಬೇಕೆಂದು ಮ್ಯಾಝಿನಿಯು ವೈದ್ಯ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದನು. ಆದರೆ, ಒಂದುಸಾರಿ ಶಸ್ತ್ರಚಿಕಿತ್ಸಾ ಗೃಹವನ್ನು ಪ್ರವೇಶಿಸಿ, ಅಲ್ಲಿ ದೇಹಪರೀಕ್ಷೆಗಾಗಿ ಪ್ರಾಣಿಗಳನ್ನು ಕೊಯ್ಯುವ ದೃಶ್ಯವನ್ನು

ಕಂಡೊಡನೆಯೇ ಮೂರ್ಛೆ ಬಂದಂತಾಗಿ ಹೊರಕ್ಕೆ ಬಂದುಬಿಟ್ಟನು. ಸರಿ, ವೈದ್ಯ ವಿದ್ಯಾಭ್ಯಾಸವು ಅದರೊಂದಿಗೆ ಕೊನೆಗಂಡು, ಮುಂದೆ ನ್ಯಾಯಶಾಸ್ತ್ರ (Law) ವನ್ನು ಕಲಿಯಲು ಇಚ್ಛೆಗೊಂಡನು. ಆತನ ತಂದೆಗೆ ಅದು ಇಷ್ಟವಿರಲಿಲ್ಲವಾದರೂ ಒಪ್ಪಿಕೊಳ್ಳದೆ ಇದ್ದರೆ ವಿಧಿಯಿಲ್ಲವಾಯಿತು. ಮ್ಯಾಝಿನಿಯು ವಿಶ್ವವಿದ್ಯಾಲಯದ ಉಪನ್ಯಾಸ ಮಂದಿರಕ್ಕೂ, ಪ್ರೊಫೆಸರರು ಪಾಠ ನಡೆಸುತ್ತಿದ್ದ ಸ್ಥಳಗಳಿಗೂ ತಪ್ಪದೆ ಹೋಗುತ್ತಿದ್ದನಾದರೂ, ಅವುಗಳ ವಿಷಯದಲ್ಲಿ ಆವನಿಗೆ ಪ್ರೇಮವಾಗಲಿ ಅಭಿಮಾನವಾಗಲಿ ಇರಲಿಲ್ಲ. ಏಕೆಂದರೆ, ಸಾಮಾನ್ಯವಾಗಿ ಶಾಲೆಗಳಲ್ಲೂ ವಿಶ್ವವಿದ್ಯಾನಿಲಯಗಳು ಮುಂತಾದ ಸ್ಥಳಗಳಲ್ಲೂ ನಡೆವ ಪಾಠಪ್ರವಚನಗಳು, ಉಪನ್ಯಾಸಗಳು ಮುಂತಾದುವುಗಳಲ್ಲಿ ಪ್ರಜಾಮತಕ್ಕೆ ವಿರೋಧವಾದ ಸರಕಾರದ ಗುಪ್ತ ಹಸ್ತಚಿಹ್ನೆಯು ಕಾಣಬರುತ್ತಿತ್ತು. ಆಗಿನ ವಿದ್ಯಾನಿಲಯಗಳ ಕೆಲವು ಕಾಯಿದೆಗಳು ಎಷ್ಟುಮಟ್ಟಿಗೆ ಮನಸ್ಸಿಗೆ ತಾಪದಾಯಕವಾಗಿದ್ದುವೆಂಬುದನ್ನು ತಿಳಿಸುವುದಕ್ಕೆ ಒಂದು ಉದಾಹರಣೆಯು ಸಾಕಾಗಿದೆ.—' ಯಾವನೊಬ್ಬ ಪುರುಷನೂ ಮೀಸೆಯನ್ನು ಬಿಡಿಸಿ ಬೆಳೆಯಿಸಬಾರದು. ಹಾಗೆ ಮೀಸೆಯನ್ನು ಬೆಳೆಯಿಸುವುದು ಕ್ರಾಂತಿಕಾರನ ಚಿತ್ತವೃತ್ತಿಯನ್ನು ವ್ಯಕ್ತಪಡಿಸುವ ಚಿಹ್ನೆ, ಎಂಬ ಅಭಿಪ್ರಾಯವನ್ನುಂಟಾಗಿದ್ದು, ಕಲಾಶಾಲೆಯ ಅಧಿಕಾರಿಗಳು ಹಾಗೆ ಯಾವನಾದರೂ ವಿದ್ಯಾರ್ಥಿಯು ಮೀಸೆ ಬೆಳೆಸುತ್ತಿದ್ದರೆ, ಅವನನ್ನು ಇಬ್ಬರು ಪೋಲೀಸಿನವರೊಂದಿಗೆ ಕ್ಷೌರಕನ ಅಂಗಡಿಗೆ ಕಳುಹಿಸಿ ಅದನ್ನು ತೆಗೆಯಿಸುತ್ತಿದ್ದರು, ಮನುಷ್ಯನ ಸ್ವಾಭಾವಿಕ ಸ್ವಾತಂತ್ರ್ಯಾಚರಣೆಗೂ ಅವಕಾಶ ಕೊಡದಿದ್ದ ಸರಕಾರದ ಈ ಬಗೆಯ ಚೇಷ್ಟೆಯು ಅವನ ದೇಹ ರಕ್ತವನ್ನು ಆ ಚಿಕ್ಕತನದಲ್ಲೇ ಕುದಿಸಿಬಿಟ್ಟದ್ದಿತು.

ನ್ಯಾಯಕಲಾಶಾಲೆಯಲ್ಲಿದ್ದಾಗಲೇ ಮ್ಯಾಝಿನಿಯು ತನ್ನ ಸಹಪಾಠಿಗಳ ಮತ್ತು ಸಮವಯಸ್ಕರ ಗುಂಪಿಗೆ ನಾಯಕನಾದನು. ಆತನ ವಿಸ್ತಾರವಾದ ಫಾಲಪ್ರದೇಶವೂ, ತೇಜಃಪುಂಜವಾದ ಕಣ್ಣುಗಳೂ, ಸ್ಫುಟವಾದ ವಾಣಿಯೂ, ಆಜಾನುಬಾಹುಗಳೂ, ಭವ್ಯಾಕೃತಿಯೂ, ಆತನಿಗೆ ಹೋದಲ್ಲಿ ವ್ಯಕ್ತಿ ಗೌರವವನ್ನು ತಂದೀಯಲು ಸಾಕಾದ ಸಾಧನಗಳಾಗಿದ್ದುವು. ಸದಾ ಉದ್ಯೋಗತತ್ಪರನೂ, ಏಕಾಂತಪ್ರಿಯನೂ ಆಗಿದ್ದರೂ ಆತನು

ತನ್ನ ಮಿತ್ರರ ವಿಷಯದಲ್ಲಿ ಆದರ ಭಾವವನ್ನೂ ಅಂತರ್ಯ ಪ್ರೇಮವನ್ನೂ ವ್ಯಕ್ತಪಡಿಸದಿರುತ್ತಿರಲಿಲ್ಲ. ಆತನಿಗೆ ಅಂಗಸಾಧನೆಯ ವಿಷಯದಲ್ಲಿ ವಿಶೇಷ ಅಭಿಮಾನ ಗಾಯನದಲ್ಲೂ ವೀಣಾವಾದನದಲ್ಲೂ ಆತನಿಗೆ ಸ್ವಾಭಾವಿಕವಾಗಿಯೇ ಪಾಂಡಿತ್ಯವುಂಟಾಗಿತ್ತು. ಈ ಗಾನಕಲಾಕುಶಲತೆಯು ಮಧ್ಯಮ ತರಗತಿಯ ಮತ್ತು ಶ್ರೀಮಂತ ತರಗತಿಯ ಅನೇಕ ಮಂದಿ ತರುಣರ ಸ್ನೇಹವನ್ನು ಅವನಿಗೆ ಗಳಿಸಿಕೊಟ್ಟಿತು. ವಿದ್ಯಾರ್ಥಿ ದೆಸೆಯಿಂದಲೂ, ನಿಷ್ಕಪಟಯೋಚನೆ, ನಿಶ್ಚಲಮನಸ್ಸು, ಸ್ಪಷ್ಟಭಾಷಣ, ನಿರ್ಭೀತಸ್ವಭಾವ ನಿಸ್ವಾರ್ಥತೆ, ಋಜುಸ್ವಭಾವ ಮುಂತಾದುವು ಅವನಲ್ಲಿ ಬೇರೂರಿಕೊಂಡಿದ್ದು, ಆ ಮೊಳೆಯು ಎಂತಹ ಬೆಳೆಯನ್ನು ಕೊಟ್ಟೀತೆಂಬುದರ ಸೂಚನೆಯನ್ನು ತೋರಿಸುತ್ತಿದ್ದುವು.

ಮ್ಯಾಝಿನಿಯ ನಾಯಕತ್ವದಲ್ಲಿ ಬೆರೆದ ಸ್ನೇಹಿತರ ಗುಂಪು ಪ್ರಾರಂಭಕ್ಕೆ ಗ್ರಂಥವ್ಯಾಸಂಗವನ್ನು ತಮ್ಮ ಮುಖ್ಯ ಉದ್ದೇಶ್ಯವನ್ನಾಗಿ ಕೈಕೊಂಡಿತು. ಸಾಹಿತ್ಯ ಮತ್ತು ರಾಜಕೀಯ ಗ್ರಂಥಗಳ ಪಾಠಮಾಡುವಿಕೆಯೂ, ಸರ್ಕಾರದವರಿಂದ ನಿಷೇಧಿಸಲ್ಪಟ್ಟಿದ್ದ ಗುಪ್ತ ಸಾಹಿತ್ಯವನ್ನು ಪ್ರಯತ್ನ ಪೂರ್ವಕ ಹುಡುಕಿ, ಪಾಠಮಾಡಿ ಪ್ರಚಾರಗೊಳಿಸುವುದೂ ಅವರ ಉದ್ದೇಶವಾಗಿತ್ತು. ಮ್ಯಾಝಿನಿಗೆ ಸ್ವಾಭಾವಿಕವಾಗಿ ಸಾಹಿತ್ಯ ಮತ್ತು ಇತಿಹಾಸ ಈ ಭಾಗಗಳು ವಿಶೇಷ ಪ್ರಿಯಕರವಾಗಿದ್ದುವು. ಫ್ರೆಂಚ್ ಮತ್ತು ಇಂಗ್ಲೀಷ್ ಭಾಷೆಗಳ ಪರಿಚಯವೂ ಆತನಿಗಿದ್ದು, ಷೇಕ್ಸ್ಪಿಯರ್, ಬೈರನ್ ಮುಂತಾದ ಆಂಗ್ಲ ಕವಿವರ್ಯರ ಗ್ರಂಥಗಳನ್ನೆಲ್ಲ ಅವನು ಓದಿ ಮುಗಿಸಿದ್ದನು. ಆತನ ಪ್ರೀತಿಪಾತ್ರ ಪುಸ್ತಕವೆಂದರೆ, ಬಯ್ಬಲ್ ಮತ್ತು ಡಾಂಟೆ ಎಂಬ ಇಟಲಿಯ ಕವಿಶೇಖರನ ಗ್ರಂಥಗಳು. ಇವು ಅವನ ಜೀವನ ತತ್ವಗಳ ಹಲವು ರಹಸ್ಯಗಳ ತಿಳಿವಳಿಕೆಯನ್ನುಂಟುಮಾಡಿಕೊಟ್ಟುವು. ಮ್ಯಾಝಿನಿಯ ಜೀವಮಾನವು ಕೇವಲ ರಾಜಕೀಯ ಕಾರ್ಯಗಳಿಗಾಗಿಯೇ ವಿನಿಯೋಗವಾಯಿತಾದರೂ, ಆತನಿಗೆ ಸ್ವಾಭಾವಿಕ ಪ್ರೇಮವಿರಲಿಲ್ಲ. ನಾಟಕಗಳು ಐತಿಹಾಸಿಕ ಕಾದಂಬರಿಗಳು ಮುಂತಾದ ಗ್ರಂಥರಚನೆಯಲ್ಲಿ ಆತನಿಗೆ ವಿಶೇಷ ಅಭಿಲಾಷೆಯಿತ್ತು. ಆದರೆ ದೇಶವು ಪಾರತಂತ್ರ್ಯ ಶರಧಿಯ ತರಂಗಗಳಲ್ಲಿ ಕೊಚ್ಚಿ ಹೋಗುತ್ತಿರುವಾಗ್ಗೆ, ಅದಕ್ಕಾಗಿ ತನುಮನಧನ

ಗಳನ್ನೂ ಸೂರೆಗೊಟ್ಟು ಶ್ರಮಿಸಬೇಕಲ್ಲದೆ, ಕೇವಲ ಗ್ರಂಥರಚನೆ ಮಾಡುತ್ತಾ ಕುಳ್ಳಿರುವುದು ಹೇಡಿತನವೆಂದು ಹಳಿದಿರುವನು. ಆದರೆ ಗ್ರಂಥರಚನೆ ಮಾಡುವುದಾದರೆ ಅವು ದೇಶಾಭಿಮಾನ ಧರ್ಮಾಭಿಮಾನ ಗಳನ್ನು ಹುಟ್ಟಿಸತಕ್ಕುವೂ ಆಗಿರಬೇಕೆಂಬುದು ಆತನ ಅಭಿಪ್ರಾಯವಾ ಗಿತ್ತು. ಪ್ರಾಚೀನ ಮಾರ್ಗವನ್ನನುಸರಿಸಿ ಮಾಡುವ ಗ್ರಂಥರಚನೆಗೆ ಆತನ ಪುರಸ್ಕಾರವಿರದೆ, ಸ್ವಾತಂತ್ರ್ಯ ಪ್ರೇಮ ಮತ್ತು ದೇಶೀಯರಲ್ಲಿ ಐಕ ಮತ್ಯ ಸ್ವದೇಶಾಭಿಮಾನ ಮುಂತಾದುವುಗಳನ್ನು ಪ್ರತಿಪಾದಿಸುತ್ತಿದ್ದ ಗ್ರಂ ಥಗಳನ್ನು ಅವನು ಹೆಚ್ಚಾಗಿ ಗೌರವಿಸುತ್ತಿದ್ದನು.

ಸಾಹಿತ್ಯ ಪ್ರೇಮಿಯಾದ ಮ್ಯಾಝಿನಿಯು, ಆವರೆಗಿನ ಐರೋಪ್ಯ ಗ್ರಂಥಕಾರರನೇಕರ ಗ್ರಂಥಗಳನ್ನು ಪಠಿಸಿ ಅವುಗಳಲ್ಲಿಯ ಸಾರವನ್ನು ಸಂಗ್ರ ಹಿಸಿದ್ದನು. ಡ್ಯಾಂಟೆಯ ಗ್ರಂಥಗಳು, ಅವನ ಮನಸ್ಸಿನಮೇಲೆ ವಿಶೇಷ ತರದ ಪರಿಣಾಮವನ್ನುಂಟುಮಾಡಿದುದು ಮಾತ್ರವಲ್ಲ— ಆತನ ಜೀವಿತ ದಲ್ಲಿ ಕಂಡುಬಂದ ದೇಶಾಭಿಮಾನ ಧರ್ಮಾಭಿಮಾನ, ನಿರ್ಭೀತಿ, ಮುಂತಾದ ಹಲವು ಜೀವಿತಸೂತ್ರಗಳನ್ನು ಆತನಲ್ಲಿ ಮೂಡಿಸಿದುವು. ಡ್ಯಾಂಟೇ ಮಾತ್ರ ವಲ್ಲ, ಬೈರನ್, ಷೇಕ್ಸ್‌ಪಿಯರ್, ಷೆಲ್ಲಿ, ಷಿಲ್ಲರ್ ವರ್ಡ್ಸ್‌ವರ್ತ್, ಮುಂತಾದ ಆಂಗ್ಲೇಯ ಕವಿಗಳೂ, ಸ್ಕಾಟ್ ಮುಂತಾದ ಪ್ರಬಂಧ ಲೇಖಕರೂ, ಗೋಥೆ, ವಿಕ್ಟರ್‌ಹ್ಯೂಗೋ ಮುಂತಾದ ಪ್ರಸಿದ್ಧ ಲೇಖಕರೂ ಅವನ ಚಿತ್ತವನ್ನು ಆಕರ್ಷಿಸಿದರು. ಹೀಗೆ ಸ್ವಾತಂತ್ರ್ಯ ಮನೋಭಾವ ಬೋಧಕಗಳಾದ ಹಲವು ಗ್ರಂಥಗಳ ಪಠನೆಯಿಂದ ಆತನ ಚಿತ್ತವೃತ್ತಿಯು ದಾಸ್ಯ ಮನೋ ಭಾವದ ಸೋಂಕನ್ನರಿಯದೆ ಪರಿಶುದ್ಧವಾಗಿರಲು ಸಹಾಯಕವಾದುವು. ಮ್ಯಾಝಿನಿಯು ಮುಂದೆ ತನ್ನ ಅಭಿಪ್ರಾಯಗಳನ್ನು ವೃತ್ತಪತ್ರ ಮಾಸಿಕಪ ತ್ರಗಳಿಗೆ ಬರೆದು ಕಳುಹಿಸಲಾರಂಭಿಸಿದನು. ಅವು ಮೇಲೆ ಕಾಣುವಂತೆ ವಾಙ್ಮಯಾತ್ಮಕವಾಗಿದ್ದರೂ ಪ್ರಚಲಿತ ರಾಜಕೀಯ ವಿಚಾರಗಳ ವಿಮರ್ಶೆ ಗಳನ್ನೂ, ಅವುಗಳಮೇಲೆ ಆತನ ವ್ಯಕ್ತ್ಯಭಿಪ್ರಾಯಗಳನ್ನೂ ವ್ಯಕ್ತಪಡಿಸ ದಿರುತ್ತಿರಲಿಲ್ಲ. ಕೆಲವುಕಾಲ ಹೀಗೆ ನಡೆಯುವುದರೊಳಗಾಗಿ ಸರ್ಕಾರದ ಕಟಾಕ್ಷವು ಅವುಗಳಮೇಲೆ ಬಿದ್ದು, ಅವುಗಳನ್ನು ಛಾಪಿಸಿ ಪ್ರಕಟಿಸದಂತೆ ಪ್ರತಿಬಂಧ ಹೊಂದಿದುವು.

ಮನಸ್ಸಿನಲ್ಲಿ ಜನ್ಮತಃ ಇದ್ದ ಈ ಸ್ವಾತಂತ್ರ್ಯ ಅಭಿಪ್ರಾಯಗಳನ್ನು ಉತ್ತೇಜನಗೊಳಿಸಿ, ಅವಕ್ಕೆ ಒಂದು ಮೂರ್ತ ಸ್ವರೂಪವನ್ನು ಕೊಡಲು ಒಂದು ಗೊತ್ತಾದ ಸಂಗತಿಯು ಮ್ಯಾಝಿನಿಯು ಹದಿನಾರುವರ್ಷ ವಯಸ್ಕನಾಗಿದ್ದಾಗ ನಡೆಯಿತೆಂದು ಹೇಳಲ್ಪಟ್ಟಿದೆ. ಒಂದಾನೊಂದುದಿನ, ಅವನೂ ಅವನ ತಾಯಿಯೂ, ಒಬ್ಬ ಬಂಧುವೂ ಊರೊಳಗೆ ಕಾರ್ಯಾಂತರವಾಗಿ ಹೋಗಿದ್ದಾಗ್ಗೆ, ಭವ್ಯಾಕೃತಿಯ ತೇಜಃಪುಂಜವಾದ ಮುಖವರ್ಚಸ್ಸುಳ್ಳ ಒಬ್ಬ ಮನುಷ್ಯನು ಇವರಿದ್ದ ಬಳಿಗೆ ಬಂದು ಕೈಯಲಿನ ವಸ್ತ್ರವನ್ನು ಮುಂದಕ್ಕೆ ಚಾಚಿ,—'ಇಟಲೀ ದೇಶದ ನಿರ್ಗತಿಕರಿಗಾಗಿ-ನಿರಾಶ್ರಿತರಿಗಾಗಿ ಸಹಾಯಮಾಡಿರಿ' ಎಂದು ಪ್ರಾರ್ಥಿಸಿದನು. ಅವನ ತಾಯಿಯು ಸ್ವಲ್ಪ ದ್ರವ್ಯಸಹಾಯಮಾಡಿದೊಡನೆಯೇ ಆ ಮನುಷ್ಯನು ಹೊರಟುಹೋದನು. ಹೋಗುವಾಗ ಸುಮ್ಮನೆ ಹೋಗಲಿಲ್ಲ. ಅಲ್ಲೇ ನಿಂತಿದ್ದ ಮ್ಯಾಝಿನಿಯ ಮನಸ್ಸಿನಮೇಲೆ ಆ ದೇಶೀಯರ ಬಡತನ, ನಿರ್ಗತಿಕಸ್ಥಿತಿ, ಸ್ವಾತಂತ್ರ್ಯವಿಹೀನತೆ, ಪರಕೀಯರ ಆಧಿಪತ್ಯದಿಂದ ಪ್ರಾಪ್ತವಾಗಿದ್ದ ಸಾವಿರಾರು ಕಷ್ಟಗಳು ಮುಂತಾದ ಎಲ್ಲಾ ದುರ್ಗತಿ ದುಸ್ಥಿತಿಗಳ ಸ್ಪಷ್ಟ ಚಿಹ್ನೆಯನ್ನೂ ಮೂಡಿಸಿ ಹೋದನು. ಆತನು ಹೊರಟುಹೋದ ತರುವಾಯ, ಆತನಾರೆಂಬುದು ಮ್ಯಾಝಿನಿಗೆ ತಿಳಿಯಿತು. ಭಿಕ್ಷುಕನಾಗಿ ಬಂದಿದ್ದ ಆ ಮನುಷ್ಯನು, ಆಗ್ಗೆ ಕೆಲವು ದಿನಗಳ ಮುಂಚಿತವಾಗಿ, ಆಗಸರಾದ ಆಸ್ಟ್ರಿಯನ್ನರ ವಿರೋಧವಾಗಿ ಬಂಡಾಯನ್ನೆಬ್ಬಿಸಿ ಹೋರಾಡಿ ಅಪಜಯಗೊಂಡಿದ್ದ ಒಂದು ಕ್ರಾಂತಿಕಾರರ ಗುಂಪಿಗೆ ಸೇರಿದವನಾಗಿದ್ದನು. ಈ ದೃಶ್ಯವನ್ನು ಕಂಡೊಡನೆಯೇ ಮ್ಯಾಝಿನಿಯು ತನ್ನ ದೇಶೀಯರಿಗೆ ಪ್ರಾಪ್ತವಾಗಿದ್ದ ಪಾರತಂತ್ರ್ಯ ರೂಪವಾದ ದುಸ್ಥಿತಿಯೂ ಅಪಮಾನವೂ ಎಷ್ಟುಮಟ್ಟಿನದೆಂಬುದರ ನಿಶ್ಚಯ ಸ್ಥಿತಿಯನ್ನು ಕಂಡವನಾಗಿ ಬಹು ವಿಚಾರಗ್ರಸ್ತನಾದನು. ಮುಂದೆ ಗ್ರಂಥವ್ಯಾಸಂಗ ಮಾಡುತ್ತಿರಲಿ, ಮಿತ್ರರೊಂದಿಗೆ ಮಾತುಕಥೆಗಳನ್ನಾಡುತ್ತಿರಲಿ ಈ ವಿಚಾರವು ಅವನ ಮನಸ್ಸನ್ನು ಬಿಟ್ಟು ತೊಲಗದು. ಸದಾ ಚಿಂತಾಕ್ರಾಂತನಾಗಿದ್ದಂತೆ ತೋರ್ಪಡುವನು. ತನ್ನ ದೇಶಮಾತೆಯ ಕೀರ್ತಿಗೆ ಕಳಂಕವನ್ನುಂಟುಮಾಡುತ್ತಿರುವ ಈ ಪಾರತಂತ್ರ್ಯವನ್ನು ಕಿತ್ತೊಗೆಯುವವರೆಗೂ ತಾನು ಸೂತಕದಲ್ಲಿರುವೆನೆಂಬ ಭಾವವು ಮನಸ್ಸಿಗೆ ಹೊಳೆ

ಯಿತು. ಆ ಭಾವವನ್ನು ಪ್ರತ್ಯಕ್ಷವಾಗಿ ವ್ಯಕ್ತಗೊಳಿಸಲು, ತನ್ನ ದೇಶವು ಸ್ವತಂತ್ರವಾಗುವವರೆಗೆ ಸೂತಕದ ಚಿನ್ಹೆಯನ್ನು ಧರಿಸುವೆನೆಂದು ಆ ದೇಶ ಪದ್ಧತಿಯಂತೆ ಕಪ್ಪುವಸ್ತ್ರಗಳನ್ನು ಧರಿಸತೊಡಗಿದನು. ಆವನ ಮರಣಪರ್ಯಂತವಾಗಿ ದುರ್ದೈವಿಯಾದ ಆ ದೇಶವು ಪಾರತಂತ್ರ್ಯದಿಂದ ನಿವಾರಣೆ ಹೊಂದಲಿಲ್ಲವಾಗಿ ಆ ದೇಶಾಭಿಮಾನಿಯು ಸೂತಕ ವಸ್ತ್ರಗಳನ್ನುಟ್ಟೇ ದೇಹ ತ್ಯಾಗಮಾಡಬೇಕಾಯಿತು.

ನ್ಯಾಯಶಾಸ್ತ್ರ ವ್ಯಾಸಂಗಮಾಡಿ ತೇರ್ಗಡೆಹೊಂದಿದ ತರುವಾಯ ಮ್ಯಾಝಿನಿಯು ಕೆಲಕಾಲ ನ್ಯಾಯವಾದಿ ಉದ್ಯೋಗವನ್ನು ಕೈಕೊಂಡು ಕೆಲಸ ಮಾಡಿದನು. ಆದರೆ ಆತನ ಮನಸ್ಸು ದೇಶದಲ್ಲಿ ದಿನದಿನಕ್ಕೆ ಅವ್ಯವಸ್ಥ ಸ್ಥಿತಿಗೆ ಬರುತ್ತಿದ್ದ ರಾಜಕಾರಣವನ್ನು ಕುರಿತುದಾಗಿತ್ತಲ್ಲದೆ, ಉದ್ಯೋಗವನ್ನೇ ಮೆಚ್ಚಿಕೊಂಡದ್ದಾಗಿರಲಿಲ್ಲ. ಆದುದರಿಂದ ಏಕಾಂಗಿಯಾಗಿ ಕೆಲಸ ಮಾಡುವುದಕ್ಕಿಂತಲೂ ಒಂದು ಸಂಘಮೂಲಕ ಕೆಲಸಮಾಡುವುದು ಉತ್ತಮವೆಂದು ಭಾವಿಸಿ ೧೮೨೭ನೆಯ ಸಂ||ದಲ್ಲಿ 'ಕಾರ್ಬೊನಾರೀ' ಎಂಬೊಂದು ರಾಜಕೀಯ ಗುಪ್ತ ಸಂಘವನ್ನು ಸೇರಿದನು. ಆ ಸಂಘದ ಮೂಲೋದ್ದೇಶವೇ ರಾಜಕೀಯ ಕ್ರಾಂತಿಯನ್ನುಂಟುಮಾಡುವುದಾಗಿತ್ತು. ಆದರೆ, ಅದರಲ್ಲಿ ಯಾವವಿಧ ಗೊತ್ತಾದ ವ್ಯವಸ್ಥೆಯೂ ಸಂಘಟನೆಯೂ ಇಲ್ಲದಿದ್ದುದರಿಂದ ಅದರಿಂದ ಯಾವ ಗೊತ್ತಾದ ಪ್ರಯೋಜನವನ್ನೂ ಅಪೇಕ್ಷಿಸುವಂತಿರಲಿಲ್ಲ. ಆದು ಗುಪ್ತಸಂಘವೆಂದು ಹೇಳಿತಲ್ಲವೆ. ಆದರೆ ಅವರ ಗೋಪ್ಯವೆಂಬುದು ಅರ್ಥವಿಲ್ಲದ್ದಾಗಿತ್ತು. ಸಂಘಕ್ಕೆ ಹೊಸದಾಗಿ ಸೇರಿದವರಿಗೆ ಸಂಘದ ಮುಖ್ಯ ಕಾರ್ಯಚಾಲಕರ ಹೆಸರು ದೆಸೆಗಳು ಸಹ ತಿಳಿಯಲು ಅವಕಾಶವಿರಲಿಲ್ಲ. ಈ ಮರೆಮೋಸದ ಕಪಟ ವರ್ತನವು ಮ್ಯಾಝಿನಿಗೆ ಯುಕ್ತವೆಂದು ತೋರಲಿಲ್ಲ. ಆದರೆ ಆ ಕಾಲದಲ್ಲಿ ಬೇರೊಂದು ರಾಜಕೀಯ ಸಂಘವೇ ಇಟಲಿಯಲ್ಲಿ ಇಲ್ಲದಿದ್ದುದರಿಂದ ಅದರಲ್ಲೇ ಕೆಲವು ದಿನಗಳಿದ್ದನು. ೧೮೩೦ನೆಯ ಸಂ||ದಲ್ಲಿ ಫ್ರಾನ್ಸ್‌ನಲ್ಲಿ ಒಂದು ರಾಜ್ಯಕ್ರಾಂತಿಯುಂಟಾಯಿತು. ಆ ಸಂದರ್ಭವನ್ನು ಸಾಧಿಸಿ, ಇಟಲಿಯಲ್ಲೂ ಒಂದು ಕ್ರಾಂತಿಯನ್ನೆಬ್ಬಿಸಲು ಮ್ಯಾಝಿನಿಯು ಪ್ರಯತ್ನಮಾಡಿದನು. ಮ್ಯಾಝಿನಿಯ ಈ ಕ್ರಾಂತಿಕರ ಚಟುವಟಿಕೆಯು ಸರ್ಕಾರಕ್ಕೆ ಅಸಹನೀಯವಾಗಿ,

ಆತನು ಬಂಧಿಸಲ್ಪಟ್ಟನು. ಕ್ರಾಂತಿಕಾರ ಸಂಘವೆಂದು ಹೆಸರಾದ ಕಾರ್ಬೊನಾರೀ ಸಂಘಕ್ಕೆ ಒಬ್ಬ ಸದಸ್ಯನನ್ನು ಸೇರಿಸಲು ಪ್ರಯತ್ನಿಸಿದನೆಂಬುದೇ ಅವನ ಮೇಲಿನ ಆರೋಪ. ವಿಚಾರಣೆಯಾಗಿ ಅವನು ನಿರ್ದೋಷಿಯೆಂದು ಏರ್ಪಟ್ಟ ತರುವಾಯ ಅವನನ್ನು ಬಿಡುಗಡೆ ಮಾಡಿದರಾದರೂ ಆ ಮಧ್ಯೆ ಕೆಲ ಕಾಲ ಆತನು ಸಾವೋನಾ ಎಂಬೊಂದು ಕೋಟೆಯಲ್ಲಿ ಸೆರೆಯಲ್ಲಿಡಲ್ಪಟ್ಟಿದ್ದನು. ಬಿಡುಗಡೆಯಾದ ತರುವಾಯವಾದರೂ ಮ್ಯಾಝಿನಿಯನ್ನು ಎಂದಿನಂತೆ ಸ್ವತಂತ್ರವಾಗಿರಲು ಬಿಡಲಿಲ್ಲ. ಅವನು ಇಟಲಿಯಲ್ಲಿರುವುದಾದರೆ ಗೊತ್ತಾಗಿ ಒಂದೇ ಊರಲ್ಲಿ ವಾಸಮಾಡಿಕೊಂಡಿರಬೇಕು; ಹಾಗಿಲ್ಲದಿದ್ದರೆ ದೇಶಭ್ರಷ್ಟನಾಗಬೇಕು, ಎಂದು ರಾಜಾಜ್ಞೆಯಾಯಿತು. ಸಾವೋನಾ ಸೆರೆಮನೆಯಲ್ಲಿದ್ದಾಗಲೇ ಮುಂದಿನ ತನ್ನ ಕಾರ್ಯಕ್ರಮವನ್ನು ಕುರಿತು ವಿಸ್ತಾರವಾಗಿ ಯೋಚಿಸಿದ್ದುದರಿಂದ, ಮ್ಯಾಝಿನಿಯು, ದೇಶಾಂತರಗತನಾಗಿರುವುದೇ ತನ್ನ ಕಾರ್ಯಕ್ಕೆ ಹೆಚ್ಚು ಸಹಾಯಕಾರಿಯಾಗಿರುವುದೆಂದು ನಿಶ್ಚಯಿಸಿ, ತನ್ನ ಮನೆಯವರನ್ನೆಲ್ಲಾ ನೋಡಿಕೊಂಡು ೧೮೩೧ ನೆಯ ಸಂವತ್ಸರದಲ್ಲಿ ಫ್ರಾನ್ಸ್‌ದೇಶಕ್ಕೆ ಹೋಗಿ ಅಲ್ಲಿದ್ದ ದೇಶಭ್ರಷ್ಟರಾದ ತನ್ನ ಇತರ ಜೊತೆಗಾರರನ್ನು ಸೇರಿಕೊಂಡನು.



## ಅಧ್ಯಾಯ ೪ "ಜನಾಂಗ ವಿದ್ಯಾಭ್ಯಾಸ"

ಇಟಲಿದೇಶಕ್ಕೆ ಸ್ವಾತಂತ್ರ್ಯಸಂಪಾದನೆ ಮಾಡಬೇಕೆಂಬ ಭಾವನೆಯು ಮ್ಯಾಝಿನಿಯಿಂದ ಜಗಜ್ಜನಿತವಾಯಿತಾದರೂ ಅದಕ್ಕೆ ಆತನೇ ಜನಕನಲ್ಲ. ಆತನ ಜನನಕ್ಕೆ ಬಹುಕಾಲ ಹಿಂದೆಯೇ, ಡ್ಯಾಂಟೇ, ರೀಜಿ ಎಂಬಿಬ್ಬರು ದೇಶಾಭಿಮಾನಿ ಕವಿಗಳು ತಮ್ಮ ಕವಿತೆಯಿಂದ ಸ್ವಾತಂತ್ರ್ಯತೆಯ ಬೀಜಗಳನ್ನು ಬಿತ್ತಿದ್ದರು. ಅವನ ಜನನವಾಗುವುದಕ್ಕೆ ಕೇವಲ ಸ್ವಲ್ಪ ಕಾಲಕ್ಕೆ ಮುಂದೆ, ನೆಪೋಲಿಯನನು ತನ್ನ ಅವಿಶ್ರಾಂತ ಪರಿಶ್ರಮದಿಂದ, ಫ್ರಾನ್ಸ್‌ದೇಶದಲ್ಲಿ ಕ್ರಾಂತಿಯನ್ನೆಬ್ಬಿಸಿ ಬಾದಶಾಹೀ ದೌಲತ್ತನ್ನು ಮುರಿದೊತ್ತಲು

ಪ್ರಯತ್ನಿಸಿದ್ದನು. ವಾತಾವರಣವು ಈ ಬಗೆಯ ಸ್ವಾತಂತ್ರ್ಯಭಾವನೆಗಳಿಂದ ಪರಿಪೂರ್ಣವಾಗಿದ್ದ ಸಂದರ್ಭದಲ್ಲೇ ಮ್ಯಾಝಿನಿಯ ಜನನವಾದುದು. ಮ್ಯಾಝಿನಿಯಾದರೂ ತನ್ನ ಕಾರ್ಯವನ್ನು ಪ್ರಾರಂಭಕ್ಕೆ ಲೇಖನಗಳ ಮೂಲಕವಾಗಿಯೇ ಆರಂಭಿಸಿದನು. ಅವರು ಆಗಿನ ಸಂದರ್ಭದಲ್ಲಿ ಕೆಲಸಮಾಡುವ ಬೇರೆ ಮಾರ್ಗವೇ ಇರಲಿಲ್ಲ. ಅವರು ವಾಙ್ಮಯವನ್ನು ಸಾಧನವಾಗಿ ಕೈಕೊಂಡು ತಮ್ಮ ರಾಜಕೀಯ ಚಳುವಳಿಯನ್ನು ಪ್ರಾರಂಭಿಸಿದರಾದರೂ, ಅವರ ಧ್ಯೇಯವು ಕ್ರಾಂತಿಯ ಮೂಲಕ ರಾಜಕೀಯ ಸ್ವಾತಂತ್ರ್ಯ ಸಾಧನೆಯಾಗಿದ್ದಿತಲ್ಲದೆ, ವಾಙ್ಮಯ ಸೇವೆಯಾಗಿರಲಿಲ್ಲ. ಜನಮನವನ್ನು ಸ್ವಾತಂತ್ರ್ಯಭಾವನೆಗಳಿಂದ ತುಂಬುವುದೇ ಅವರ ಮುಖ್ಯೋದ್ದೇಶವಾಗಿತ್ತು. ಅದಕ್ಕಾಗಿ ಹಸ್ತಪತ್ರಗಳು, ಚಿಕ್ಕ ಚಿಕ್ಕ ಪುಸ್ತಕಗಳು, ಕಥೆ ಕವಿತೆಗಳು, ಗೀತಗಳು ಮುಂತಾದುವುಗಳ ಮೂಲಕ ಜನಮನವನ್ನು ತಿದ್ದಲಾರಂಭಿಸಿದರು. ಡ್ಯಾಂಟೇಕವಿಯ ಗ್ರಂಥವನ್ನು ಹನ್ನೆರಡು ರೂಪಗಳಲ್ಲಿ ಮುದ್ರಿಸಿ ಪ್ರಕಟಿಸಿದರು. ೧೮೩೨ರಲ್ಲಿ ಇಟಲಿಗೆ ಸ್ವಕೀಯವ್ಯಕ್ತಿಜ್ಞಾನವನ್ನುಂಟುಮಾಡಿಕೊಡುವ ಉದ್ದೇಶದಿಂದ ಈ ಪ್ರಯತ್ನವು ನಡೆಯುತ್ತಾಗಿತು. ಮ್ಯಾಝಿನಿಯು ಮುಂದೆ ಏಳುವರ್ಷಗಳು ಕಳೆದ ನಂತರ ತನ್ನ ಸುಪ್ರಸಿದ್ಧ ಕಾದಂಬರಿಯನ್ನೊಂದನ್ನು ಪ್ರಸಿದ್ಧಪಡಿಸಿದನು. ಅದರಲ್ಲಿ ಉಜ್ವಲದೇಶಾಭಿಮಾನವೂ, ಕರ್ತವ್ಯತತ್ಪರತೆಯೂ, ಧಾರ್ಮಿಕಾಚರಣೆಯ ಮುಖ್ಯಾವಶ್ಯಕತೆಯೂ, ಬಹು ಸ್ಪಷ್ಟರೀತಿಯಿಂದ ವ್ಯಕ್ತಗೊಳಿಸಲ್ಪಟ್ಟಿದ್ದುವು.

ದುರ್ದೈವಿ ಇಟಲಿದೇಶದ ವಿಷಯದಲ್ಲಿ ಮ್ಯಾಝಿನಿಯು ಇಷ್ಟುಮಟ್ಟಿನ ಹೃದಯವೇದನೆಯನ್ನು ಅನುಭವಿಸುತ್ತಿದ್ದುದೇಕೆ? ಅಲ್ಲಿ ಏನಂತಹ ಪ್ರಳಯಸಂಭವಿಸಿದ್ದುದು ಎಂದು ಪ್ರಶ್ನೆಯುಂಟಾಗಬಹುದು. ಆದುದರಿಂದ ಅದರ ಆಗಿನ ಸ್ಥಿತಿಯನ್ನು ತಿಳಿಯುವುದು ಹೆಚ್ಚು ಪ್ರಯೋಜಕವೆನ್ನಿಸದಿರದು. ಇಟಲಿದೇಶವು ಆ ಕಾಲದಲ್ಲಿ ಅನೇಕ ಭಾಗಗಳಾಗಿ ವಿಭಾಗವಾಗಿದ್ದು ಒಂದೊಂದೂ ಒಬ್ಬೊಬ್ಬ ರಾಜನ ಸ್ವಾಧೀನವಲ್ಲದ್ದು ಅವನ ಮನಬಂದಂತೆ ಆಳಲ್ಪಡುತ್ತಿದ್ದಿತು. ಲೊಂಬಾರ್ಡಿ, ವೆನಿಷಿಯಾ ಎಂಬೆರಡು ಪ್ರಾಂತಗಳನ್ನು ಆಸ್ಟ್ರಿಯಾದವರು ವಶಪಡಿಸಿಕೊಂಡು ಆಳುತ್ತಿ

ದ್ದರು. ಪಿಡ್‌ಮೂಂಟಿನ ರಾಜನು ಇಟಲಿಯ ವಾಯುವ್ಯಪ್ರಾಂತವನ್ನೂ, ಸಾರ್ಡಿನಿಯಾ ಮತ್ತು ಸಾವೋಲ್ ಪ್ರಾಂತಗಳನ್ನೂ ಆಳುತ್ತಿದ್ದನು. ದಕ್ಷಿಣದ ಇಟಲಿಯು ನೇಪಲ್ಸಿನ ರಾಜನ ಸ್ವಾಧೀನದಲ್ಲಿತ್ತು. ಮಧ್ಯ ಇಟಲಿಯು ಪೋಪನ ಸರ್ವಾಧಿಕಾರಕ್ಕೆ ಒಳಪಟ್ಟಿತ್ತು. ಅಲ್ಲದೆ ಡ್ಯೂಕರೆಂಬ ಪಾಳಯಗಾರರಂತಹ ಅಧಿಕಾರಿಗಳು ಟಸ್ಕನಿ ಮೋಡೆನಾ ಮೊದಲಾದ ಪ್ರಾಂತಗಳನ್ನು ರೂಢಿಸಿಕೊಂಡಿದ್ದರು. ಈ ಹಲವು ಪ್ರಭುತ್ವಗಳಿಂದ ವ್ಯಾಪಾರಕ್ಕೆ ಬಹು ವಿಘ್ನವುಂಟಾಗಿತ್ತು. ಒಂದು ಸ್ಥಳದಲ್ಲಾದ ಪದಾರ್ಥಗಳು ಮತ್ತೊಂದು ಸ್ಥಳಕ್ಕೆ ಹೋಗುವಂತಿಲ್ಲ. ಒಂದು ಪ್ರಾಂತದಲ್ಲಿ ರಚಿತವಾದ ಗ್ರಂಥಗಳು ಮತ್ತೊಂದು ಪ್ರಾಂತದವರಿಗೆ ದೊರೆಯವು. ಚಿಕ್ಕಪುಟ್ಟರಾಜರೆಲ್ಲರೂ ಆಸ್ಟ್ರಿಯಾದ ಬೆಂಬಲದಿಂದ ನಿರಂಕುಶರಾಗಿದ್ದರು ಕಂದಾಯಕಾಣಿಗೆಗಳನ್ನು ದೇಶದಲ್ಲಿ ಆಚರಣೆಗೆ ತರಲು ರಾಜರ ಇಚ್ಛೆಯೊಂದು ಬಂದರೆ ಆಯಿತಲ್ಲದೆ ಮತ್ತಾರ ಅಭಿಪ್ರಾಯವನ್ನೂ ಕೇಳತಕ್ಕುದಿರಲಿಲ್ಲ. ಪ್ರಜೆಗಳಿಗೆ ಯಾವ ಬಗೆಯಿಂದಲೂ ಸ್ವಾತಂತ್ರ್ಯವಿರಲಿಲ್ಲ. ವಿದ್ಯಾಭ್ಯಾಸ ಪದ್ಧತಿಯು ಅಸಹ್ಯರೀತಿಯಿಂದ ನಡೆಯುತ್ತಿತ್ತು. ಮತಾಧಿಕಾರಿಗಳೂ, ಧರ್ಮಕರ್ತರೂ ಸಹ, ರಾಜರಂತೆಯೇ ನಿರಂಕುಶರಾಗಿ ಜನಗಳನ್ನು ಪೀಡಿಸುತ್ತಿದ್ದರು. ನ್ಯಾಯಾಸ್ಥಾನಗಳು ಕುಲಗೆಟ್ಟು - ವಿಶೇಷ ಪಕ್ಷಪಾತದಿಂದ ನಡೆಯುತ್ತಿದ್ದವು. ಪೋಲೀಸಿನವರ ಅಧಿಕಾರಕ್ಕೆ ತಡೆಯೇ ಇರಲಿಲ್ಲ. ಪ್ರಜೆಗಳು ಮನೆಯಲ್ಲಾಗಲೀ ಮಠದಲ್ಲಾಗಲೀ, ದೇವಾಲಯದಲ್ಲಾಗಲೀ, ಅಂಗಡಿ ಮುಂಗಟ್ಟುಗಳಲ್ಲಾಗಲೀ, ಪಾಠಶಾಲೆಯಲ್ಲಾಗಲೀ ಏನೊಂದು ಸಂಗತಿಯನ್ನೂ ಮನಬಿಚ್ಚಿ ಆಡಿಕೊಳ್ಳುವಂತಿರಲಿಲ್ಲ. ಎಲ್ಲೆಲ್ಲೂ ಗುಪ್ತ ಪೋಲೀಸರು ಹೊಂಚಿ ಕಾದಿದ್ದು ಜನರು ಸರ್ಕಾರದ ವಿಷಯದಲ್ಲಿ ವಿರುದ್ಧವಾಗಿ ಏನಭಿಪ್ರಾಯವನ್ನುಂಟಾಗಿರುವರು ಎಂದು ಗಮನಿಸುತ್ತಿದ್ದರು. ನೆರೆಯ ಸೀಮೆಯಲ್ಲಾದ ಕ್ರಾಂತಿಯು ಸರ್ಕಾರದವರಿಗೆ ಪ್ರಜಾಸಂಬಂಧವಾದ ವಿಶೇಷ ಭಯವನ್ನು ಹುಟ್ಟಿಸಿ - ಯಾವ ಹೊತ್ತಿಗೆ ಜನರು ದಂಗೆಯೆದ್ದು ಏನುಮಾಡಿಬಿಡುವರೋ ಎಂಬ ಅಂಜಿಕೆಯನ್ನುಂಟುಮಾಡಿಬಿಟ್ಟಿದ್ದಿತು. ಆದುದರಿಂದ ಸರ್ಕಾರದವರೂ ಪ್ರಜೆಗಳಿಗೆ ಸಾಧ್ಯವಿದ್ದಂತೆಲ್ಲ ಶಿಕ್ಷೆಗಳನ್ನು ವಿಧಿಸಿ, ಸರ್ವವಿಧದಿಂದಲೂ ಅವರನ್ನು ಅಂಕೆಯಲ್ಲಿಟ್ಟುಕೊಂಡಿರಲು ಹವಣಿಸಿದ್ದರು.

ಸೆರೆಮನೆಯಿಂದ ಹೊರಬಿದ್ದ ಮ್ಯಾಝಿನಿಯು ಆಲ್ಪ್ಸ್ ಪರ್ವತವನ್ನು ದಾಟಿ ಫ್ರಾನ್ಸ್‌ದೇಶವನ್ನು ಕುರಿತು ಪ್ರಯಾಣಮಾಡಿ ಲಯನ್ಸ್ ಮತ್ತು ಮಾರ್ಸೇಲ್ಸ್ ಎಂಬ ಊರುಗಳಲ್ಲಿ ವಾಸಿಸತೊಡಗಿದನು. ಅವನಂತೆಯೇ ದೇಶಬಾಹಿರರಾಗಿದ್ದ ಹಲವುಮಂದಿ ಸ್ನೇಹಿತರು ಬಂದು ಅವನೊಂದಿಗೆ ಸೇರಿದರು. ಸೆರೆಯಲ್ಲಿದ್ದಾಗ ಯೋಚಿಸಿ ನಿರ್ಧರಿಸಿದ್ದ ಹಲವು ಕಾರ್ಯಕ್ರಮಗಳನ್ನು ಪ್ರಯೋಗಕ್ಕೆ ತರಲು ನಿರ್ಧರಿಸಿ ಆ ದೇಶಬಾಂಧವನು '**ತರುಣ** ಇಟಲಿ (Young Italy)' ಎಂಬೊಂದು ವಾರ್ತಾಪತ್ರಿಕೆಯನ್ನು ಪ್ರಕಟಿಸಲಾರಂಭಿಸಿದನು. ಈವರೆಗೆ ಚಳುವಳಿ ನಡೆಯಿಸಿದವರ ಮುಖ್ಯ ಉದ್ದೇಶವು ಕೇವಲ ತಮ್ಮ ಹಕ್ಕುಗಳನ್ನು ಸಂಪಾದಿಸಿಕೊಳ್ಳಬೇಕು, ಧನಧಾನ್ಯ ಸಂಬಂಧವಾದ ಭೌತಿಕ ಸುಖಸಾಧನಗಳನ್ನು ಹೆಚ್ಚಿಸಿಕೊಳ್ಳಬೇಕು ಎಂದು ಮಾತ್ರವಾಗಿತ್ತು. ಆದರೆ ಮ್ಯಾಝಿನಿಯು ಆ ಕಾರ್ಯಗಳನ್ನು ಆಳುವವರ ಮೇಲೆ ದ್ವೇಷಭಾವವನ್ನು ಸಾಧಿಸಿ ಗಳಿಸಲೆತ್ನಿಸುವುದಕ್ಕಿಂತಲೂ, ಆ ಬಗೆಯ ದೇಶಸೇವಾಕಾರ್ಯವು, ಪ್ರತಿಯೊಬ್ಬ ದೇಶಪುತ್ರನ ಕರ್ತವ್ಯವೆಂದೂ, ವ್ಯಕ್ತಿಧರ್ಮವೆಂದೂ ತಿಳಿದು ಈಶಸಂಕಲ್ಪವೆಂಬ ಭಾವನೆಯಿಂದ ನಡೆಯಿಸಬೇಕೆಂದು ಬೋಧಿಸಿದನು.-'ಇಟಲಿಯು ಪೂರ್ಣ ಸ್ವಾತಂತ್ರ್ಯವನ್ನು ಗಳಿಸಲೇಬೇಕು. ಪೂರ್ಣಸ್ವಾತಂತ್ರ್ಯವು ಒಂದು ದೇಶದ ಜನ್ಮಸಿದ್ಧ ಬಾಧ್ಯತೆಯಾಗಿದೆ. ಅದನ್ನು ಗಳಿಸಲು ಇಟಲಿಯು ಆಸ್ಟ್ರಿಯನ್ನರನ್ನು ದೇಶದಿಂದ ಹೊರಗೆಹಾಕಿ, ಐಕಮತ್ಯವನ್ನು ಸಾಧಿಸಿಕೊಳ್ಳಬೇಕು. ಅದಕ್ಕಾಗಿ ಪರಕೀಯರ ಸಹಾಯವನ್ನು ಕಾದಿರುವುದು ವ್ಯರ್ಥ. ಯಾವ ಜನಾಂಗವು, ತಾನೇ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲಾರದೋ ಅದು ಪ್ರಾಪ್ತವಾದ ಸ್ವಾತಂತ್ರ್ಯವನ್ನು ರಕ್ಷಿಸಿಕೊಳ್ಳಲೂ ಆರದು. ಇಟಲಿಯ ಪ್ರತಿವ್ಯಕ್ತಿಯೂ ದೇಶಸ್ವಾತಂತ್ರ್ಯಸಾಧನೆಯೆಂಬ ಈ ಪವಿತ್ರಕಾರ್ಯಕ್ಕಾಗಿ ತನುಮನಧನಗಳನ್ನು ತೆತ್ತು ದುಡಿಯಬೇಕು. ಈ ಕಾರ್ಯಸಾಧನೆಯಲ್ಲಿ ಅನೇಕರಿಗೆ ಬಂದೀವಾಸವೂ, ದೇಶಭ್ರಷ್ಟತೆಯೂ, ಪ್ರಾಣಾಪಾಯವೂ ಸಂಭವಿಸಬಹುದು ಆದರೆ ಗುಲಾಮಗಿರಿಯಲ್ಲಿ ಉಂಡು ತಿಂದು ಬದುಕಿರುವುದಕ್ಕಿಂತಲೂ, ಸ್ವಾತಂತ್ರ್ಯಸಾಧನೆಗಾಗಿ ಪ್ರಾಣಬಿಡುವುದು ಲೇಸಲ್ಲವೆ? ತರುಣ ಇಟಲಿಯು ಈಶ್ವರಸಾಕ್ಷಿಯಾಗಿ ಈ ಪವಿತ್ರಕಾರ್ಯಕ್ಕಾಗಿಯೇ ಜನ್ಮವೆತ್ತಿರುವುದು. ಯಾವ

ಪರಮೇಶ್ವರನಲ್ಲಿ ನಂಬಿಕೆಯನ್ನಿಟ್ಟು ರಾಷ್ಟ್ರದೇವತೆಯ ಮತ್ತು ತಮ್ಮ ಮ್ಮ ನೋದೇವತೆಯ ಸಾಕ್ಷ್ಯವನ್ನು ಒಪ್ಪುವರೋ ಅವರು ಮಾತ್ರವೇ 'ತರುಣ ಇಟಲಿ'ಯ ಸಭಾಸದರಾಗಲಿ. ತರುಣ ಇಟಲಿಯು - ಮಾತೃಭೂಮಿಯ ದಾಸ್ಯಮುಕ್ತತೆಯ ಮೂಲಕ ಸ್ವಾತಂತ್ರ್ಯಸಾಧನೆ, ಇಟಲಿಯ ರಾಷ್ಟ್ರೈಕ್ಯತೆ ಮತ್ತು ಇಟಲಿಯಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯ ಸ್ಥಾಪನೆ ಈ ಕಾರ್ಯಗಳಿಗಾಗಿ ಶ್ರಮಿಸುವುದನ್ನೇ ತನ್ನ ಮುಖ್ಯ ಗುರಿಯನ್ನಾಗಿ ಕೈಕೊಂಡಿದೆ. 'ತರುಣ ಇಟಲಿ' ಸಂಘದ ಸದಸ್ಯರು ಈ ಕಾರ್ಯಗಳನ್ನು ತಮ್ಮ ಸತ್ಕೃತ್ಯಗಳೆಂಬಂತೆ ಅಹರ್ನಿಶಿ ಮಾಡಲು ಸಿದ್ಧರಾಗಬೇಕು. - ಅನುಕೂಲಸಮಯವೊದಗಲೆಂದು ಕಾದಿರುವುದು ಹೇಡಿತನ. ಕಾರ್ಯಶೂರನು ಪ್ರತಿಕೂಲ ಸಂದರ್ಭದಲ್ಲೇ ತನ್ನ ಕಾರ್ಯಕ್ಕೆ ಅನುಕೂಲತೆಯನ್ನು ಕಲ್ಪಿಸಿಕೊಂಡು ಜಯಸಂಪಾದನೆ ಮಾಡುವನು. ಈಗ ನಾವು ಯುದ್ಧಮಾಡಬೇಕಾದುದು ನಮ್ಮನ್ನು ದಾಸ್ಯದಲ್ಲಿಟ್ಟು ನರಳಿಸುತ್ತಿರುವ ಆಸ್ಟ್ರಿಯನ್ನರ ಮೇಲೆ ಮಾತ್ರವಲ್ಲ - ನಮ್ಮ ದೇಶೀಯರಲ್ಲೇ ನೆಲೆಗೊಂಡಿರುವ ಅಜ್ಞಾನ, ಅನೈಕ್ಯತೆ, ಹಲವು ದುರಭ್ಯಾಸಗಳು ಮುಂತಾದುವುಗಳೊಂದಿಗೂ ಭಯಂಕರ ಯುದ್ಧವನ್ನು ನಡೆಯಿಸಬೇಕಾಗಿದೆ. ದುಷ್ಟ ಅಭ್ಯಾಸಗಳೂ, ಅರ್ಥವಿಲ್ಲದ ಮೋಹಗಳೂ ನಾಶವಾಗಬೇಕು. ಯೋಗ್ಯತ್ಯಾಗವಿಲ್ಲದೆ, ಯಾವ ಮಹತ್ಕಾರ್ಯವೂ ಎಂದೂ ಸಾಧನೆಯಾದುದಿಲ್ಲ. ನನ್ನ ದೇಶಬಾಂಧವರೇ ದೇವರ ಹೆಸರಿನಲ್ಲೂ ನಿಮ್ಮ ದೇಶಮಾತೆಯ ಹೆಸರಿನಲ್ಲೂ, ಬಡತನ, ಬಂದೀವಾಸ, ವಿವಿಧ ಕಷ್ಟನಷ್ಟಗಳು, ಪ್ರಾಣಾಪಾಯ ಮುಂತಾದುವುಗಳ ಮೂಲಕ ಪ್ರಯಾಣಮಾಡಿ ಈ ಮಹತ್ಕಾರ್ಯವನ್ನು ಸಾಧಿಸುವುದಕ್ಕಾಗಿ ಮುಂದರಿಯಿರೆಂದು ನಿಮ್ಮನ್ನು ಆಹ್ವಾನಿಸುತ್ತೇನೆ' ಎಂದು ಮ್ಯಾಝಿನಿಯು, 'ತರುಣ ಇಟಲಿ' ಪತ್ರಿಕೆಯ ಮೂಲಕ ತನ್ನ ದೇಶೀಯರಿಗೆ ಬೋಧಿಸಿದನು.

ಮ್ಯಾಝಿನಿಯು ತರುಣ ಇಟಲಿ ಪತ್ರಿಕೆಯನ್ನು ಪ್ರಾರಂಭಿಸಿದುದು ಮಾರ್ಸೇಲ್ಸ್ ಪಟ್ಟಣದಲ್ಲಿ. ಆಗ ಆತನೊಂದಿಗೆ ನಾಲ್ಕುಮಂದಿ ಸ್ನೇಹಿತರು ಇದ್ದು ಕೆಲಸಮಾಡುತ್ತಿದ್ದರು. ಆ ಸಂಬಂಧ ಕಾರ್ಯವೆಲ್ಲವೂ ಬಹು ಗುಪ್ತವಾಗಿಯೇ ನಡೆಯಬೇಕಾಗಿತ್ತು. ಮ್ಯಾಝಿನಿಯ ನೇತೃತ್ವದಲ್ಲಿ ಮಿಕ್ಕ ನಾಲ್ವರೂ ತರುಣ ಇಟಲಿಗಾಗಿ ಪ್ರವಾಸಿಗಳಿಂದ ಸಮಾಚಾರ ಸಂಗ್ರ

ಹಣಮಾಡುವಿಕೆ, ಪತ್ರಿಕೆಯ ಮುದ್ರಣ, ಧನ ಸಂಗ್ರಹಣ, ಅದರ ಪ್ರಚಾರ ಮುಂತಾದ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರು. ಮ್ಯಾಝಿನಿಯು ಸೂತ್ರಧಾರಕನಾಗಿದ್ದು, ಅವರ ಮೂಲಕ ಅವಿಶ್ರಾಂತ ಶ್ರಮಪಟ್ಟು ಎರಡು ವರ್ಷ ಕಾಲದೊಳಗಾಗಿ, ಇಟಲಿಯ ಮುಖ್ಯ ಮುಖ್ಯ ಪಟ್ಟಣಗಳಲ್ಲೆಲ್ಲ ತರುಣ ಇಟಲಿಯ ಸಂಘದ ಶಾಖೆಗಳನ್ನು ಸ್ಥಾಪಿಸಿ, ಆಯಾ ಸ್ಥಳೀಕ ಸಂಸ್ಥೆಗಳ ಮೂಲಕವೇ ಅಲ್ಲಿಯ ಪ್ರಚಾರ ಕಾರ್ಯವನ್ನು ನಡೆಯಿಸುವಂತೆ ಏರ್ಪಡಿಸಿದನು.

ಲೇಖನಗಳು. ಕವಿತೆಗಳು, ಹಸ್ತ ಪುಸ್ತಕಗಳು, ಚಿತ್ರಗಳು ಮುಂತಾದ ಹಲವು ಸಾಧನಗಳ ಮೂಲಕ ರಾಷ್ಟ್ರಾಭಿಮಾನವನ್ನುಂಟುಮಾಡಲು ಪ್ರಯತ್ನಿಸಿದ ತರುಣ ಇಟಲಿ ಸಂಘದ ಈ ಸ್ವಲ್ಪ ಮಂದಿ ಪ್ರಚಾರಕರ ನಿಸ್ವಾರ್ಥ ಪ್ರಯತ್ನವು ಎರಡು ವರ್ಷಕಾಲದಲ್ಲೇ ತಕ್ಕಷ್ಟು ಫಲಪ್ರದವಾಯಿತು. ಸಾಮಾನ್ಯ ಜನರು ಮಾತ್ರವಲ್ಲ - ಸಾಹುಕಾರರೂ ವಕೀಲರೂ, ಸರ್ಕಾರದ ನೌಕರರೂ, ವಿದ್ಯಾರ್ಥಿಗಳೂ, ಕರ್ಮಕಾರರೇ ಮುಂತಾದ ಹಲವು ಬಗೆಯ ವೃತ್ತಿಗಳವರೂ ಅದಕ್ಕೆ ಸಭಾಸದರಾದರು. ಈ ವೇಳೆಯಲ್ಲೇ ಇಟಲಿಯ ಮಹಾವೀರ ಗ್ಯಾರಿಬಾಲ್ಡಿಯು ಸ್ವತಃ ಮಾರ್ಸೇಲ್ಸ್‌ನಗರಕ್ಕೆ ಪ್ರಯಾಣಮಾಡಿ, ತರುಣ ಇಟಲಿ ಸಂಘದ ಪ್ರಥಮಾಚಾರ್ಯನಾದ ಮ್ಯಾಝಿನಿಯ ಸಂದರ್ಶನವನ್ನು ಪಡೆದು ಸಂಘದ ಸದಸ್ಯನಾಗಿ ಸೇರಿ ದೇಶಸೇವೆಯ ದೀಕ್ಷೆಯನ್ನು ಪಡೆದನು. ಹೀಗೆ ದೇಶಸೇವೆಗೆ ದೀಕ್ಷೆಪಡೆವ ಪೂರ್ವದಲ್ಲಿ ಗ್ಯಾರಿಬಾಲ್ಡಿಯು ಜಿನೋವಾದ ಹಡಗಿನ ಪಡೆಯಲ್ಲಿ ಕ್ಯಾಪ್ಟನ್ನನಾಗಿದ್ದನು. ಮ್ಯಾಝಿನಿಯು ತನ್ನ ಅನುಚರರಿಗೆ ಪ್ರಚಾರಕಾರ್ಯವನ್ನು ಹೇಗೆ ಮಾಡಬೇಕೆನ್ನುವ ವಿಚಾರದಲ್ಲಿ ಹೇಳಿದ ತಿಳಿವಳಿಕೆಯು ಬೋಧಪ್ರದವಾಗಿದೆ. 'ಬೆಟ್ಟವನ್ನು ಹತ್ತಿಯಿಳಿಯಿರಿ. ರೈತನ ಹೊಲದಬಳಿಯಲ್ಲಿ ಕೂಡಿರಿ. ಕಮ್ಮಾರನ ಕುಲಿಮೆಯಬಳಿ ಸೇರಿರಿ. ಸಾಮಾನ್ಯ ಅಂಗಡಿಕಾರರನ್ನು ಅವರ ಅಂಗಡಿಗಳಲ್ಲೇ ಕಾಣಿರಿ. ಕಂಡು, ಸ್ವಾತಂತ್ರ್ಯವು ಅವರ ಜನ್ಮಸಿದ್ಧಬಾಧ್ಯತೆಯೆಂದು ತಿಳಿಯಹೇಳಿರಿ. ಅವರ ಮಾತೃಭೂಮಿಯ ಗತವೈಭವವನ್ನು ಕುರಿತು ಬೋಧಿಸಿರಿ. ಪೂರ್ವದಲ್ಲಿದ್ದ ಸಂಪತ್ತು ಸೌಭಾಗ್ಯಗಳನ್ನು ಕುರಿತು ವರ್ಣಿಸಿರಿ. ದೇಶದೇಶಾಂತರಗಳವರೆಗೆ ವ್ಯಾಪಿಸಿದ್ದ ಅವರ ದೇಶದ

ಪೂರ್ವದ ವಾಣಿಜ್ಯದ ವಿಸ್ತಾರವನ್ನು ವಿವರಿಸಿರಿ. ಒಂದಿಗೇ-ಇಂದು ಸಹ ಸ್ತ್ರೀರು ಬಗೆಯ ಕಿರುಕುಳದ ರಾಜ್ಯಭಾರಕ್ಕೆ ಸಿಕ್ಕು ನರಳುತ್ತಿರುವ ಅವರ ದುಸ್ಥಿತಿಯನ್ನು ಕುರಿತು ವರ್ಣಿಸಿರಿ. ಹೀಗೆ ಸರ್ವವಿಧದಿಂದಲೂ ದೇಶಾಭಿಮಾನವು ಬೇರೂರುವಂತೆ ಮಾಡಿರಿ? ' ಎಂದು ಆತನು ಬೋಧಿಸುತ್ತಿದ್ದನು. ತರುಣ ಇಟಲಿ ಸಂಘದವರು ಪ್ರಕಟಿಸುತ್ತಿದ್ದ ಹಸ್ತಪತ್ರಿಕೆ ಪುಸ್ತಕಾದಿಗಳನ್ನು ಸರ್ಕಾರದವರು ಸುರಕ್ಷಿತವಾಗಿ ಇಟಲಿಯೊಳಕ್ಕೆ ಬಿಡದಂತೆ ಬಹಿಷ್ಕರಿಸುತ್ತಿದ್ದರಾದುದರಿಂದ ಅವುಗಳನ್ನು ಇತರ ಪದಾರ್ಥಗಳೊಂದಿಗೆ ಪೀಪಾಯಿಗಳಲ್ಲೂ ಮೂಟೆಗಳಲ್ಲೂ ಮರೆಸಿಟ್ಟು ಸಾಗಿಸುತ್ತಿದ್ದರು. ಅವುಗಳನ್ನು ಓದಿದ ಜನರು, ಆ ಉತ್ತೇಜಕವಾಕ್ಯಗಳು, ಭಾವೋನ್ನತಿ ಮುಂತಾದುವುಗಳಿಗೆ ಮುಗ್ಧರಾಗಿ ಒಡನೆ ಆ ಬೋಧನೆಯನ್ನನುಸರಿಸಿ ತರುಣ ಇಟಲಿ ಸಂಘದ ಸದಸ್ಯತ್ವವನ್ನು ಸ್ವೀಕರಿಸುತ್ತಿದ್ದರು. ಹೀಗಾಗಿ ಆ ಎರಡುವರ್ಷಗಳ ಅತ್ಯಲ್ಪಕಾಲದಲ್ಲೇ ಸಂಘದ ಸದಸ್ಯರ ಸಂಖ್ಯೆಯು ಅರುವತ್ತು ಸಾವಿರದವರೆಗೆ ಮುಟ್ಟಿತು. ೧೮೩೩ನೆಯ ಸಂವತ್ಸರದ ವೇಳೆಗೆ ಇಟಲಿಯಲ್ಲಿದ್ದ ಆಸ್ಟ್ರಿಯನ್ ಸರಕಾರವು ತರುಣ ಇಟಲಿಯ ಮೂಲಕವಾಗಿ ತನ್ನ ಅಸ್ತಿತ್ವಕ್ಕೇ ಭಂಗಬರುವುದೆಂದು ಭಯಪಡುವಂತಹ ಪರಿಸ್ಥಿತಿಯುಂಟಾಗಿ, ತರುಣ ಇಟಲಿ ಸಂಘಕ್ಕೆ ಸದಸ್ಯನಾಗಿ ಸೇರುವಿಕೆಯು ಮರಣದಂಡನೆಗೆ ಪಾತ್ರವಾಗುವಂತಹ ಅಪರಾಧವೆಂದು ಕಾಯಿದೆಯನ್ನು ಮಾಡಿತು.

ಮ್ಯಾಝಿನಿಯು, ದೇಶೀಯರಲ್ಲಿ ಯಾರುಯಾರನ್ನು ಹೇಗೆ ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬುದನ್ನು ಚೆನ್ನಾಗಿ ಅರಿತು ಸಮಯಬಿದ್ದಂತೆಲ್ಲ ಉಪಯೋಗಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನು. ಇಟಲಿಯ ಸಂಸ್ಥಾನಗಳಲ್ಲೆಲ್ಲ ಪಿಡ್ಮಾಂಟೆಂಬುದು ಬಹು ಮುಖ್ಯವಾದುದು ಅದು ಕೆಲಕಾಲ ಫ್ರಾನ್ಸಿಗೂ ಕೆಲವು ಕಾಲ ಆಸ್ಟ್ರಿಯಾಕ್ಕೂ ಸೇರಿತ್ತು. ಈಚೆಗೆ ಅದಕ್ಕೆ ಛಾರ್ಲ್ಸ್ ಆಲ್ಬರ್ಟನೆಂಬ ಒಬ್ಬಾತನು ರಾಜನಾದನು. ರಾಜನಾಗುವ ಪೂರ್ವದಲ್ಲಿ ಆತನು ಕಾರ್ಬೊನಾರೀ ಸಂಘಕ್ಕೆ ಸದಸ್ಯನಾಗಿದ್ದುದು ಮ್ಯಾಝಿನಿಗೆ ತಿಳಿದಿತ್ತು. ಒಡನೆಯೇ ಆ ಮೂಲಕ ಏನಾದರೂ ಕೆಲಸ ನಡೆಯಲು ಸಾಧ್ಯವೋ ನೋಡೋಣವೆಂದು ಆತನಿಗೊಂದು ಮನವಿಯನ್ನು ಕಳುಹಿಸಿದನು. ಅದರಲ್ಲಿ-'ರಾಜರೇ, ಇಟಲಿಯ ರಾಷ್ಟ್ರಕ್ಕೆ ತಾವೇ ರಾಜ

ರಾಗಬೇಕೆಂದು ನನ್ನ ಅಪೇಕ್ಷೆಯಿದೆ. ತಮ್ಮ ಧ್ವಜದಮೇಲೆ 'ಏಕರಾಷ್ಟ್ರೀಯತೆ - ಸ್ವಾತಂತ್ರ್ಯ' ಎಂದು ಬರೆಯಿಸಿರಿ ಫ್ರಾನ್ಸ್ ಆಸ್ಟ್ರಿಯಾದೇಶಗಳ ಪಾರತಂತ್ರ್ಯದಿಂದ ನಮ್ಮನ್ನು ಮುಕ್ತಮಾಡಲು, ಸುಶಿಕ್ಷಿತ ಸೈನ್ಯ ಸಹಾಯದಿಂದ ಕೂಡಿರುವ ತಾವು ಪ್ರಯತ್ನಿಸುವಿರಾದರೆ ನಾವು ತಪ್ಪದೆ ಬಂದು ತಮ್ಮನ್ನು ಸೇರುವೆವು. ತಮ್ಮ ಶ್ರೇಯಸ್ಸಿಗಾಗಿ ನಮ್ಮ ಪ್ರಾಣಗಳನ್ನು ಕೊಡಲು ಸಿದ್ಧರಾಗುವೆವು ಇಟಲಿಯ ಇತರ ಸಣ್ಣ ರಾಜ್ಯಗಳವರು ತಮಗೆ ಸಾಮಂತರಾಗಿರುವಂತೆ ಮಾಡುವೆವು. ಕತ್ತಿಯ ಬೋನೆಯಿಂದಲ್ಲದೆ ಈ ಕಾರ್ಯವಾಗದು. ಅದಕ್ಕೆ ತಾವು ಸಮರ್ಥರಿರುವಿರಿ. ಒಂದುವೇಳೆ ಇಂದು ನೀವು ಈ ಕಾರ್ಯಮಾಡಲು ಹಿಂದೆಗೆಯುವಿರಾದರೆ ಮತ್ತಾರ್ಯರಾದರೂ ಈ ಕಾರ್ಯಮಾಡದೆ ಬಿಡಲಾರರು. ಆಗ ನಿಮ್ಮ ಸ್ವಾತಂತ್ರ್ಯಕ್ಕೆ ಕುಂದಕವುಂಟಾಗದಿರದು' ಎಂದು ಮುಂತಾಗಿ ಆ ಪತ್ರದಲ್ಲಿ ಬರೆದಿದ್ದನು.

ಪಿಡ್‌ಮಾಂಟಿನ ರಾಜನು ಬುದ್ಧಿವಂತನಾದರೂ ವಿಚಾರಶೀಲನಲ್ಲ. ಧೈರ್ಯಶಾಲಿಯಲ್ಲ. ನಿಶ್ಚಲಚಿತ್ತವೃತ್ತಿಯವನಲ್ಲ. ಆದುದರಿಂದ ಮ್ಯಾಝಿನಿಯ ಮನವಿಯನ್ನು ಸಹಜರೀತಿಯಿಂದ ಅರ್ಥಮಾಡಿಕೊಳ್ಳಲಿಲ್ಲ. ಇದರ ಫಲವಾಗಿ ಮ್ಯಾಝಿನಿಯು ಅಪೇಕ್ಷಿಸಿದಂತೆ ಆಗದಿದ್ದುದಂತಿರಲಿ— ಅದಕ್ಕೆ ವಿರೋಧಪರಿಣಾಮವೇ ಉಂಟಾಯಿತು. ಕ್ರಾಂತಿಕಾರ ಮ್ಯಾಝಿನಿಯು ತನ್ನ ರಾಜ್ಯದ ಸರಹದ್ದಿಗೆ ಬಂದನಾದರೆ ಅವನನ್ನು ಹಿಡಿದು ನಿರ್ಬಂಧಿಸಬೇಕೆಂದು ರಾಜಾಜ್ಞೆ ಹೊರಟಿತು. ಮ್ಯಾಝಿನಿಯು ಆ ಆಜ್ಞೆಗಾಗಿ ಬೆದರಲಿಲ್ಲ- ಆಶ್ಚರ್ಯಪಡಲೂ ಇಲ್ಲ. ಅದರ ಇತ್ಯರ್ಥವು ಹೀಗಾಗುವುದೆಂದು ಯೋಚಿಸಿ ಅಂತಹ ಪ್ರಸಂಗದಲ್ಲಿ ಏನು ಮಾಡಬೇಕೆಂದೂ ಈ ಮೊದಲೇ ನಿರ್ಧರಿಸಿ ಒಂದು ಒಳಸಂಚು ನಡೆಸಿದ್ದನು. ಪಿಡ್‌ಮಾಂಟಿನ ರಾಜಸೈನ್ಯದ ಅನೇಕ ಅಧಿಕಾರಿಗಳೂ ಸೈನಿಕರೂ ಈ ಒಳಸಂಚಿಗೆ ಸೇರಿದ್ದರು. ಮ್ಯಾಝಿನಿಯು, ಈ ಸೈನಿಕರ ಸಹಾಯಗೊಂಡು ಒಂದು ಸ್ವಾತಂತ್ರ್ಯಯುದ್ಧವನ್ನು ಹೂಡಲು ನಿಶ್ಚಯಿಸಿದನು. ಅದಕ್ಕಾಗಿ ಜಿನೋವಾದಲ್ಲಿ ಒಂದು ಯುದ್ಧ ಸಭೆಯನ್ನು ನೆರೆಯಿಸಿ, ಪಿಡ್‌ಮಾಂಟಿನ ಸೈನ್ಯ ಸಹಾಯದಿಂದ ಲೊಂಬಾರ್ಡಿಯಮೇಲೆ ದಂಡೆತ್ತಿಹೋಗಬೇಕು ಎಂಬುದು ಈ

ಒಳಸಂಚಿನ ಮುಖ್ಯೋದ್ದೇಶವಿತ್ತು. ಆದರೆ ಈ ಸಂಚಿನವರು ಏಕಾಭಿಪ್ರಾಯಕ್ಕೆ ಬರುವುದರಲ್ಲಿ ಸ್ವಲ್ಪ ಸಾವಕಾಶವಾದುದರಿಂದ, ಈ ಗುಪ್ತಸಂಘದ ವಿಚಾರವೆಲ್ಲ ಸರ್ಕಾರಕ್ಕೆ ತಿಳಿದುಹೋಯಿತು. ಛಾರ್ಲ್ಸ್ ಆಲ್ಬರ್ಟನು ಗಾಬರಿಗೊಂಡು, ಅಪರಾಧಿಗಳನ್ನು ಹಿಡಿದು ದಂಡಿಸಲು ಒಂದು ನ್ಯಾಯಸಭೆಯನ್ನು ನಿರ್ಮಿಸಿ ಅವರಿಗೆ ನಿರಂಕುಶಾಧಿಕಾರವನ್ನು ಕೊಟ್ಟನು. ತಪ್ಪಿತಸ್ಥರೆಂದು ತೋರಿದ ಅನೇಕರನ್ನು ಸೆರೆಹಿಡಿದರು. ಮ್ಯಾಝಿನಿಯ ಪರಮಮಿತ್ರನಾದ ರಫಿನಿ ಎಂಬುವನನ್ನು ಚಿತ್ರಹಿಂಸೆಗೊಳಿಸಿ, ಈ ಸಂಚಿನ ಮುಖ್ಯಸ್ಥನಾದ ನಿನ್ನ ಗೆಳೆಯನ ಹೆಸರು ಹೇಳೆಂದು ನಿರ್ಬಂಧಿಸಿದರು. ಆದರೂ ಅವನು ಮ್ಯಾಝಿನಿಯ ಗುರುತ ಕೊಡದೆ, ಸೆರೆಮನೆಯಲ್ಲೇ ಉರುಲುಹಾಕಿಕೊಂಡು ಪ್ರಾಣಬಿಟ್ಟನು. ಹತ್ತುಮಂದಿ ಸೈನಿಕರನ್ನೂ ಇಬ್ಬರು ಅಧಿಕಾರಿಗಳನ್ನೂ ತೋಪಿನಬಾಯಿಗೆ ಕೊಟ್ಟು ಸುಟ್ಟರು. ಹದಿನಾಲ್ಕು ಮಂದಿ ದೇಶಾಂತರಗತರಾಗಿಹೋಗಿ ಪ್ರಾಣವುಳಿಸಿಕೊಂಡರು. ಎಷ್ಟೋ ಜನರಿಗೆ ಹಲವು ವರ್ಷಗಳ ಬಂದೀವಾಸವು ಪ್ರಾಪ್ತವಾಯಿತು. ಇಂತಹ ಅಪಾಯವೇಳೆಯಲ್ಲಿ ಮ್ಯಾಝಿನಿಯು ಮಾತ್ರ ದೈವಯೋಗದಿಂದ ಸುರಕ್ಷಿತವಾಗಿ ಉಳಿದನು.

ಈ ಬಗೆಯ ಉಪದ್ರವಗಳೂ ಆ ಧೀರನ ಮನಸ್ಸನ್ನು ಚಲಿಸಗೊಡಲಿಲ್ಲ. ಮ್ಯಾಝಿನಿಯು ಹೀಗೆ ಚೆಲ್ಲುವ ದೇಶಭಕ್ತರ ರಕ್ತಬಿಂದುಗಳೇ ಬೀಜಸ್ವರೂಪವಾಗಿ ದೇಶೀಯರ ಮನಸ್ಸಿನಲ್ಲಿ ಸ್ವಾತಂತ್ರ್ಯಭಾವನೆಯ ವೃಕ್ಷಗಳನ್ನು ಬೆಳೆಸುವಲ್ಲಿ ಸಹಾಯಕವಾಗುವುವು ಎಂದು ಸಮಾಧಾನದಿಂದ ಹೇಳುತ್ತಿದ್ದನು. ಆತನು ಹೇಳಿದಂತೆಯೇ ಆಯಿತು. ದೇಶಭಕ್ತರ ಈ ಬಗೆಯ ಸ್ವಾರ್ಥತ್ಯಾಗವೃತ್ತಿಯನ್ನು ಕಂಡು ಇತರ ಅನೇಕರು ದೇಶಕಾರ್ಯಕ್ಕಾಗಿ ಮುಂದೆ ಬಂದರು. ತಮ್ಮ ದೇಹರಕ್ತವನ್ನು ದೇಶಮಾತೆಯ ಚರಣತಲದಲ್ಲಿ ಧಾರೆಯಾಗಿ ಸುರಿಯಲು ಯಾರೂ ಹಿಂದೆಮುಂದೆ ನೋಡಲಿಲ್ಲ. ನಶ್ವರವಾದ ದೇಹವನ್ನು ದೇಶಸೇವೆಗಾಗಿ ಅರ್ಪಿಸುವುದಕ್ಕಿಂತಲೂ ಸಾರ್ಥಕಕಾರ್ಯವು ಮತ್ತೊಂದಿಲ್ಲವೆಂಬ ಭಾವವು ಜನಮನದಲ್ಲಿ ಮೂಡಿತು.



## ಅಧ್ಯಾಯ ೪ "ಇಂಗ್ಲೆಂಡಿನಲ್ಲಿ—"

ಮ್ಯಾಝಿನಿಯ ಈ ಕಾರ್ಯಗಳನ್ನು ಸಹಿಸಿಕೊಂಡಿರುವುದು ಫ್ರೆಂಚ್ ಸರ್ಕಾರಕ್ಕೆ ಅಸಾಧ್ಯವೆನ್ನಿಸತೊಡಗಿತು. ಒಡನೆ ಅವರು ತರುಣ ಇಟಲಿಯ ಮುದ್ರಣಾಲಯವನ್ನು ಧ್ವಂಸಮಾಡಿ, ಆತನನ್ನು ಗಡೀಪಾರು ಮಾಡಲು ಆಜ್ಞೆಯನ್ನು ಹೊರಡಿಸಿದರು ಆದರೆ, ಮ್ಯಾಝಿನಿಯು ಆ ಸ್ಥಳವನ್ನು ಬಿಟ್ಟುಹೊರಡದೆ ಅಲ್ಲೇ ಒಂದೆಡೆ ಗುಪ್ತವಾಗಿ ವಾಸಿಸಿದ್ದು ಬೇರೊಂದು ಮುದ್ರಣಾಲವನ್ನು ಗೋಪ್ಯವಾಗಿಯೇ ಇಟ್ಟುಕೊಂಡು ತರುಣ ಇಟಲಿಯನ್ನು ಹೊರಪಡಿಸುತ್ತಿದ್ದನು. ಹಾಗೆ ಮರೆಯಲ್ಲಿದ್ದುಕೊಂಡು ಕೆಲಸಮಾಡುವುದು ಬಹುಕಾಲ ಸಾಧ್ಯವೆನ್ನಿಸಲಿಲ್ಲವಾಗಿ, ೧೮೩೩ನೆಯ ಜುಲೈ ತಿಂಗಳಲ್ಲಿ ಮಾರ್ಸೇಲ್ಸ್‌ನಿಂದ ಹೊರಟು ಸ್ವಿಟ್ಸರ್ಲೆಂಡಿನ ಜಿನೀವಾ ನಗರವನ್ನು ಸೇರಿ, ಪಿಡ್‌ಮಾಂಟಿನ ಸೇನೆಯವರನ್ನೊಳಗೊಂಡ ಮತ್ತೊಂದು ಒಳಸಂಚನ್ನು ಹೂಡಲು ಪ್ರಯತ್ನಿಸಿದನು. ಆ ಒಳಸಂಚಿನವರು ಸಾವೋಯಿ ಪ್ರಾಂತದ ಸರಕಾರೀ ಸೈನ್ಯದಲ್ಲಿನ ಬಂಟರನ್ನೂ ಸೇರಿಸಿಕೊಂಡು ಪಿಡ್‌ಮಾಂಟ್ ರಾಜಧಾನಿಯಮೇಲೆ ದಂಡೆತ್ತಿ ಹೋಗಬೇಕೆಂದು ಸಂಕೇತವಿತ್ತು. ಆದರೆ ಅವರ ನಾಯಕತ್ವವನ್ನು ವಹಿಸಿದ್ದ ಒಬ್ಬ ದುರಹಂಕಾರಿಯು ಮ್ಯಾಝಿನಿಯ ಸೂಚನೆಯಂತೆ ಸಕಾಲದಲ್ಲಿ ದಂಡೆತ್ತಿ ಹೊರಡದೆ ತಾಮಸಮಾಡಿದುದರಿಂದ ಮ್ಯಾಝಿನಿಯ ಅವಿಶ್ರಾಂತ ಶ್ರಮವೆಲ್ಲ ನಿರರ್ಥಕವಾಯಿತು. ಈ ಒಳಸಂಚಿನ ಸಿದ್ಧತೆಗಾಗಿ ಮ್ಯಾಝಿನಿಯು ನಿದ್ರಾಹಾರವಿಲ್ಲದೆ, ಲವ ಮಾತ್ರವೂ ವಿಶ್ರಾಂತಿಯಿಲ್ಲದೆ ಬಹು ಶ್ರಮಪಟ್ಟಿದ್ದನು. ಅದೆಲ್ಲವೂ, ಹೀಗೆ ವ್ಯರ್ಥವಾದುದರಿಂದ ಅವನು ಸ್ವಲ್ಪಕಾಲ ಹತಾಶನಾಗಿ ಕುಳಿತನು. ಸಾಲದುದಕ್ಕೆ ಅವನ ಆರೋಗ್ಯವೂ ಕೆಟ್ಟು ಹಾಸಿಗೆ ಹಿಡಿದುಬಿಟ್ಟನು. ಒಳಸಂಚು ಹಾಗೆ ಭಗ್ನವಾದುದು ಮಾತ್ರವಲ್ಲ- ಅದರಿಂದ ಮತ್ತೊಂದು ಪ್ರಮಾದಫಲವೂ ಉಂಟಾಯಿತು. ಸ್ವಿಸ್ ಸರ್ಕಾರದವರಿಗೆ, ಬೇರೆ ಸರ್ಕಾರಗಳವರಿಂದ ಮ್ಯಾಝಿನಿಯನ್ನು ಗಡೀಪಾರುಮಾಡಬೇಕೆಂದು ಒತ್ತಾಯದ ಮನವಿಗಳೂ ಬರಲಾರಂಭಿಸಿದುವು. ಅದಕ್ಕನುಸಾರವಾಗಿಯೇ ಆ ಸರಕಾರದವರು ತಮ್ಮ ದೇಶವನ್ನು ಬಿಟ್ಟುಹೋಗುವಂತೆ ಆತನಿಗೆ ಆಜ್ಞೆಮಾಡಿದರು.

ಆದರೆ ಮ್ಯಾಝಿನಿಯೇನೋ ಆ ಸ್ಥಳವನ್ನು ಬಿಟ್ಟು ಹೊರಡಲಿಲ್ಲ ಗುಪ್ತವಾಗಿ ಜಿನೀವಾದಲ್ಲೇ ಮುಂದೆ ಮೂರು ವರ್ಷಕಾಲ ವಾಸಿಸಿದನು. ಹಗಲೆಲ್ಲ ಮನೆಯಲ್ಲೇ ಅಡಗಿದ್ದು - ರಾತ್ರಿಕಾಲದಲ್ಲಿ ಗುಡ್ಡಗಾಡುಗಳಲ್ಲಿ ತಿರುಗಿ ಚಳುವಳಿಗೆ ಸಂಬಂಧಿಸಿದ ಕೆಲವು ಕಾರ್ಯಗಳನ್ನು ಗಮನಿಸುವನು.- 'ಅಕ್ಕಟಾ, ನಾನು ಏನು ಕಾರ್ಯವನ್ನು ಕೈಕೊಂಡೆನಲ್ಲಾ! ಎಷ್ಟು ಮಂದಿಯ ಪ್ರಾಣವು ಈ ಕಾರ್ಯಕ್ಕಾಗಿ ಬಲಿಯಾಯಿತು. ಎಷ್ಟುಮಂದಿ ತಾಯಿಯರು ನನ್ನ ಈ ಕಾರ್ಯಫಲವಾಗಿ ಅತ್ತು ಕಣ್ಣೀರುಕಾಲುವೆಗಳನ್ನು ಹರಿಸಿದರೋ ಇನ್ನೆಷ್ಟುಮಂದಿ ಅಳಲಿಕ್ಕೆ ಕಲಿಯಲಿರುವರೋ ಕಾಣೆನಲ್ಲಾ! ಇಟಲಿಯ ತರುಣಜನಾಂಗವನ್ನು ಎಚ್ಚರಗೊಳಿಸಿ ಹುರಿದುಂಬಿಸುವ ಕಾರ್ಯವು ಈ ಮಾರ್ಗದಿಂದಲಲ್ಲದೆ ಮತ್ತಾವ ಮಾರ್ಗದಿಂದ ಸಾಧ್ಯವಾದೀತು! ನನ್ನೀ ಕಾರ್ಯವು ಸಾರ್ಥಕವಾದುದೋ, ಅಥವ ರಾಷ್ಟ್ರಸೇವೆಯೆಂಬೀಕಾರ್ಯವು ಕೇವಲ ಭ್ರಮಾತ್ಮಕವಾದುದೋ!' ಹೀಗೆಂದು ಆತನು ಅನೇಕವೇಳೆ ಯೋಚಿಸಿ ಮರುಗುವನು.

ಮ್ಯಾಝಿನಿಯ ಅಜ್ಞಾತವಾಸದ ಈ ಅವಧಿಯಲ್ಲಿ ಆತನು ಬಹುಬಗೆಯ ಕಷ್ಟನಷ್ಟಗಳಿಗೆ ಒಳಪಟ್ಟನು. ಬಹುದಿನಗಳಿಂದ ಅವನೊಂದಿಗೆ ಕೆಲಸಮಾಡಿದ ಆಪ್ತಮಿತ್ರರಲ್ಲಿ ಅನೇಕರ ಸಹಾಯವು ತಪ್ಪಿತು. ತರುಣ ಇಟಲಿಯ ಪ್ರಚಾರಕ್ಕೂ ಇತರ ಕಾರ್ಯಗಳಿಗೂ ಸಾಕಾದಷ್ಟು ದ್ರವ್ಯ ಸಹಾಯವು ಒದಗುತ್ತಿರಲಿಲ್ಲ. ಅವನಂತೆಯೇ ದೇಶಭ್ರಷ್ಟರಾದ ಇತರರು ಬಂದು ತಮ್ಮ ಕಷ್ಟಗಳನ್ನು ಹೇಳಿಕೊಂಡಾಗ್ಗೆ ಯೋಗ್ಯ ಸಹಾಯಮಾಡಲು ಅವನ ಕೈಲಿ ದ್ರವ್ಯವಿರಲಿಲ್ಲ. ಈ ವಿಚಾರಗಳೆಲ್ಲವೂ ಆತನ ದಯಾರ್ದ್ರಹೃದಯವನ್ನು ಬಹು ಮರುಗಿಸಿದುವು. ಅವನ ಮಿತ್ರರನೇಕರು ಅಪಾಯಕಾರಿಯಾದ ಈ ಕಾರ್ಯವನ್ನು ಬಿಟ್ಟು ಯಾವುದಾದರೊಂದು ಸೌಮ್ಯ ಉದ್ಯೋಗಮಾಡಿಕೊಂಡು ಹತ್ತು ಮಂದಿಯಲ್ಲಿ ಒಬ್ಬನಂತೆ ಜೀವಿಸಲಾಗದೇ ಎಂದು ಸಲಹೆಕೊಟ್ಟರು. ತಂದೆತಾಯಿಗಳು ನಯಭಯಗಳಿಂದ ಹೇಳಿದರು. ಸರ್ಕಾರದಮೇಲೆ ಪಂಥಕಟ್ಟದೆ ಶಾಂತರೀತಿಯ ಚಳವಳಿಯಿಂದಲೇ ದೇಶಕಾರ್ಯ ಮಾಡಲಾಗದೇ ಎಂದು ಅವನ ಆಪ್ತೇಷ್ಟರೆಲ್ಲರೂ ಹೇಳಿದರು. ಮ್ಯಾಝಿನಿಯು—'ಇದೇನು, ಇವರು ಹೇಳುತ್ತಿರು

ವುದರಲ್ಲಿ ಅರ್ಥವಿಲ್ಲವೆ? ಶಾಂತರೀತಿಯಿಂದ ಕೆಲಸಮಾಡಿ ಜನಮನವನ್ನು ಸುಧಾರಿಸಲು ಸಾಧ್ಯವುಂಟೇ?' ಎಂದು ಯೋಚಿಸುವನು. ಆತನ ಮನಸ್ಸು ಬಹು ಕಳವಳಗೊಂಡಿತು.--- 'ಏನು ನಾನು ನಿರರ್ಥಕಕಾರ್ಯಕ್ಕಾಗಿ ಹಟ ಹಿಡಿದು ಶ್ರಮಿಸುತ್ತಿರುವೆನೆ!' ಎಂದುಕೊಳ್ಳುವನು. ಈ ಸಂದರ್ಭದಲ್ಲೇ ಆತನು ಹೀಗೆಂದು ಸ್ಥಳದಲ್ಲಿ ಬರೆದಿದ್ದಾನೆ.— 'ಒಂದಾನೊಂದು ಪ್ರಾತಃಕಾಲ ನಾನು ಎದ್ದು ಕುಳ್ಳಿರಲು ನನ್ನ ಮನಸ್ಸು ಬಹು ಪ್ರಶಾಂತವಾಗಿತ್ತು. ಆ ವೇಳೆಯಲ್ಲಿ ನನ್ನ ಮನಸ್ಸಿನಮೇಲೆ ಹಾಯ್ದುಹೋದ ಮೊದಲ ಯೋಚನೆಯು—'ನನ್ನೀ ಯೋಚನೆಗಳೆಲ್ಲವೂ ಕೇವಲ ಮೋಹಕವಾದುವು. ಜೀವಿತದ ನಿಶ್ಚಯಧ್ಯೇಯವನ್ನು ಅರಿಯದ ಕಾರಣದಿಂದ ಉಂಟಾದುವು' ಈ ಯೋಚನೆಯು ತಲೆದೋರಿದ ಒಡನೆಯೇ ಆತನು 'ನನಗೆ ಈ ಕಾರ್ಯದಲ್ಲಿ ಸ್ವಾರ್ಥಭಾವನೆಯೇನಾದರೂ ಉಂಟೆ' ಎಂದು ಹೃದಯ ಶೋಧನೆಮಾಡಿಕೊಂಡನು. ಸ್ವಾರ್ಥಭಾವ, ಸುಖಸಂತೋಷಗಳು, ತಿಂಡಿಬಟ್ಟೆ, ಮನೆ ಬಾಗಿಲು ಇವುಗಳ ಸಂಬಂಧವಾದ ಮೋಹ ಮುಂತಾದುವೆಲ್ಲಾ ಆವನ ಹೃದಯದಿಂದ ತೊಲಗಿಹೋಗಿ ಬಹು ಕಾಲವಾಗಿತ್ತು —'ಜೀವನವೆಂಬುದೊಂದು ಸಾಧನಕ್ಷೇತ್ರ. ಕರ್ತವ್ಯನಿಷ್ಠೆಯೇ ಪ್ರತಿಯೊಬ್ಬನಮೇಲೆ ಹೊತ್ತಿರುವ ಋಣ. ಮನುಷ್ಯನಾಗಿ ಜನಿಸಿದ ಪ್ರತಿಯೊಬ್ಬನೂ, ತನ್ನ ಹೃದಯವನ್ನು ದೇವಾಲಯವೋ ಎಂಬಂತೆ ತಿಳಿದು ಪ್ರಯತ್ನಪೂರ್ವಕ ಶುದ್ಧಿಗೊಳಿಸಿಕೊಳ್ಳಬೇಕು. ನಾನು ದೇಶಹಿತದೃಷ್ಟಿಯಿಂದ, ಸ್ವಾರ್ಥಲೇಶವೂ ಇಲ್ಲದೆ ಕೈಕೊಂಡಿರುವ ಈ ಕಾರ್ಯವನ್ನು ತ್ಯಜಿಸಬೇಕಾದ ಕಾರಣವೇನು! ಇಂತಹ ಒಂದು ಕಾರ್ಯಕ್ಕಾಗಿ ನಾನೊಬ್ಬನು ಕಷ್ಟಪರಂಪರೆಗಳನ್ನು ಅನುಭವಿಸದಿದ್ದರೆ ನನ್ನ ಮನಸ್ಸಿನ ಪವಿತ್ರೋದ್ದೇಶಗಳು ಸಫಲತೆಯನ್ನು ಹೊಂದಲಾರವು' ಎಂದು ಮುಂತಾಗಿ ಯೋಚಿಸಿ, ತನ್ನ ಜೀವಿತೋದ್ದೇಶದಲ್ಲಿ ಸುನಿಶ್ಚಿತಾಭಿಪ್ರಾಯವುಳ್ಳವನಾಗಿ ನಮ್ಮ ಕಥಾನಾಯಕನು ಪುನಃ ಇಮ್ಮಡಿ ಧೈರ್ಯೋತ್ಸಾಹಗಳಿಂದ ಮುಂದರಿಸಿದನು.

ನಮ್ಮ ಕಥಾನಾಯಕನಂತಹ ಪುರುಷಪುಂಗವರು ವಿಶ್ವಕುಟುಂಬಿಗಳು. ಅವರಿಗೆ ತಮ್ಮ ದೇಶ ಅನ್ಯದೇಶವೆಂಬ ಸಂಕುಚಿತಭಾವವಿಲ್ಲದೆ ಅಜ್ಞಾನವು ಎಲ್ಲಿದ್ದರಲ್ಲಿ ಅದನ್ನು ನೀಗಿಸಿ ಸ್ವಾತಂತ್ರ್ಯದಾಯಕವಾದ

ಸುಜ್ಞಾನವನ್ನು ಬೋಧಿಸಬೇಕೆಂಬ ಇಚ್ಛೆಯುದಯಿಸುವುದು ಸ್ವಾಭಾವಿಕ. ಆಗ ಸ್ವಿಟ್ಸರ್ಲೆಂಡು ದೇಶದ ರಾಜಕೀಯ ಸ್ಥಿತಿಯು ಶಿಥಿಲವಾಗುತ್ತಾ ನಡೆದಿರಲು ಆ ದೇಶದ ಜನರ ಬೋಧನೆಗಂದು ಒಂದು ಪತ್ರವನ್ನು ಹೊರಡಿಸಿ ನಡೆಯಿಸತೊಡಗಿದನು. ಇದು ಒಂದು ವರ್ಷಕಾಲ ನಡೆಯಿತೆಂಬ ವೇಳೆಗೆ ಸ್ವಿಸ್ ಸರಕಾರಕ್ಕೂ ಅದರ ಹಾವಳಿಯನ್ನು ಸಹಿಸಿಕೊಳ್ಳುವುದು ಅಸಾಧ್ಯವಾಗಿ ಮ್ಯಾಝಿನಿಯು ಆ ಪತ್ರಿಕೆಯ ಮುದ್ರಣ ಪ್ರಚಾರಣೆಗಳನ್ನು ಪ್ರತಿಬಂಧಗೊಳಿಸಿ, ತಮ್ಮ ದೇಶಬಿಟ್ಟು ಹೋಗುವಂತೆ ಆತನಿಗೆ ಪುನಃ ಆಜ್ಞೆ ಮಾಡಿದರು.

ಇಷ್ಟಾದ ತರುವಾಯ ಗುಟ್ಟಾಗಿಯಾದರೂ ಜಿನೀವಾದಲ್ಲಿ ವಾಸಿಸುವುದು ಅಸಾಧ್ಯವಾಗಲು, ಮ್ಯಾಝಿನಿಯು ಮುಂದೆ ತಾನು ಎಲ್ಲಿದ್ದು ಕೆಲಸ ಮಾಡಬೇಕೆಂದು ಯೋಚಿಸತೊಡಗಿದನು. ಆ ವೇಳೆಯಲ್ಲಿ ಆತನಿಗೆ ಇಂಗ್ಲೆಂಡು ಸ್ವಾತಂತ್ರ್ಯಪ್ರಿಯರ ದೇಶವಾದುದರಿಂದ ಅಲ್ಲಿ ನಿಶ್ಚಿಂತೆಯಿಂದ ವಾಸಿಸಲು ಸಾಧ್ಯವೆಂಬ ಯೋಚನೆ ಹೊಳೆಯಿತು. ಒಡನೆ ೧೮೩೭ನೆಯ ಜನವರಿಯಲ್ಲಿ ಪ್ರಯಾಣಮಾಡಿ ಲಂಡನ್ನಗರವನ್ನು ಸೇರಿದನು. ಲಂಡನ್ನಲ್ಲಾದರೂ ಅವನ ವಾಸವೇನು ಪುಷ್ಪಶಯ್ಯೆಯಾಗಿರಲಿಲ್ಲ! ಸ್ವಿಟ್ಸರ್ಲೆಂಡಿನ ಅಪೂರ್ವ ಸೃಷ್ಟಿಸೌಂದರ್ಯದಲ್ಲಿ ಬೆಳೆದ ಆತನು ಲಂಡನ್ನಿನ ಹೊಗೆ ಮುಚ್ಚಿದ- ಜನಸಮ್ಮರ್ದದಿಂದ ಗುಜುಗುಟ್ಟುತ್ತಿದ್ದ ಓಣಿಯವಾಸದಿಂದ ಪ್ರಾರಂಭದ ಕೆಲದಿನಗಳು ಬಹು ಬೇಸತ್ತನು.

ಆ ದೂರದೇಶದಲ್ಲಿ ಮ್ಯಾಝಿನಿಗೆ ಸ್ನೇಹಿತರೊಬ್ಬರೂ ಇರಲಿಲ್ಲ, ಇಂಗ್ಲೀಷ್ ಭಾಷೆಯ ಹೆಚ್ಚು ಪರಿಚಯವಿಲ್ಲವೆ ಅನೇಕವೇಳೆ ಬಹು ತೊಂದರೆಯಾಗುತ್ತಿತ್ತು. ಪ್ರಾರಂಭದಲ್ಲಿ ಆತನ ತಂದೆಯು ಸ್ವಲ್ಪ ಹಣವನ್ನು ಕಳುಹಿಸುತ್ತಿದ್ದನಾದರೂ ಅದು ಬಹು ದಿನಗಳವರೆಗೆ ನಡೆಯಲಿಲ್ಲ. ಕೆಲದಿನಗಳು ಇಂಗ್ಲೀಷ್ ಪತ್ರಿಕೆಗಳಿಗೆ ಲೇಖನಗಳನ್ನು ಬರೆದುಕೊಟ್ಟು ಸ್ವಲ್ಪ ದ್ರವ್ಯವನ್ನು ಸಂಪಾದಿಸಿಕೊಳ್ಳುತ್ತಿದ್ದನು ಅಂತಹ ಧನಾಭಾವದ ಸ್ಥಿತಿಯಲ್ಲೂ ಸಹ, ಇಟಲಿಯ ನಿರಾಶ್ರಿತರಾರಾದರೂ ಬಂದು ಸಹಾಯ ಬೇಡಿದಾಗ್ಗೆ ಇಲ್ಲವೆನ್ನಲಾರದೆ ಕೈಯಲಿದ್ದುದನ್ನು ಕೊಟ್ಟುಬಿಡುತ್ತಿದ್ದನು. ಬರುತ್ತಬರುತ್ತಾ ಧನಾಭಾವ ಸ್ಥಿತಿಯು ಸಹಿಸಲಶಕ್ಯವೆಂಬಂತಾಯಿತು.

ಉಂಗುರ, ಗಡಿಯಾರ, ಅಮೌಲ್ಯವೆಂದು ಶೇಖರಿಸಿಕೊಂಡಿದ್ದ ಪುಸ್ತಕಗಳು ಬಟ್ಟೆಬರೆಗಳು ಮುಂತಾದುವನ್ನೂ ಒತ್ತೆಯಿಟ್ಟು ಕೆಲದಿನಗಳ ಜೀವನೋಪಾಯವನ್ನು ಸಾಗಿಸಿದನು. ಎರಡುಮೂರು ವರ್ಷಕಾಲ ಲಂಡನ್‌ನಗರದಲ್ಲಿ ವಾಸಿಸಿದ್ದರೂ, ಆತನಿಗೆ ಅಲ್ಲಿ ಹೆಚ್ಚುಮಂದಿ ಪರಿಚಯಸ್ಥರಿರಲಿಲ್ಲ. ಆತನು ಸದಾಕಾಲವೂ ಕೇವಲ ಗ್ರಂಥವಾಚನ ಅಥವ ಲೇಖನ ಈ ಕಾರ್ಯದಲ್ಲೇ ಮಗ್ನನಾಗಿರುವನು. ಆ ಕೆಲಸವು ಬೇಸರತೋರಿತೆಂದರೆ 'ಬ್ರಿಟಿಷ್ ಮ್ಯೂಜಿಯಮ್' ಎಂಬ ಸರ್ವವಸ್ತು ಪ್ರದರ್ಶನಾಲಯಕ್ಕೆ ಹೋಗಿಬರುವನು. ಹೀಗೆ ಬಹು ದಿನಗಳು ಕಳೆದ ತರುವಾಯ, ಆತನಿಗೆ ಇಂಗ್ಲೀಷರಲ್ಲಿ ಒಬ್ಬೊಬ್ಬರಾಗಿ ಸ್ನೇಹವಾಗಹತ್ತಿದರು. ಅವರ ಕೆಲವು ಗುಣಗಳು ಆತನಿಗೆ ವಿಶೇಷ ಮೆಚ್ಚುಗೆಯನ್ನುಂಟುಮಾಡಿದುವು. ಇಂಗ್ಲಿಷ್ ಜನರ ಸ್ವಾತಂತ್ರ್ಯಪ್ರೀತಿಯೂ, ದೃಢನಿಶ್ಚಯವೂ, ಆತನ ಮನಸ್ಸನ್ನು ತೃಪ್ತಿಗೊಳಿಸಿದುವು. ಇಂಗ್ಲಿಷ್ ಜನರು ಬಹು ಸಾವಕಾಶವಾಗಿ ಪರರನ್ನು ತಮ್ಮ ಅಂತರ್ಯಕ್ಕೆ ತೆಗೆದುಕೊಳ್ಳುವರಾದರೂ ಒಂದು ಬಾರಿ ಮಿತ್ರತ್ವವು ಸೇರಿತೆಂದರೆ ಅದು ಆಮರಣಾಂತವಾಗಿ ಸಾಗಿಬರುವುದೆಂದು ಆತನಿಗೆ ಮನವರಿಕೆಯಾಯಿತು. ಈ ವೇಳೆಯಲ್ಲೇ ಆತನಿಗೆ ಸುಪ್ರಸಿದ್ಧ ಆಂಗ್ಲೇಯ ವಾಙ್ಮಯಾರಾಧಕ ಕಾರ್ಲೈಲನ ಮನೆಯವರೊಂದಿಗೆ ಪರಿಚಯವಾಯಿತು. ಕಾರ್ಲೈಲ್ ದಂಪತಿಗಳು, ಬಹು ಕಷ್ಟನಷ್ಟಗಳಿಗೆ ಗುರಿಯಾದರೂ ನಿಶ್ಚಲ ಚಿತ್ತವೃತ್ತಿಯಿಂದ ದೇಶಾಭಿಮಾನಿಯಾಗಿ ಸ್ವಾತಂತ್ರ್ಯ ಮನೋಭಾವವನ್ನುಂಟಾಗಿದ್ದ ಆತನನ್ನು ಬಹುಮಟ್ಟಿಗೆ ಮೆಚ್ಚಿಕೊಂಡು, ಗೌರವಿಸುತ್ತಿದ್ದರು. ಕಾರ್ಲೈಲನ ಪತ್ನಿಯು ಆತನಲ್ಲಿ ಸೋದರಿಯೋ ಎಂಬಂತೆ ವಿಶ್ವಾಸವಿಟ್ಟು ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಲೂ, ಆತನು ಚಿಂತೆಗೊಂಡಿದ್ದ ವೇಳೆಯಲ್ಲಿ ಯುಕ್ತಿ ಯುಕ್ತವಾದ ಮಾತುಕಥೆಗಳಿಂದ ಸಮಾಧಾನಮಾಡಿ, ಉತ್ತೇಜನಗೊಳಿಸುತ್ತಲೂ ಇದ್ದಳು.

ಕಾರ್ಲೈಲನ ಮತ್ತು ಮ್ಯಾಝಿನಿಯ ಚಿತ್ತವೃತ್ತಿಗಳು ಕಲೆತುವು. ಅನೇಕ ತಾತ್ವಿಕವಿಚಾರಗಳಲ್ಲಿ ಅವರಿಬ್ಬರ ಅಭಿಪ್ರಾಯವೂ ಒಂದೇ ಆಗಿದ್ದುವು. ಇಬ್ಬರೂ ಕಲೆತ ವೇಳೆಯಲ್ಲೆಲ್ಲ ಅವರು ಆತ್ಮದ ಶ್ರೇಷ್ಠತ್ವ, ವ್ಯಕ್ತಿಶ್ರೇಷ್ಠತ್ವ, ಆಧಿಭೌತಿಕ ಸುಖವಾದ, ಜಡವಾದ, ಮಾನವಜಾತಿಯ

ಪ್ರಗತಿ ಮುಂತಾದ ಹಲವು ಉದಾತ್ತ ತತ್ವಗಳನ್ನಿಟ್ಟುಕೊಂಡು ಚರ್ಚಿಸು ವರು. ಆ ಸಂದರ್ಭಗಳಲ್ಲೆಲ್ಲ ಕಾರ್ಲೈಲನು ಮ್ಯಾಝಿನಿಯ ಉಚ್ಚಗುಣ ನಡತೆಗಳಿಗಾಗಿಯೂ, ಉನ್ನತ ಜೀವಿತಧ್ಯೇಯಕ್ಕಾಗಿಯೂ ಬಹು ಮಟ್ಟಿಗೆ ಮೆಚ್ಚಿಕೊಂಡು ಆತನ ವಿಷಯದಲ್ಲಿ ಗೌರವಭಾವವುಳ್ಳವನಾದನು. ಒಂದಾ ನೊಂದು ಸಂದರ್ಭದಲ್ಲಿ ಕೆಲವುಂದಿ ಪಾರ್ಲಿಮೆಂಟಿನ ಸದಸ್ಯರು, ಸ್ವದೇಶದಿಂದ ದೇಶಭ್ರಷ್ಟನಾಗಿ ಬಂದಿದ್ದ ಮ್ಯಾಝಿನಿಯ ಋಜುವರ್ತ ನೆಯ ಬಗ್ಗೆ ಸಂಶಯಗೊಂಡಿರಲು - ಆತನ ಮಿತ್ರನಾದ ಕಾರ್ಲೈಲನು ಲಂಡನಿನ ಟೈಮ್ಸ್ ಪತ್ರದಲ್ಲಿ ಆತನ ವಿಷಯವಾಗಿ ಹೀಗೆಂದು ಬರೆದನು. 'ಮ್ಯಾಝಿನಿಯ ವ್ಯವಹಾರಜ್ಞಾನವೂ ಚಾತುರ್ಯವೂ ಹೇಗಾದರೂ ಇರಲಿ. ಆತನಂತಹ ಕುಶಲಮತಿಯೂ, ಸತ್ಯಸಂಧನೂ, ದಯಾ ಶೀಲನೂ, ಧೀರನೂ, ಉದಾರಿಯೂ, ಸದಾಚಾರಪರಾಯಣನೂ ಬೇರೊಬ್ಬ ನಿಲ್ಲ. ಮ್ಯಾಝಿನಿಯಂಥ ಸತ್ಯನಿಷ್ಠರು ಜಗತ್ತಿನಲ್ಲಿ ಸಿಕ್ಕುವುದು ಅಪೂರ್ವ. ಲೋಕದಲ್ಲಿ ತಾನು ಸತ್ಯವೆಂದು ನಂಬಿದ ತತ್ವಕ್ಕಾಗಿ ಜೀವಕೊಡುವ ಮಹಾ ಪುರುಷರಲ್ಲಿ ಮ್ಯಾಝಿನಿಯೊಬ್ಬನು.' ಕಾರ್ಲೈಲನ ಈ ಅಭಿಪ್ರಾಯವು ಅನೇಕರ ಸಂಶಯವನ್ನು ದೂರವಾಡಿತು.

ಮ್ಯಾಝಿನಿಯು ಆಜನ್ಮವೂ ಬ್ರಹ್ಮಚಾರಿಯಾಗಿಯೇ ಇದ್ದು ಕಾಲ ಯಾಪನೆಮಾಡಿದನಾದರೂ ಸ್ತ್ರೀಯರ ವಿಷಯದಲ್ಲಿ ಅತಿಶಯ ಪೂಜ್ಯಬುದ್ಧಿ ಯುಳ್ಳವನಾಗಿದ್ದನು. ವಿವಾಹವು ಮಾನವ ಜೀವಿತ ಸಾರ್ಥಕ್ಯಕ್ಕೆ ಅತ್ಯಾ ವಶ್ಯಕ ಸಾಧನವೆಂಬುದೂ, ಜನಾಂಗದ ನೈತಿಕಾಭಿವೃದ್ಧಿಗೆ ಸ್ತ್ರೀಪುರುಷರು ವಿವಾಹಬಂಧನದಿಂದ ಒಂದುಗೂಡಿರುವುದು ಸಹಾಯಕಾರಿಯೆಂಬುದೂ ಆತನ ಅಭಿಪ್ರಾಯವಾಗಿದ್ದಿತಾದರೂ ಆತನು ತಾನು ಮಾತ್ರ ವಿವಾಹಿತನಾ ಗಲು ಸಮ್ಮತಿಸಿರಲಿಲ್ಲ. ಆತನು ಹೃತ್ಪೂರ್ವಕವಾಗಿ ತನ್ನ ದೇಹಮನೋ ಬುದ್ಧ್ಯಾದಿ ಸರ್ವಶಕ್ತಿಗಳನ್ನೂ ದೇಶಸೇವೆಗೆಂದೇ ಸಮರ್ಪಿಸಿಬಿಟ್ಟಿದ್ದನು. ತನ್ನ ಮಾತೃದೇಶವು ಪಾರತಂತ್ರ್ಯಪಾಶದಲ್ಲಿ ಬಿದ್ದು ನರಳುತ್ತಿರುವಲ್ಲಿ ತಾನು ಸಂಸಾರಸುಖಕ್ಕೆ ಮರುಳಾಗಿ, ನಲಿದಾಡಿಕೊಂಡಿರುವುದು ಯುಕ್ತವ ಲ್ಲವೆಂಬುದು ಆ ಮಹಾನುಭಾವನ ಮನವರಿಕೆಯಾಗಿತ್ತು.

ಟೈಮ್ಸ್ ಪತ್ರಿಕೆಯಲ್ಲಿ ಕಾರ್ಲೈಲನ ಅಭಿಪ್ರಾಯವು ಪ್ರಕಟವಾದುದು

ಮ್ಯಾಝಿನಿಯು ಇಂಗ್ಲೆಂಡಿನ ನಾಗರಿಕ ವರ್ಗಕ್ಕೆ ಪರಿಚಯವಾಗಲು ಅವ ಕಾಶವನ್ನು ಕಲ್ಪಿಸಿತು. ಆ ತರುವಾಯ ಆತನಿಗೆ ಅನೇಕಮಂದಿ ಮಿತ್ರರು ದೊರೆತರು. ಈ ಸಂದರ್ಭದಲ್ಲೇ ಆತನಿಗೆ ಲಾಮೆನೆಸ್ ಎಂಬ ಫ್ರೆಂಚ್ ತತ್ವಜ್ಞಾನಿಯ ಮತ್ತು, ಜಾರ್ಜ್‌ಸ್ಯಾಂಡ್ ಎಂಬೊಬ್ಬ ನೀತಿಶಾಸ್ತ್ರ ಕಾರರ ಪರಿಚಯುವಾಯಿತು. ಮ್ಯಾಝಿನಿಗೆ ಅವರ ಗ್ರಂಥಗಳ ವಿಷಯದಲ್ಲಿ ಅತ್ಯಂತ ಪೂಜ್ಯಬುದ್ಧಿಯುಂಟಾಗಿ, ಆತನು ಲ್ಯಾಮೆನೆಸ ತತ್ವಜ್ಞಾನಿಯ ಗ್ರಂಥಪಠನೆಯಿಂದ ಸ್ಫೂರ್ತಿಹೊಂದಿ *Duties of man* – ಎಂದರೆ **ಮಾನುಷಕರ್ತವ್ಯ** ಎಂಬೊಂದು ಅಮೌಲ್ಯಗ್ರಂಥವನ್ನು ರಚಿಸಿದನು. ಲಂಡನಿನಲ್ಲಿ ಪ್ರವಾಸಿಸಿದ್ದಾಗಲೇ ಅಲ್ಲಿಗೆ ಕೆಲಸಕ್ಕಾಗಿ ಬಂದು ನೆಲೆಸಿದ್ದ ಅನೇಕ ಮಂದಿ ಇಟಾಲಿಯನರು ಆತನಿಗೆ ದೊರೆಯಲು, ಮ್ಯಾಝಿನಿಯು ಅವರ ಅಭಿಪ್ರಾಯ ಸುಧಾರಣೆಯುಬಗ್ಗೆ ಒಂದು ಸಂಘವನ್ನು ಸ್ಥಾಪಿಸಿ, ಅದ ರಿಂದ ಪ್ರಕಟವಾಗುತ್ತಿದ್ದ ಪತ್ರಿಕೆಯಲ್ಲಿ ತನ್ನ 'ಮಾನುಷಕರ್ತವ್ಯ' ಗ್ರಂಥ ವನ್ನು ಭಾಗಗಳಾಗಿ ಮುದ್ರಿಸಿ ಪ್ರಕಟಿಸುತ್ತಿದ್ದನು. ತನ್ನ ದೇಶೀಯರಿಂದ ಕೂಡಿದ ಆ ಸಂಘದ ಘಟೋಪ್ಪದ್ಧಿಗೆಂದು ಕೆಲಸಮಾಡುತ್ತಿದ್ದ ಆ ಸಂದ ರ್ಭದಲ್ಲೇ ಆತನು ಹಲವಾರುಮಂದಿ ಇಟಾಲಿಯನ್ ಪರದೇಶಿ ಬಾಲಕರನ್ನು ಅನ್ನವಸ್ತ್ರಗಳನ್ನಿತ್ತು ರಕ್ಷಿಸುತ್ತಲೂ ಇದ್ದನು. ಸ್ವಾರ್ಥಪರರಾದ ಅನೇಕ ಮಂದಿ ವರ್ತಕರು ಆ ಬಾಲಕರನ್ನು ಇಟಲಿಯಿಂದ ಕೆಲಸಕ್ಕಾಗಿ ತಮ್ಮೊಂ ದಿಗೆ ಕರೆತಂದು, ಅವರಿಂದ ವ್ಯೈನುರಿಯು ದುಡಿಸಿಕೊಂಡು, ಇಂಗ್ಲೆಂಡನ್ನು ಸೇರಿದ ತರುವಾಯ ಅವರನ್ನು ಪರದೇಶಿಗಳನ್ನಾಗಿ ಬಿಟ್ಟುಬಿಡುತ್ತಿದ್ದರು. ಮ್ಯಾಝಿನಿಗೆ ಈ ವಂಚನೆಯು ತಿಳಿಯಲಾಗಿ ಆತನು ವರ್ತಕರ ಈ ನೀಚವ ರ್ತನೆಯನ್ನು ಸರ್ಕಾರದ ಗಮನಕ್ಕೆ ತಂದು ಅನೇಕರನ್ನು ಶಿಕ್ಷೆಗೆ ಒಳಪಡಿ ಸಿದನು. ಮತ್ತು ಹಾಗೆ ಅನಾಥರಾಗಿ ನಿಂತ ಆ ಬಾಲಕರಿಗೆ ಯೋಗ್ಯಜೀ ವನೋಪಾಯವನ್ನು ಕಲ್ಪಿಸುವ ಮತ್ತು ಅವರ ವಿದ್ಯಾಬುದ್ಧಿಗಳನ್ನು ಕುರಿ ತು ಗಮನಿಸುವ ಕಾರ್ಯವೂ ಆತನ ಪಾಲಿಗೇ ಬಿತ್ತು. ಮ್ಯಾಝಿನಿಯು ಗಲ್ಲಾರಲ್ಲಿ ಒಂದು ರಾತ್ರಿಪಾಠಶಾಲೆಯನ್ನು ಸ್ಥಾಪಿಸಿ, ಅದರಲ್ಲಿ ಇಟಲಿ ಭಾ ಷೆಯ ಓದು ಬರಹ ಗಣಿತ ಸಾಮಾನ್ಯಭೂವಿವರಣೆ ಮತ್ತು ಚಿತ್ರಕಲೆಯ ಬಾಲಪಾಠ ಮುಂತಾದುವುಗಳನ್ನು ಕಲಿಸಲು ಪ್ರಾರಂಭಿಸಿದ್ದನು. ಭಾನು

ವಾರ ಸಾಯಂಕಾಲಗಳಲ್ಲಿ ದೊಡ್ಡವರಿಗಾಗಿ ಇಟಲೀದೇಶದ ಚರಿತ್ರೆ, ಇಟಲಿಯ ಮಹಾಪುರುಷರ ಜೀವಿತಗಳು, ಭೌತಿಕತತ್ವಶಾಸ್ತ್ರ ಮುಂತಾದ ವಿಚಾರಗಳನ್ನು ಉಪನ್ಯಾಸರೂಪವಾಗಿ ಬೋಧಿಸತೊಡಗಿದನು. ಹೀಗೆ ಎರಡು ವರ್ಷಕಾಲ ನಡೆಯಿತು.

ಮ್ಯಾಝಿನಿಯು ಜಿನೀವಾವನ್ನು ಬಿಟ್ಟು ಲಂಡನಿಗೆ ಬಂದು ನೆಲೆಸಿದ ಮೇಲೆ ತರುಣ ಇಟಲಿಯ ಕಾರ್ಯವು ಬಹು ಕ್ಷೀಣದೆಸೆಗೆ ಬಂತು. ಅನೇಕರು ಹಿಂದಿನ ನಿಶ್ಚಯವನ್ನು ಮರೆತು ಸರಕಾರದೊಂದಿಗೆ ಒಪ್ಪಂದಮಾಡಿಕೊಂಡು ದೇಶಕಾರ್ಯಕ್ಕೆ ತಿಲಾಂಜಲಿಯನ್ನು ಕೊಟ್ಟಿದ್ದರು. ಈ ಸಂಗತಿಗಳನ್ನು ತಿಳಿದು ಮ್ಯಾಝಿನಿಯು ಬಹು ವ್ಯಸನಾಕ್ರಾಂತನಾದನು. ಆದರೂ ನಿರುತ್ಸಾಹಗೊಂಡು ಕುಳ್ಳಿರಲಿಚ್ಛಿಸಡೆ, ತನ್ನ ಮನಸ್ಸಾಕ್ಷಿಗೆ ವಿರೋಧವಿಲ್ಲದೆ ಸಾಧ್ಯವಿದ್ದ ಮಾರ್ಗಗಳಿಂದಲೆಲ್ಲ ದೇಶಹಿತ ಕಾರ್ಯಗಳನ್ನು ಮಾಡುತ್ತಿದ್ದನು.

ಮಹನೀಯರು ತಾವೇ ಕಷ್ಟಪಡುತ್ತಿದ್ದರೂ, ಪರರ ಕಷ್ಟವನ್ನು ನೀಗಿಸುವಲ್ಲಿ ಹಿಂದೆಮುಂದೆ ನೋಡದೆ ಕಾರ್ಯಪ್ರಯತ್ನಮಾಡಿ ವಿಶ್ವಕುಟುಂಬಿಗಳೆಂಬ ತಮ್ಮ ಅನ್ವರ್ಥನಾಮವನ್ನು ಸಾರ್ಥಕಪಡಿಸಿಕೊಳ್ಳುವರು. ಮ್ಯಾಝಿನಿಯು ಒಂದಾನೊಂದು ಚಳಿಗಾಲದ ಪ್ರಾತಃಕಾಲದಲ್ಲಿ ಸಂಚಾರವಾಗಿ ಹೋಗಿದ್ದಾಗ ನಿರ್ಗತಿಕಳಾದ ಒಬ್ಬ ಸ್ತ್ರೀಯು ಅನ್ನವಸ್ತ್ರಗಳಿಲ್ಲದೆ ಮರಣೋನ್ಮುಖಳಾಗಿದ್ದುದನ್ನು ಕಂಡು ಕನಿಕರಪಟ್ಟು, ತನ್ನ ಮನೆಗೆ ಕರೆತಂದು ಪೋಷಿಸತೊಡಗಿದನು. ಹಾಗೆಯೇ ಕೆಲಕಾಲ ಕಾಪಾಡಿ, ಬೇರೊಬ್ಬನಿಗೆ ಆಕೆಯನ್ನು ಮದುವೆಮಾಡಿಕೊಟ್ಟನು. ಆದರೆ ಹಾಗೆ ಮದುವೆಯಾದವನು, ನಾಲ್ಕಾರು ವರ್ಷಕಾಲ ಅವಳೊಂದಿಗೆ ಸಂಸಾರಮಾಡಿಕೊಂಡಿದ್ದು ತರುವಾಯ ಅವಳನ್ನು ಬಿಟ್ಟುಬಿಡಲು, ಮ್ಯಾಝಿನಿಯು ಆಗಲೂ ಅವಳನ್ನೂ ಅವಳ ಮಕ್ಕಳನ್ನೂ ಕರೆತಂದು ತನ್ನ ಮನೆಯಲ್ಲೇ ಇಟ್ಟುಕೊಂಡು ಅವರ ಅನ್ನಬಟ್ಟೆ ವಿದ್ಯಾಬುದ್ಧಿಗಳ ಯೋಗಕ್ಷೇಮವನ್ನು ಗಮನಿಸುತ್ತಾ ಕಷ್ಟಪಡುತ್ತಿದ್ದನು.

ಮ್ಯಾಝಿನಿಯು ಇಂಗ್ಲೆಂಡಿನಲ್ಲಿದ್ದನಾದರೂ ಇತ್ತ ಇಟಲಿಯಲ್ಲಿ ರಾಷ್ಟ್ರಜಾಗೃತಿಯ ಕಾರ್ಯವು ನಿಲ್ಲದೆ ನಡೆಯುತ್ತಲೇ ಇತ್ತು. ಇಷ್ಟುಕಾಲ

ಆತನು ದೇಶಭ್ರಷ್ಟನಾಗಿ ಹೋಗಿದ್ದರೂ, ಆತನು ಪ್ರಾರಂಭದಲ್ಲಿ ತರುಣ ಇಟಲಿಯ ಮೂಲಕ ಕೊಟ್ಟ ಶಿಕ್ಷಣದ ಪ್ರಭಾವವು ಕೆಲವುಂದಿಯ ಹೃದಯದಲ್ಲಾದರೂ ಇನ್ನೂ ಮಾಸದೆ - ಅಚ್ಚಳಿಯದೆ ಉಜ್ವಲವಾಗಿತ್ತು. ಮ್ಯಾಝಿನಿಯಂತೆಯೇ ಅವರ ಧ್ಯೇಯವೂ ದೇಶಹಿತ ಸಾಧನೆಯೇ ಆಗಿದ್ದರೂ, ಇಬ್ಬರ ಕಾರ್ಯಕ್ರಮವು ಮಾತ್ರ ಒಂದೇ ಆಗಿರಲಿಲ್ಲ. ಪ್ರಜಾಸ್ವಾತಂತ್ರ್ಯ ರಾಜ್ಯಪದ್ಧತಿಯು ಮ್ಯಾಝಿನಿಯ ಧ್ಯೇಯವಾಗಿದ್ದಿತು. ಪೋಪನಾಗಲೀ ಅಥವ ಪಿಡ್‌ಮಾಂಟಿನ ಅರಸನಾಗಲೀ ಇಟಲಿಗೆ ಏಕಮಾತ್ರ ಪ್ರಭುವಾಗಿ ಅವರ ಆಧಿಪತ್ಯದಲ್ಲಿ ತಾವೆಲ್ಲರೂ ಐಕ್ಯವಾಗಿ ಆಸ್ಟ್ರಿಯನ್ನರನ್ನು ದೇಶದಿಂದ ಹೊರಕ್ಕೆ ಹಾಕಿ ಸ್ವಾತಂತ್ರ್ಯವನ್ನು ಪಡೆಯಬೇಕೆಂಬುದು ಅವನ ಪ್ರತಿಪಕ್ಷದವರ ಧ್ಯೇಯವಾಗಿತ್ತು. ಆಸ್ಟ್ರಿಯನ್ನರ ನುರಿತ ಸೈನ್ಯದೊಂದಿಗೆ ಯುದ್ಧಶಿಕ್ಷಣವಿಲ್ಲದ ಪ್ರಜಾಸಮೂಹವು ಯುದ್ಧಕ್ಕೆಂದು ನಿಲ್ಲುವುದು ಎಂದಿಗೂ ಸಾಧ್ಯವಿಲ್ಲದ ಮಾತೆಂದೂ, ಅಂತಹ ಸುಶಿಕ್ಷಿತ ಪ್ರತಿಪಕ್ಷವಿಲ್ಲದೆ ಅವರ ಸಂಗಡ ಸ್ಪರ್ಧಿಸುವುದು ಮಹದಪಾಯಕಾರಿಯೆಂದೂ ಅವರು ನಂಬಿದ್ದರು. ಅಂತಹ ಸೈನ್ಯಸಹಾಯವು ತಮಗೆ ಫ್ರಾನ್ಸಿನಿಂದ ಒದಗುವ ಸಂಭವವಿರುವುದರಿಂದ ಅವರ ಸ್ನೇಹ ಸಹಾನುಭೂತಿಗಳನ್ನು ಸಂಪಾದಿಸತಕ್ಕುದು ಆವಶ್ಯಕವೆಂದೂ ಅವರ ಅಭಿಪ್ರಾಯವಾಗಿದ್ದಿತು.

ಇಟಲಿಯ ಲೋಕಮತವು ಹೀಗೆ ವಿಲಕ್ಷಣ ರೀತಿಯಿಂದ ಇದ್ದ ಸಂದರ್ಭದಲ್ಲೂ ಸಹ ದೂರದೇಶದಲ್ಲಿ ವಾಸಿಸಿದ್ದ ಮ್ಯಾಝಿನಿಯು ಒಂದು ಒಳಸಂಚು ನಡೆಸಿದನು. ಪೋಪನ ಸ್ವಾಧೀನದಲ್ಲಿದ್ದ ಇಟಲಿಯಲ್ಲೂ ಅಲ್ಲದೆ ಏಕಕಾಲದಲ್ಲೇ ಉತ್ತರ ಮತ್ತು ದಕ್ಷಿಣ ಇಟಲಿಗಳಲ್ಲೂ ದಂಗೆ ನಡೆಯಬೇಕೆಂದು ಈ ಒಳಸಂಚಿನ ಮುಖ್ಯೋದ್ದೇಶವಾಗಿತ್ತು. ಸಾಕಾದಷ್ಟು ಜನಸಹಾಯವು ಶೀಘ್ರವಾಗಿ ಒದಗದಿದ್ದುದರಿಂದ ತಾಮಸಕ್ಕೆ ಬಿದ್ದಿದ್ದ ಕಾಲದಲ್ಲೇ - ಈ ಒಳಸಂಚಿನ ವೃತ್ತಾಂತವು ಬಯಲಾಗಿ ಅದು ಒಡೆದು ಹೋಗಲು ಅವಕಾಶವಾಯಿತು. ಇಟಲಿ ಸರ್ಕಾರದಿಂದ ಪ್ರೇರಿತರಾಗಿದ್ದ ಇಂಗ್ಲೀಷ್ ಸರ್ಕಾರದ ಟಪ್ಪಾಲು ಇಲಾಖೆಯವರು ಮ್ಯಾಝಿನಿಯ ಕಾಗದಪತ್ರಗಳನ್ನೆಲ್ಲ ಒಡೆದು ನೋಡುತ್ತ ಬಂದುದರಿಂದ ಈವರೆಗೆ ದಂಗೆಯ ಮುಖ್ಯಕಾರ್ಯಸ್ಥಾನವಿಂಥದೆಂದೂ, ಕಾರ್ಯಕರ್ತೃಗಳಿಂಥವರೆಂದೂ ತಿಳಿದು

ಅವರನ್ನು ಹಿಡಿದು ದಂಗೆಯನ್ನು ಧ್ವಂಸಗೊಳಿಸಲು ಹೊಂಚಿಕೊಂಡಿದ್ದರು. ವೆನಿಸ್ ನಗರದ ಹಡಗುಪಡೆಯ ಮುಖ್ಯಾಧಿಕಾರಿಗಳಾದ ಬೆಂಡಿಯರಾ ಎಂಬಿಬ್ಬರು ಸೋದರರು ಈ ದಂಗೆಗೆ ಮುಖ್ಯಸ್ಥರೆಂಬ ಸಂಗತಿಯು ಮ್ಯಾಝಿನಿಯ ಪತ್ರಗಳಿಂದ ಹೊರಪಟ್ಟುದರಿಂದ, ಅವರು ಕೆಲೆಬ್ರಿಯಾ ಎಂಬ ಸ್ಥಳದಲ್ಲಿ ಹಡಗಿನಿಂದ ಇಳಿದೊಡನೆಯೇ ನೇಪಲ್ಸ್ ಸರಕಾರದವರು ಅವರನ್ನು ಬಂಧಿಸಿ ಗುಂಡಿಟ್ಟು ಸುಟ್ಟುಬಿಟ್ಟರು.

ಪತ್ರಗಳನ್ನು ಒಡೆದು ನೋಡುವ ಸರ್ಕಾರದ ಹೇಯವಾದ ದುರ್ನೀತಿಯನ್ನು ಕುರಿತು ಮ್ಯಾಝಿನಿಯು ಹಲವು ಲೇಖನಗಳನ್ನು ಬರೆದನು. ಆತನ ಪಕ್ಷಪಾತಿಗಳಾಗಿದ್ದ ಹಲವರು ಪಾರ್ಲಿಮೆಂಟ್ ಮೆಂಬರರು 'ಕಾಮನ್ಸ್ ಸಭೆ' ಯಲ್ಲಿ ತೀಕ್ಷ್ಣವಾಗಿ ವಾದವಿವಾದಗಳನ್ನು ನಡೆಸಿದರು. ಅದರಿಂದ ಹೆಚ್ಚಿನ ಪ್ರಯೋಜನವೇನೂ ಆಗದಿದ್ದರೂ, ಮ್ಯಾಝಿನಿಯ ಪವಿತ್ರ ಕಾರ್ಯದ ವಿಷಯದಲ್ಲಿ ಆತನಿಗೆ ಅನೇಕಮಂದಿ ಪ್ರಸಿದ್ಧ ವ್ಯಕ್ತಿಗಳ ಸಹಾನುಭೂತಿ ದೊರೆವಂತಾಯಿತು. ಮುಂದೆ ಮ್ಯಾಝಿನಿಯು ಟಪ್ಪಾಲು ಮೂಲಕ ಪತ್ರವ್ಯವಹಾರವನ್ನು ಕಡಮೆಮಾಡಿ, ಆಪ್ತರಾದ ಇಂಗ್ಲಿಷ್ ಮತ್ತು ಅಮೆರಿಕ ಪ್ರವಾಸಿಗಳ ಮೂಲಕ ಆ ಕೆಲಸ ಮಾಡಲಾರಂಭಿಸಿದನು. ಆತನ ನಿಸ್ವಾರ್ಥ ದೇಶಕಾರ್ಯವನ್ನು ಕಂಡು ಮೆಚ್ಚಿಕೊಂಡ ಕೆಲಮಂದಿ ಸಾಧ್ವಿಯರು 'ಇಟಾಲಿಯನ್ ಬಜಾರ್' ಎಂಬೊಂದು ಪ್ರದರ್ಶನವನ್ನು ನಡೆಯಿಸಿ, ಅವರಿಂದ ಉತ್ಪತ್ತಿಯಾದ ದ್ರವ್ಯವನ್ನೆಲ್ಲ ಆತನ ಪಾಠಶಾಲಾ ಮತ್ತು ರಾಜಕೀಯ ಕಾರ್ಯಗಳ ವೆಚ್ಚಕ್ಕೆಂದು ಒದಗಿಸಿದರು. ಈ ಸುಸಮಯವನ್ನು ಸದುಪಯೋಗಗೊಳಿಸಿಕೊಂಡು ಆತನು ಪ್ರಜಾಪಕ್ಷದ ಮತವನ್ನು ಅಭಿವೃದ್ಧಿಗೊಳಿಸಲು ಸಹಕರಿಸುವಂತಹ 'ಅಂತರ ರಾಷ್ಟ್ರೀಯ ಪ್ರಜಾಸಂಘ' ವೆಂಬ ಒಂದು ಸಂಸ್ಥೆಯನ್ನು ಏರ್ಪಡಿಸಿದನು. ಇದಕ್ಕೆ ಬೇರೆ ಬೇರೆ ದೇಶಗಳ ಹಲವುಮಂದಿ ಸ್ತ್ರೀಪುರುಷರು ಸದಸ್ಯರಾಗಿ ಸೇರಿದರು. ಹೀಗೆ ಇಂಗ್ಲೆಂಡಿನಲ್ಲಿದ್ದರೂ, ಮ್ಯಾಝಿನಿಯು ತನ್ನ ಆತ್ಮೋದ್ದೇಶವನ್ನು ಮರೆಯದೆ, ತನ್ನಾ ಪವಿತ್ರೋದ್ಯಮವನ್ನು ಸಾಗಿಸಿಯೇ ಇದ್ದನು. 'ಯತ್ನೇಕೃತೆ ಯದಿ ನಸಿದ್ಧ್ಯತಿ ಕೋತ್ರದೋಷಃ ?'



ಅಧ್ಯಾಯ ೫ "ವಿಫಲಪ್ರಯತ್ನ"

'ಅಂತರರಾಷ್ಟ್ರೀಯ ಪ್ರಜಾಸಂಘ'ವು ಸ್ಥಾಪನೆಯಾದ ತರುವಾಯ ಮ್ಯಾಝಿನಿಯ ಕೆಲಸಗಳು ಒಂದಕ್ಕೆ ನಾಲ್ಕರಷ್ಟಾದುವು. ಪತ್ರವ್ಯವಹಾರ, ಗ್ರಂಥಲೇಖನ, ಸ್ನೇಹಿತರೊಂದಿಗೆ ವಿಷಯಚರ್ಚೆಗಳು ಇವೆಲ್ಲವುಗಳಿಗಿಂತಲೂ ಹೆಚ್ಚಾಗಿ ದ್ರವ್ಯಾಭಾವ ಮುಂತಾದುವುಗಳ ನಿರಂತರಚಿಂತೆ ಇವು ಆತನ ಪ್ರಕೃತಿಯನ್ನೇ ಕೆಡಿಸಿಬಿಟ್ಟಿದ್ದುವು. ಆದರೆ ಈ ಕಷ್ಟತಾಪತ್ರಯಗಳಿಗೆಲ್ಲ ಅಂಜಿ ತನ್ನ ಉದ್ಯಮವನ್ನು ಬಿಡುವ ಪ್ರಕೃತಿಯೇ ಆತನದು?

೧೮೪೬ನೆಯ ಸಂವತ್ಸರದಲ್ಲಿ, ಇಟಲಿಯ ರಾಜಕಾರಣದಲ್ಲಿ ಮತ್ತೊಂದು ವಿಶೇಷಸಂಗತಿ ನಡೆಯಿತು. ಪಿಯೋನೋನೋ ಎಂಬಾತನು ಪೋಪ್ ಪದವಿಯನ್ನು ಪಡೆದನು. ಆತನು ಸ್ವಾಭಾವಿಕವಾಗಿಯೇ ಸಾತ್ವಿಕನಾಗಿದ್ದುದರಿಂದ ನೊಂದ ಇಟಲಿಗೆ ಆತನಿಂದ ವಿಶೇಷ ಉಪಕಾರವಾಗಬಹುದೆಂದು ಎಲ್ಲರೂ ತಿಳಿದಿದ್ದರು. ಆತನು ಸರ್ವಾಧಿಪತ್ಯವನ್ನುವಹಿಸಿ ಪಿಡ್‌ಮಾಂಟಿನ ಛಾರ್ಲ್ಸ್ ಆಲ್ಬರ್ಟನು ಸೇನಾಪತಿಯಾದರೆ ಇಟಲಿಯ ಪ್ರಜಾಪಕ್ಷಕ್ಕೆ ಕ್ಷೇಮವುಂಟಾಗದಿರದೆಂದು ರಾಷ್ಟ್ರಪಕ್ಷದವರು ಸಹ ಯೋಚಿಸಿದ್ದರು. ಆ ವಿಷಯದಲ್ಲಿ ಪೋಪನ ಅಭಿಪ್ರಾಯವನ್ನು ತಿಳಿಯಬೇಕೆಂಬ ಅಪೇಕ್ಷೆಯಿಂದ ಮ್ಯಾಝಿನಿಯು ಆತನಿಗೊಂದು ಅನಾವರಣಪತ್ರವನ್ನು ಕಳುಹಿಸಿದನು ಅದರಲ್ಲಿ-'ಇಟಲಿಯಲ್ಲಿ ಏಕರಾಷ್ಟ್ರೀಯತೆಯನ್ನು ವರ್ಧಿಸಿ, ಪ್ರಜಾಹಿತಕರವಾದ ಧಾರ್ಮಿಕರಾಜ್ಯಭಾರವನ್ನು ನೆಲೆಗೊಳಿಸಿ, ಇಟಲಿಯಿಂದ ಯೂರೋಪಿನಲ್ಲಿ ಶಾಂತತಾರಕ್ಷಣಮಾಡಿ ಕೀರ್ತಿಯನ್ನು ಸಂಪಾದಿಸು' ಎಂಬ ಸಲಹೆಯಿತ್ತು. ಈ ಕೆಲಸವು ಆತನಿಂದ ಸಾಗದು ಎಂಬ ವಿಷಯದಲ್ಲಿ ಮ್ಯಾಝಿನಿಗೆ ಸಂದೇಹವಿರಲಿಲ್ಲ. ಪೋಪನು ಮ್ಯಾಝಿನಿಯ ಪತ್ರವನ್ನು ಕಂಡು ಗಾಬರಿಗೊಂಡು, ಮುಂದೇನುಗತಿಯೆಂದು ಪಿಡ್‌ಮಾಂಟ್, ಟಸ್ಕನಿ ಮುಂತಾದ ಪ್ರಾಂತಾಧಿಪರೊಂದಿಗೆ ಪತ್ರವ್ಯವಹಾರವನ್ನಿಟ್ಟು ವಿಶೇಷ ಜಾಗರೂಕತೆಯಿಂದ ಇರತೊಡಗಿದನು.

ಆದರೆ ಲೋಕವಿಚಾರವು ನಿಶ್ಚಲವಾಗಿ ನಿಲ್ಲಲಾರದಾಗಿತ್ತು. ೧೮೪೮ರಲ್ಲಿ ಯೂರೋಪು ಖಂಡದಲ್ಲೇ ರಾಜ್ಯಕ್ರಾಂತಿಯಾವರಿಸಿತು. ಇಟಲಿಯು

ಕೆಲವು ನಗರಗಳಲ್ಲಿ ದಂಗೆಯಾಯಿತು. ಸಿಸಿಲಿ ದ್ವೀಪವೂ ದಂಗೆಯೆದ್ದು ಅದು ನೇಪಲ್ಸಿನಿಂದ ಬೇರೆಯಾಗಿ ಸ್ವತಂತ್ರವಾಯಿತು. ಟಸ್ಕನಿ, ಪಿಡ್ಮಾಂಟ್, ಲೊಂಬಾರ್ಡಿ, ರೋಂ ಮುಂತಾದ ಪ್ರಾಂತಗಳವರೂ ಆಸ್ಟ್ರಿಯಾದವರಮೇಲೆ ಯುದ್ಧಕ್ಕೆ ಸಿದ್ಧರಾದರು. ಆಸ್ಟ್ರಿಯಾದ ರಾಜಧಾನಿಯಾದ ವಿಯನ್ನಾ ನಗರದಲ್ಲೂ ದಂಗೆಯಾಯಿತು. ಈ ಸ್ವಾತಂತ್ರ್ಯ ಯುದ್ಧದಲ್ಲಿ, ಅವರಿವರೆನ್ನದೆ ಅರಸರು, ಪಾದ್ರಿಗಳು, ಸರದಾರರು, ಸರ್ಕಾರಿಯ ನೌಕರರು, ವಿದ್ಯಾರ್ಥಿಗಳು, ವಿವಿಧ ಕೆಲಸಗಾರರು ಮುಂತಾಗಿ ಸಮಸ್ತರೂ ಸೇರಿದ್ದರು.

ತರುಣ ಇಟಲಿಯ ಮೂಲಕ ನಡೆದ ಲೋಕಶಿಕ್ಷೆಯಿಂದಲೇ ಇಷ್ಟು ಕಾರ್ಯವೂ ನಡೆದುದನ್ನು ಕಂಡು ಮ್ಯಾಝಿನಿಗೆ ಪರಮಾನಂದವಾಯಿತು. ತನ್ನ ಉದ್ದೇಶದಂತೆ ಇಟಲಿಯು ಜಾಗ್ರತವಾದುದನ್ನು ಕಣ್ಣಾರೆ ನೋಡಬೇಕೆಂದು ಆತನು ತನ್ನ ಮಾತೃಭೂಮಿಗೆ ಬರಲು ಸಂಕಲ್ಪಿಸಿದನು. ತಮಗೋಸ್ಕರ ವಿಶೇಷ ದುಃಖಸಹನಮಾಡಿ, ಪರದೇಶದಲ್ಲಿದ್ದು ಕಷ್ಟಪಟ್ಟಿದ್ದ ಆತನನ್ನು ಸ್ವಾಗತೀಕರಿಸುವಲ್ಲಿ ಸಮಸ್ತರೂ ಒಂದಾದರು. ಮ್ಯಾಝಿನಿಯು ಆ ಕಾಲದಲ್ಲಿ ಮಾಡಿದ ಹಿತಬೋಧನೆಯು ಎಲ್ಲರಿಗೂ ತೃಪ್ತಿಕರವಾಗಿತ್ತು.—'ದೇಶದಲ್ಲಿ ರಾಜಸತ್ತೆಯಿರಬೇಕೇ ಪ್ರಜಾಸತ್ತೆಯು ಸ್ಥಾಪಿಸಲ್ಪಡಬೇಕೇ ಎಂಬುದನ್ನು ಇಟಲಿಯ ಸಂಯುಕ್ತ ರಾಷ್ಟ್ರವು ನಿರ್ಣಯಿಸಲಿ. ಈಗ ಎಲ್ಲರೂ ತಮ್ಮ ತಮ್ಮ ಮತಭೇದಗಳನ್ನು ಬದಿಗಿಟ್ಟು ಮೊದಲು ಅದರ ಐಕ್ಯಕ್ಕೂ ಸ್ವಾತಂತ್ರ್ಯಸಾಧನೆಗೂ ತಮ್ಮ ತನುಮನಧನಗಳನ್ನರ್ಪಿಸಿ ಕಷ್ಟಪಡಲು ಸಿದ್ಧರಾಗಬೇಕಾದುದೊಂದು ಪ್ರಥಮ ಕರ್ತವ್ಯ'ವೆಂದು ಹೇಳಿದನು.

ಸ್ವಾತಂತ್ರ್ಯ ಚಳವಳಿಯ ಪ್ರಾಣಸ್ವರೂಪನಾಗಿದ್ದ ಮ್ಯಾಝಿನಿಯೇ ಬಂದು ಇಟಲಿಯಲ್ಲಿ ನಿಂತುದು ವಿದ್ಯಾರ್ಥಿಗಳಿಗೂ ಸಾಮಾನ್ಯ ಪ್ರಜೆಗಳಿಗೂ ಮಹದುತ್ಸಾಹಕರವಾಗಿತ್ತು. ೧೮೩೩ನೇ ಸಂ॥ ದಲ್ಲಿ ಆತನಮೇಲೆ ಹೊರಟಿದ್ದ ದೇಹಾಂತ ಶಿಕ್ಷೆಯ ತೀರ್ಪು ಇನ್ನೂ ರದ್ದಾಗದಿದ್ದುದರಿಂದ ಮ್ಯಾಝಿನಿಯು ಪಿಡ್ಮಾಂಟಿಗೆ ಹೋಗದೆ ಮಾಯಲ್ಸ್ ನಗರದಲ್ಲೇ ಇದ್ದುಕೊಂಡು ಇಟಲಿಯ ಕಾರ್ಯಭಾರವನ್ನು ನಡೆಯಿಸತೊಡಗಿದನು. ದೇಶಸೇವೆಗಾಗಿ

ಸ್ವಯಂಸೇವಕರಾಗಲು ಸಹಸ್ರಾರು ಜನರು ಮುಂದೆ ಬಂದರು. ಮ್ಯಾಜಿನಿಯ ಅಭಿಪ್ರಾಯವು ದಿನದಿನಕ್ಕೆ ಜನಮಾನ್ಯವಾಗುತ್ತಿದ್ದುದನ್ನು ಕಂಡು ಛಾರ್ಲ್ಸ ಆಲ್ಬರ್ಟನು ಗಾಬರಿಯಾಗಿ, ಆತನೊಂದಿಗೆ ಪತ್ರವ್ಯವಹಾರಕ್ಕೆ ಪ್ರಾರಂಭಿಸಿದನು.—'ನಿನ್ನ ಪ್ರೋತ್ಸಾಹದಿಂದ ಲೊಂಬಾರ್ಡಿಯ ಜನರು ನನ್ನ ಆಧಿಪತ್ಯಕ್ಕೊಳಪಡುವಂತೆ ಆದರೆ, ನನ್ನ ರಾಜ್ಯ ವ್ಯವಸ್ಥೆಯಲ್ಲಿ ನಿನ್ನ ಇಚ್ಛಾನುಸಾರವಾದ ಸುಧಾರಣೆಯನ್ನು ಮಾಡಲು ಸಿದ್ಧನಿದ್ದೇನೆ' ಎಂದು ತಿಳಿಸಿದನು. ಆದರೆ ಮ್ಯಾಝಿನಿಯು ಅಷ್ಟಕ್ಕೇ ಒಪ್ಪಲಿಲ್ಲ.—'ಇಟಲಿಯ ಸಂಸ್ಥಾನಗಳನ್ನೆಲ್ಲಾ ಕಿತ್ತುಹಾಕಿ, ರಾಜಸತ್ತೆಯನ್ನು ನಿರ್ಮೂಲಗೊಳಿಸಿ, ಪ್ರಜಾಸತ್ತಾಸ್ಥಾಪನೆಗೆ ನೀನು ಮುಂದಾಳಾಗಿ ನಿಲ್ಲಲು (ನೀನು) ಸಾರ್ವಜನಿಕವಾಗಿ ಒಪ್ಪುವೆಯಾದರೆ, ನಿನ್ನ ಇಚ್ಛೆಯಂತೆ ಆ ಕಾರ್ಯದಲ್ಲಿ ಪ್ರವರ್ತಿಸುವೆನು' ಎಂದು ಪ್ರತ್ಯುತ್ತರವಿತ್ತನು. ಅದು ಅವನಿಗೆ ಸಮ್ಮತವಾಗಲಿಲ್ಲವಾದುದರಿಂದ ಮ್ಯಾಝಿನಿಯ ಪತ್ರಕ್ಕೆ ಪ್ರತ್ಯುತ್ತರವನ್ನೇ ಬರೆಯದೆ ಮೌನವಾಗಿದ್ದುಬಿಟ್ಟನು.

ಪಿಡ್‌ಮಾಂಟ್, ರೋಂ, ನೇಪಲ್ಸ್ ಪ್ರಾಂತಗಳ ಅರಸರು ತಾವು ಆಸ್ಟ್ರಿಯನ್ನರಮೇಲೆ ಹೂಡಿದ್ದ ಯುದ್ಧಕಾರ್ಯವನ್ನು ಬಿಟ್ಟು ತಮ್ಮ ಸ್ವಸ್ಥಾನಗಳಿಗೆ ಹೊರಟುಹೋದರು. ಯುದ್ಧಶಿಕ್ಷಣಹೊಂದಿ ಪ್ರಬಲವಾಗಿದ್ದ ಆಸ್ಟ್ರಿಯಾದ ಸೈನ್ಯದೊಂದಿಗೆ ಹೋರಾಡಿ ಸೋತು, ಸ್ವಯಂಸೇವಕ ಸೇನೆಯು ಹಿಂದು ಹಿಂದಕ್ಕೆ ಸರಿಯತೊಡಗಿತು. ಆದರೂ, ಅವರೆಲ್ಲರೂ ಒಮ್ಮನಸ್ಕತೆಯಿಂದ ವೈರಿಗಳಮೇಲೆ ಏರಿಹೋದರೆ ಜಯವು ಸಾಧ್ಯವೆಂಬ ವಿಷಯದಲ್ಲಿ ಮ್ಯಾಝಿನಿಗೆ ಸಂದೇಹವಿರಲಿಲ್ಲ. ದಿನದಿನಕ್ಕೆ ಅಭಿವೃದ್ಧಿಗೆ ಬರುತ್ತಿದ್ದ ಪ್ರಜಾಭಿಪ್ರಾಯದ ಬಲವನ್ನು ಕಂಡು, ಅರಸರು ತಮ್ಮ ರಾಜಧಾನಿಗಳಿಗೆ ಬರಲು ಅಂಜುತ್ತಿದ್ದರು. ಎಷ್ಟುಬಾರಿ ಆಹ್ವಾನಿಸಿದರೂ ಪೋಪನು ರೋಂ ನಗರಕ್ಕೆ ಬಾರದಿದ್ದುದರಿಂದ ಅಲ್ಲಿಯ ಪ್ರಜೆಗಳು ಮ್ಯಾಝಿನಿಯ ಸಲಹೆಯನ್ನನುಸರಿಸಿ ಒಂದು ಪ್ರಜಾಪ್ರತಿನಿಧಿಸಭೆಯನ್ನು ಏರ್ಪಡಿಸಿದ್ದಲ್ಲದೆ ೧೮೪೯ನೆಯ ಫೆಬ್ರುವರಿಯಲ್ಲಿ ಮಹನೀಯನಾದ ಮ್ಯಾಝಿನಿಯನ್ನು ರೋಂ ನಗರಕ್ಕೆ ಆಹ್ವಾನಿಸಿ, ರೋಮಿನ ನಾಗರಿಕನೆಂದು ಬಹುಮಾನಮಾಡಿ, ತಮ್ಮ ಮಂತ್ರಿಮಂಡಲದೊಳಗೆ ಸೇರಿಸಿಕೊಂಡರು. ಒಡನೆ ಆತನು ವಿಶೇಷ ಉತ್ಸಾಹ

ದಿಂದ ಕಾರ್ಯತತ್ಪರನಾಗಿ ಹತ್ತುಸಾವಿರಮಂದಿ ಸ್ವಯಂಸೇವಕರ ಸೈನ್ಯವನ್ನು ಸಿದ್ಧಗೊಳಿಸಿ ಉತ್ತರದ ರಣರಂಗಕ್ಕೆ ಸಹಾಯವಾಗಿ ಕಳುಹಿಸಿದನು, ಆದರೆ ಆ ಸೈನ್ಯವು ಹೋಗಿ ರಣಕ್ಷೇತ್ರವನ್ನು ಸೇರುವುದರೊಳಗಾಗಿ ಆಸ್ಟ್ರಿಯನ್ನರ ಕೈ ಮೇಲಾಗಿ ಇಟಲಿಯ ಸೈನ್ಯಕ್ಕೆ ವಿಶೇಷ ಅಪಜಯವುಂಟಾಗಿತ್ತು.

ಉತ್ತರದ ರಣಕ್ಷೇತ್ರದಲ್ಲಿ ಜಯಹೊಂದಿದ ಆಸ್ಟ್ರಿಯಾ ಸೈನ್ಯವು ಇತರ ಪ್ರಾಂತಗಳಮೇಲೂ ಏರಿಬರಬಹುದೆಂಬ ಭೀತಿಯಿದ್ದುದರಿಂದ ಪ್ರತಿನಿಧಿಸಭೆಯವರು ಹೆಚ್ಚು ಜಾಗರೂಕತೆಯಿಂದ ತಮ್ಮ ಶಕ್ತಿಯನ್ನು ಬಲಪಡಿಸಿಕೊಳ್ಳುವುದು ಅತ್ಯಾವಶ್ಯಕವಾಗಿತ್ತು. ಮ್ಯಾಝಿನಿಯು, ರಾಜ್ಯದ ಸರ್ವಾಧಿಕಾರಿಯಾಗಿ ಆರಿಸಲ್ಪಟ್ಟನು. ಬಹುಕಾಲಗಳಿಂದ ಮಾಡುತ್ತ ಬಂದ ಅವಿಶ್ರಾಂತ ಪರಿಶ್ರಮವು ಅಂದು ಸಫಲಗೊಂಡಿತು. ಈ ಸರ್ವಾಧಿಕಾರವೂ, ಪ್ರಜಾಪ್ರತಿನಿಧಿ ಪ್ರಭುತ್ವವೂ ಬಹುಕಾಲ ಜೀವಿತವಾಗಲಿಲ್ಲವಾದರೂ, ಅಷ್ಟರಲ್ಲೇ ಮ್ಯಾಝಿನಿಯು ತನ್ನ ಧ್ಯೇಯದಂತಹ ರಾಜ್ಯಪದ್ಧತಿಯನ್ನು ನಡೆಯಿಸುವ ಮಾದರಿಯನ್ನು ತೋರಿಸಿಬಿಟ್ಟನು. ಪ್ರಾರಂಭಕ್ಕೆ ಮುದ್ರಣ ಸ್ವಾತಂತ್ರ್ಯವನ್ನು ಪ್ರಸಾದಿಸಿದನು. ಕ್ಯಾಥೋಲಿಕ್ ಪ್ರಾಟೆಸ್ಟೆಂಟು ಎಂಬ ಭೇದವಿಲ್ಲದೆ, ಸರ್ವರೂ ಏಕಸಮವಾಗಿ ಧಾರ್ಮಿಕ ಅಥವಾ ರಾಜಕೀಯ ಕಾರ್ಯಗಳಲ್ಲಿ ಪ್ರವೇಶಿಸಬಹುದಾಗಿತ್ತು. ಪೋಪನು ಸಂಧಿಗೆ ಬರಲು ಸಮ್ಮತಿಸಿದ್ದರೆ, ಮ್ಯಾಝಿನಿಯು ಕೊನೆಯವರೆಗೂ ಸಿದ್ಧನಾಗಿದ್ದನು. ಆದರೆ ಅದು ಸಿದ್ಧಿಸಲಿಲ್ಲ.

ಕೇವಲ ನಿಸ್ವಾರ್ಥತೆಯಿಂದಲೂ ಲೋಕಸೇವಾಮಹೋದ್ದೇಶದಿಂದಲೂ ಪ್ರಾರಂಭಿಸಿದ ಮ್ಯಾಝಿನಿಯ ಕೆಲಸಗಳು ಸರ್ವರ ಮನಸ್ಸಿಗೂ ತೃಪ್ತಿಯನ್ನುಂಟುಮಾಡಿದ್ದುವು. ಆತನ ವಿಷಯದಲ್ಲಿ ಸರ್ವರಿಗೂ ನಿಷ್ಕಲ್ಮಷ ಪ್ರೀತಿವಿಶ್ವಾಸಗಳಿದ್ದು, ಆತನು ಹೇಳಿದ ಕಾರ್ಯವನ್ನು ಉಚ್ಚನೀಚವೆಂಬಂತಿಲ್ಲದೆ ತಲೆಬಾಗಿ ನಡೆಯಿಸುತ್ತಿದ್ದರು. ಇಟಲಿಯ ರಾಜ್ಯದ ಸರ್ವಾಧಿಕಾರಿಯಾದರೂ ಆತನೊಂದು ಸಣ್ಣಮನೆಯಲ್ಲಿ ವಾಸಿಸುತ್ತ, ದೊಡ್ಡವರು ಚಿಕ್ಕವರೆಂಬ ಭೇದವಿಲ್ಲದೆ ಸರ್ವಸುಲಭನಾಗಿದ್ದನು. ಆತನ ಆಹಾರ

ಉಡುವು ಮುಂತಾದ ಯಾವುದರಲ್ಲೂ ಆಡಂಬರವಿಲ್ಲದೆ ಆ ಮಹನೀಯನು ತನ್ನ ಆ ದೊಡ್ಡ ಅಧಿಕಾರಕ್ಕೆ ಲಭ್ಯವಾಗುತ್ತಿದ್ದ ಸಂಬಳವನ್ನೆಲ್ಲವನ್ನೂ ಪರೋಪಕಾರಕ್ಕಾಗಿಯೇ ವೆಚ್ಚಮಾಡುತ್ತಿದ್ದನು. ಆತನ ದಯಾಸ್ವಭಾವವು ಅನುಕರಣೀಯವಾದುದು. ಸೈನ್ಯದಲ್ಲಿ ಅಪರಾಧಮಾಡಿದನೆಂದು ಒಬ್ಬ ಸಿಪಾಯಿಗೆ ಮರಣದಂಡನೆಯನ್ನು ವಿಧಿಸಿರಲು, ಮ್ಯಾಝಿನಿಯು ಕೊನೆಯವರೆಗೆ ಅದು ನೆರವೇರದಂತೆ ತಡೆದು ಅವನ ಪ್ರಾಣರಕ್ಷಣೆಮಾಡಿದನು.

ಮೇಲ್ಕಂಡಂತೆ ಪ್ರಾರಂಭವಾದ ಪ್ರಜಾಸತ್ತಾತ್ಮಕ ರಾಜ್ಯಭಾರವು ಬಹುಕಾಲ ನಡೆಯಲಿಲ್ಲ. ಅದು ಶೀಘ್ರವೇ ನಾಶವಾಗುವುದೆಂದು ಮ್ಯಾಝಿನಿಯು ತಿಳಿದಿದ್ದನು. ಆದರೆ ಅದು ಆತನು ಎಣಿಸಿದ್ದಂತೆ ಆಸ್ಟ್ರಿಯನ್ನರಿಂದಲಲ್ಲ - ಫ್ರೆಂಚರಿಂದ ಹಾಳಾಯಿತು. ಫ್ರಾನ್ಸಿಗೆ ನೂತನವಾಗಿ ಪ್ರಭುವಾದ ಲೂಯಿ ನೆಪೋಲಿಯನ್ ಎಂಬುವನು ಓಡಿನೋ ಎಂಬ ಸೇನಾಪತಿಯೊಂದಿಗೆ ಈ ಚಿಕ್ಕ ರಾಜ್ಯಕ್ಕೆ ಸಹಾಯಮಾಡಲೋಸುಗವೆಂದು ಒಂದು ಸೈನ್ಯವನ್ನು ಕಳುಹಿಸಿದನು. ಆದರೆ ಅದರ ಮುಖ್ಯೋದ್ದೇಶವು ಅದನ್ನು ಕೊನೆಗಾಣಿಸಬೇಕೆಂಬುದಾಗಿತ್ತು. ಮ್ಯಾಝಿನಿಯ ಸ್ವಯಂ ಸೇವಕ ಸೈನ್ಯವು ಮೊದಲನೆಯಬಾರಿ ಅದರ ಸಂಗಡ ಕಾದಿ ಹೊಡೆದಟ್ಟಿದರು. ಓಡಿನೋನು ಕಪಟದಿಂದ ಮ್ಯಾಝಿನಿಯೊಂದಿಗೆ ಸಂಧಿಗಾಗಿ ರಾಯಭಾರಿಯನ್ನು ಕಳುಹಿ - ಇತ್ತ ಹೆಚ್ಚು ಸೈನ್ಯಕ್ಕಾಗಿ ತನ್ನ ದೇಶಕ್ಕೆ ಬರೆದಿದ್ದನು. ಸೈನ್ಯ ಸಹಾಯವು ಬಂದೊಡನೆಯೇ ರೋಂನಗರಕ್ಕೆ ಮುತ್ತಿಗೆಹಾಕಿದನು. ಮುತ್ತಿಗೆಯು ಒಂದು ತಿಂಗಳ ಕಾಲ ನಡೆಯಿತು. ಸ್ವತಂತ್ರರಾಜ್ಯದ ಪ್ರಜೆಯು ಎಂದೂ ಯಾರಿಗೂ ಶರಣುಹೋಗಬಾರರೆಂದೂ, ರೋಂನಗರದಲ್ಲಿ ಒಂದೇ ಒಂದು ಮನುಷ್ಯ ಪ್ರಾಣಿಯುಳಿದಿರುವವರೆಗೂ ಹೊಡೆದಾಡಲು ಸಿದ್ಧವಾಗಿರಬೇಕೆಂದೂ ಮ್ಯಾಝಿನಿಯ ನಿಶ್ಚಯವಿತ್ತು. ನಗರವನ್ನು ಕಾಪಾಡಿಕೊಳ್ಳಲು ಸಕಲ ಅಂತಸ್ತಿನ ನಿವಾಸಿಗಳೂ ಬಂದರು. ಅವರ ಕಷ್ಟನಷ್ಟಗಳೂ, ದುಃಖದುರ್ದೆಶೆಗಳೂ ಅವರ್ಣನೀಯ. ಆದರೂ ಎಲ್ಲವನ್ನೂ ಸಹನೆಯಿಂದ ಅನುಭವಿಸಿದರು. ಕೊನೆಗೂ ರಾಜ್ಯವನ್ನು ಉಳಿಸಿಕೊಳ್ಳಲಾಗಲಿಲ್ಲ. ಪಟ್ಟಣವನ್ನು ಶತ್ರುಗಳಿಗೆ ಬಿಟ್ಟುಕೊಟ್ಟು ಬದುಕಬೇಕೆಂದು ಒಂದುಸಲಹೆ ಬಂತು. ಮ್ಯಾಝಿನಿಯೂ ಸೇನಾಪತಿಯಾದ ಗ್ಯಾರಿಬಾಲ್ಡಿಯೂ ಅದಕ್ಕೆ ಒಪ್ಪ

ಲಿಲ್ಲ. ಸೇನಾಧೀಶನು ತನ್ನ ಮೂರುಸಾವಿರ ಸೇನೆಯೊಂದಿಗೆ ಶತ್ರುದಳದ ಮಧ್ಯೆ ನುಗ್ಗಿ ದಾರಿಮಾಡಿಕೊಂಡು ಹೊರಟುಹೋದನು. ರೋಂಪಟ್ಟಣವು ಫ್ರೆಂಚ್ ಸೈನ್ಯದ ವಶವಾಯಿತು. ಹಾಗೆ ರಾಜಧಾನಿಯು ಶತ್ರುವಶವಾದರೂ, ಪ್ರಧಾನಶತ್ರುವೆಂದು ಪರಿಗಣಿಸಲ್ಪಟ್ಟಿದ್ದ ಆತನು ಆ ಊರಲ್ಲೇ ಇದ್ದು ನಿರ್ಭಯದಿಂದ ರಾಜಬೀದಿಗಳಲ್ಲಿ ತಿರುಗಾಡಿಕೊಂಡಿದ್ದನು. ಆತನನ್ನು ಯಾರೂ ಯಾವ ಬಗೆಯಿಂದಲೂ ತೊಂದರೆಪಡಿಸಲಿಲ್ಲ. ಹೀಗೆ ಅಲ್ಲಿ ಕೆಲವು ದಿನಗಳಿದ್ದು ತರುವಾಯ ಜಿನೀವಾನಗರಕ್ಕೆ ಪ್ರಯಾಣಮಾಡಿದನು. ಆದರೆ ಆತನಿಗೆ ಅಲ್ಲೂ ಸಮಾಧಾನದಿಂದ ವಾಸಿಸಿರಲು ಅವಕಾಶದೊರೆಯಲಿಲ್ಲ. ನೆರೆಯ ಸರಕಾರಗಳವರ ಒತ್ತಾಯಕ್ಕೊಳಪಟ್ಟು ಸ್ವಿಸ್ ಸರಕಾರದವರು ತಮ್ಮ ದೇಶದಿಂದ ಹೊರಟುಹೋಗುವಂತೆ ಆತನಿಗೆ ಆಜ್ಞೆಮಾಡಿದರು. ಮ್ಯಾಝಿನಿಯು ಪುನಃ ಲಂಡನ್‌ನಗರವನ್ನೇ ಸೇರಿದನು.---ಸ್ವದೇಶದಲ್ಲಿ ಸ್ವಜನರ ಜೊತೆಗೆ ಇದ್ದು ಬಾಳಲು ಪ್ರಾಪ್ತಿಯಿಲ್ಲದ ಆ ದೇಶಾಭಿಮಾನಿಯು,- 'ಇಟಲಿಯು ತನ್ನ ಮಾತೃಭೂಮಿಯಾದರೂ ಇಂಗ್ಲೆಂಡು ತನ್ನ ಪ್ರೀತಿಯಮನೆ' ಎಂದು ಹೇಳುತ್ತಾ ಅಲ್ಲಿಯ ಜನಗಳನ್ನೇ ಹೆಚ್ಚು ಹೆಚ್ಚಾಗಿ ಪ್ರೀತಿಸತೊಡಗಿದನು.

ಮ್ಯಾಝಿನಿಗೆ ಗೃಹಸೌಖ್ಯವಿರಲಿಲ್ಲವೆಂದು ಹೇಳಬೇಕಾದುದಿಲ್ಲ. ಈಚೆಗೆ ೧೮೪೮ರಲ್ಲಿ ಆತನ ತಂದೆಯೂ ೧೮೫೨ರಲ್ಲಿ ಆತನ ತಾಯಿಯೂ ತೀರಿಹೋದರು. ತನ್ನ ತಾಯಿಯಮೇಲೆ ಆತನಿಗೆ ಅಪರಿಮಿತ ಪ್ರೇಮವಿತ್ತು. ತನ್ನ ದೇಶಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟು, ತರುವಾಯ ತನ್ನ ತಾಯಿಯ ಪಾದಕ್ಕೆ ಬೀಳಬೇಕೆಂದು ಆತನಿಗೆ ಬಲವಾದ ಆಸೆಯಿತ್ತು. ಆಕೆಗಾದರೂ ತನ್ನ ಮಗನು ಸಾರ್ಥಕವಾದ ಒಂದು ಉದ್ಯೋಗದಲ್ಲಿ ತೊಡಗಿ ಜಗನ್ಮಾನ್ಯನಾಗುತ್ತಿರುವನೆಂಬ ವಿಷಯವಾಗಿ ಸಮಾಧಾನವಿತ್ತು. ತಾನು ಸಾಯುವಾಗ್ಗೆ, ವರ್ಷಕ್ಕೆ ೧೬೦ ಪೌಂಡುಗಳ ಬಡ್ಡಿ ಬರಬಹುದಾದಷ್ಟು ಆಸ್ತಿಯನ್ನು ಆತನ ಹೆಸರಿನಲ್ಲಿಟ್ಟಿದ್ದಳು. ಆತನೂ ಲೇಖನಾದಿಗಳ ಮೂಲಕ ಸ್ವಲ್ಪ ಸಂಪಾದನೆಮಾಡಿಕೊಂಡು, ಬಹು ಮಿತವಾಗಿ ಖರ್ಚುಮಾಡಿಕೊಂಡು ಜೀವಿಸುತ್ತಾ, ಎಲ್ಲವನ್ನೂ ಇಟಲಿಯ ಬಡಬಾಲಕರ ವಿದ್ಯಾಭ್ಯಾಸ

ಕ್ಕಾಗಿಯೂ ನಿರಾಶ್ರಿತರಿಗಾಗಿಯೂ ವಿನಿಯೋಗಿಸುತ್ತಿದ್ದನು.

ಎಲ್ಲಿದ್ದರೂ ಏನುಕೆಲಸ ಮಾಡುತ್ತಿದ್ದರೂ ತನ್ನ ಮಾತೃದೇಶವಾದ ಇಟಲಿಗೆ ಕ್ಷೇಮವನ್ನುಂಟುಮಾಡುವ ಪರಿಯೇನು ಎಂಬುದೇ ಆತನ ಮುಖ್ಯ ಚಿಂತೆಯಾಗಿತ್ತು. ೧೮೫೧ರಲ್ಲಿ ಇಟಲಿಯ ಮಿತ್ರಸಂಘವೆಂಬೊಂದು ಸಂಸ್ಥೆಯನ್ನೇರ್ಪಡಿಸಿ ಅದರ ಮೂಲಕ ಲೋಕಮತವನ್ನು ಇಟಲಿಗೆ ಸಾಧಕವಾಗುವಂತೆ ಸುಧಾರಿಸಬೇಕೆಂದು ಪ್ರಯತ್ನಿಸಿದನು. ತರುಣ ಜನರಿಗೆ ಚಿಕ್ಕ ಚಿಕ್ಕ ಕಥೆಗಳ ಮೂಲಕವಾಗಿಯೂ, ಸಂಭಾಷಣಾಮೂಲಕವಾಗಿಯೂ ದೇವರು, ಧರ್ಮ, ಮಾನವಕರ್ತವ್ಯ, ಕುಟುಂಬ, ಜನಾಂಗಪ್ರಗತಿ ಮುಂತಾದ ವಿಚಾರಗಳನ್ನು ಕುರಿತು ಬೋಧಿಸುತ್ತಿದ್ದನು. ಅರ್ಥಯುಕ್ತವೂ, ಮೃದುಮಧುರವೂ, ಶತಾಂಶ ಸತ್ಯಮಯವಾದರೂ ಪ್ರೇಮಯುಕ್ತವೂ ಆದ ಆತನ ಮಾತುಗಳು ಸರ್ವರಿಗೂ ಕರ್ಣಾನಂದಕರವಾಗಿರುವುವು. ಆತನ ಭಾಷಣವು ಸಕಲರಿಗೂ ಸ್ಫೂರ್ತಿದಾಯಕವಾಗಿರುವುದು. ತಮ್ಮ ದೇಶಕ್ಕೆ ಹಿತಸಾಧನೋದ್ದೇಶದಿಂದ-ಅದರ ದಾಸ್ಯನಿವಾರಣೆಯ ಮಹೋದ್ದೇಶದಿಂದ ತನ್ನ ಜೀವಿತವನ್ನೇ ಮೀಸಲಾಗಿರಿಸಿ ಶ್ರಮಪಟ್ಟ ಆ ರಾಷ್ಟ್ರವೀರನನ್ನು ಕಂಡು ಸಕಲರೂ ಗೌರವಿಸಿ ಆತನನ್ನು ಪ್ರೇಮಿಸುವರು. ಆತನ ನಿಸ್ವಾರ್ಥತೆಗಾಗಿ ಆತನನ್ನು ಪೂಜಿಸುವರು,- ಧನ್ಯನೆಂದು ಹೊಗಳುವರು.

ಇಟಲಿಯನ್ನು ಕುರಿತು ಮ್ಯಾಝಿನಿಯ ರಾಜಕೀಯ ಉದ್ದೇಶಗಳು ಮೂರಿದ್ದುವು. ಇಟಲಿಯು ಸ್ವತಂತ್ರವಾಗಬೇಕು, ಐಕ್ಯವಾಗಬೇಕು, ಮತ್ತು ಅಲ್ಲಿ ಪ್ರಜಾಸತ್ತಾತ್ಮಕ ರಾಜಕೀಯ ಪದ್ಧತಿಯು ಸ್ಥಾಪಿತವಾಗಬೇಕು! ಈ ಮೂರರಲ್ಲಿ ಯಾವ ಒಂದುಕಾರ್ಯವು ನೆರವೇರದಿದ್ದರೂ, ಆತನ ಧ್ಯೇಯವು ಅಪೂರ್ಣವೆನ್ನಿಸುತ್ತಿತ್ತು. ಆದುದರಿಂದ ಆ ಮೂರೂ ಏಕಕಾಲಕ್ಕೇ ಸಾಧಿಸಲ್ಪಡಬೇಕೆಂಬುದು ಆತನ ಆಶಯವಾಗಿತ್ತು. ಆದರೆ ಆತನಿಗೆ ಬೆಂಬಲರಾಗಿದ್ದು, ಆತನ ಬೋಧನೆ ಆಶಯಗಳಲ್ಲಿ ಸಹಾನುಭೂತಿಯುಳ್ಳವರಾಗಿದ್ದವರೆಂದರೆ ಸಾಮಾನ್ಯ ಜನತಾವರ್ಗ ಮಾತ್ರವೇ! ಮಿಕ್ಕ ಮಧ್ಯಮ ತರಗತಿಯವರೂ ಶ್ರೀಮಂತರೂ ಆತನ ಧ್ಯೇಯಗಳು ಸಾಧನೆಗೂ ವ್ಯವಹಾರಕ್ಕೂ ಬಹುದೂರ ಎಂದು ತಿಳಿದು ತಟಸ್ಥರಾಗಿದ್ದರು. ಹೀಗೆ

ದೇಶವು ಒಮ್ಮನಸ್ಸಿನಿಂದ ಆತನ ಉದ್ದೇಶಕ್ಕೆ ಬೆಂಬಲವನ್ನೀಯದಿದ್ದುದೇ ಆತನ ಪ್ರಯತ್ನಗಳು ವಿಫಲವಾಗುವುದಕ್ಕೆ ಮುಖ್ಯ ಕಾರಣವಾಯಿತು.



ಅಧ್ಯಾಯ ೬ "ಅಂತ್ಯಕಾಲ"

ತನ್ನ ಮಾತೃದೇಶಕ್ಕೆ ಸ್ವಾತಂತ್ರ್ಯ-ಐಕ್ಯತೆ-ಪ್ರಜಾಸತ್ತಾತ್ಮಕ ರಾಜ್ಯಾಡಳಿತ ಈ ಮುಮ್ಮುಖವಾದ ಮೇಲ್ಮೆಯನ್ನು ಸಂಪಾದಿಸಬೇಕೆಂದು ಹೃತ್ಪೂರ್ವಕ ಯತ್ನಿಸಿ, ಕೃತಕೃತ್ಯನಾಗದೆ-ಹತಾಶನಾದ ವ್ಯಾಝಿನಿಯು ದೇಶಭ್ರಷ್ಟನಾಗಿ ಇಂಗ್ಲೆಂಡನ್ನು ಸೇರಿದಮೇಲೆ ಇತ್ತ ದೇಶದಲ್ಲಿ ಮಂದಪಕ್ಷವು ಪ್ರಬಲವಾಯಿತು. ಪಿಡ್‌ಮಾಂಟ್ ರಾಜ್ಯದ ಮಂತ್ರಿಯಾದ ಕ್ಯಾವೋರ್ ಎಂಬಾತನು ಆ ಪಕ್ಷದ ಮುಖಂಡನಾಗಿದ್ದನು. ವ್ಯಾಝಿನಿಯ ಉದ್ದೇಶಗಳಲ್ಲಿ ಸ್ವಾತಂತ್ರ್ಯ ಐಕ್ಯತೆಗಳೆರಡೂ ಆ ಪಕ್ಷದವರಿಗೂ ಮುಖ್ಯೋದ್ದೇಶಗಳಾಗಿದ್ದುವು. ಆದರೆ ದೇಶಸ್ವಾತಂತ್ರ್ಯ ಐಕ್ಯತೆಗಳನ್ನು ಆತನಂತೆ ಸ್ಪಷ್ಟವಾಗಿ ನುಡಿದು ದಂಗೆಯೆಬ್ಬಿಸಿ, ಶತ್ರುಗಳನ್ನು ಹೊರದೂಡಿ ಗಳಿಸುವುದು ಯುದ್ಧಶಿಕ್ಷಣವಿಲ್ಲದ ತಮ್ಮಿಂದ ಅಸಾಧ್ಯವಾದುದರಿಂದ, ಆ ಆಶಯಗಳನ್ನು ವ್ಯಕ್ತಪಡಿಸದೆ ಗುಪ್ತವಾಗಿಟ್ಟುಕೊಂಡಿದ್ದು ಫ್ರೆಂಚ್ ಚಕ್ರವರ್ತಿಯ ಸಹಾಯಪಡೆದು ಕಾರ್ಯಸಾಧನೆಮಾಡಬೇಕೆಂಬುದು ಅವರ ಕಾರ್ಯ ಕ್ರಮವಾಗಿತ್ತು. ಈ ಬಗೆಯ ಕಾರ್ಯವು ಕಪಟಯುಕ್ತವಾದುದರಿಂದ ಹೇಡಿತನದ್ದೂ ರಾಷ್ಟ್ರಮರ್ಯಾದೆಗೆ ಕಳಂಕತರತಕ್ಕುದೂ ಎಂಬುದು ವ್ಯಾಝಿನಿಯ ಅಭಿಪ್ರಾಯವಾಗಿತ್ತು.

ಆದರೂ ದೂರದೇಶದಲ್ಲಿ ಏಕಾಂಗಿಯಾಗಿ, ನಿರ್ಧನನಾಗಿ ನಿಸ್ಸಹಾಯಕನಾಗಿ ಕುಳಿತಿದ್ದ ಆತನು ಏನುಮಾಡಲು ಸಾಧ್ಯ ! ಕ್ಯಾವೋರನು ಫ್ರೆಂಚ್ ಚಕ್ರವರ್ತಿಯ ಸಹಾಯಬೇಡಿದನು. ಯೋಗ್ಯಸಹಾಯ ಕೊಡಲು ಆತನೂ ಒಪ್ಪಿದನು. ಇಬ್ಬರಿಗೂ ಒಡಂಬಡಿಕೆಯಾಯಿತು. ಸೇವೋಯ್ ಮತ್ತು ನಾಯಿಸ್ ಎಂಬೆರಡು ಪ್ರಾಂತಗಳನ್ನು ಫ್ರಾನ್ಸಿಗೆ ಬಿಟ್ಟುಕೊಡಬೇ

ಕು, ಅವರು ಸ್ವಾತಂತ್ರ್ಯ ಯುದ್ಧದಲ್ಲಿ ಶತ್ರುಗಳಾದ ಆಸ್ಟ್ರಿಯನ್ನರಮೇಲೆ
ಇವರೊಂದಿಗೆ ಸಹಕರಿಸಬೇಕು ಎಂದು ಆ ಒಪ್ಪಂದದಲ್ಲಿ ನಿರ್ಧರವಾಯಿತು.
ಯುದ್ಧವು ಪ್ರಾರಂಭವಾಗಿ, ಸ್ವಲ್ಪದಿನಗಳಲ್ಲೇ ಲೊಂಬಾರ್ಡಿ ವೆನಿಷಿಯಾ
ಎಂಬೆರಡು ಪ್ರಾಂತಗಳು ಆಸ್ಟ್ರಿಯದ ಕೈಬಿಟ್ಟುಹೋದುವು. ಪಿಡ್‌ಮಾಂಟಿ
ನ ಪ್ರಾಬಲ್ಯವು ದಿನದಿನಕ್ಕೆ ಹೆಚ್ಚಿ, ಒಂದೊಂದಾಗಿ ಇಟಲಿಯ ಸಂಸ್ಥಾನ
ಗಳು ಅದಕ್ಕೆ ಅಧೀನವಾಗತೊಡಗಿದುವು. ಒಂದಿಗೇ ಆಯಾ ಸಂಸ್ಥಾನ
ಗಳ ರಾಜರೂ ದೇಶಭ್ರಷ್ಟರಾಗಿ ಓಡಿಹೋಗತೊಡಗಿದರು. ಈ ಮಧ್ಯದ
ಲ್ಲೊಂದು ಘಾತುಕತನವು ನಡೆಯಿತು. ಫ್ರೆಂಚ್‌ಚಕ್ರವರ್ತಿ ಲೂಯಿನೆಪೋ
ಲಿಯನನು ಆಸ್ಟ್ರಿಯನ್ನರೊಂದಿಗೆ ಗುಪ್ತವಾಗಿ ಸಂಧಿಮಾಡಿಕೊಂಡು ವೆನಿಷಿ
ಯಾ ಪ್ರಾಂತವನ್ನು ಅವರಿಗೆ ವಹಿಸಿಕೊಟ್ಟು ತಾನು ಫ್ರಾನ್ಸಿಗೆ ಹೊರಟು
ಹೋದನು. ಇಟಲಿಯು ಶತ್ರುಗಳೊಂದಿಗೆ ಹೂಡಿದ ಯುದ್ಧವನ್ನು ಮಧ್ಯ
ದಲ್ಲಿ ಬಿಟ್ಟರೆ ಸರ್ವನಾಶವಾಗುವ ಸಂಭವವಿದ್ದುದರಿಂದ - ಸರ್ವಪ್ರಯತ್ನ
ದಿಂದಲೂ ಯುದ್ಧವನ್ನು ಮುಂದರಿಸಲೇಬೇಕಾಯಿತು. ಇಂತಹ ಅಪಾಯ
ಸಂದರ್ಭದಲ್ಲಿ ಮ್ಯಾಝಿನಿಯು ಮತ್ತೊಮ್ಮೆ ಇಟಲಿಗೆ ಬಂದು, ಆಗಿನ ಪ್ರ
ಜಾಮತವನ್ನನುಸರಿಸಿ, ಸದ್ಯಕ್ಕೆ ಐಕ್ಯತೆ - ಸ್ವಾತಂತ್ರ್ಯಗಳೆರಡು ಲಕ್ಷ್ಯವಾ
ಗಲು ಮುಂದೆ ಪ್ರಜಾಸತ್ತಾ ತತ್ತ್ವವನ್ನು ಮುಂದರಿಸಬಹುದೆಂದುಕೊಂಡು
ದೇಶೀಯರೊಂದಿಗೆ ಸಹಕರಿಸಿ ಕೆಲಸಮಾಡಲಾರಂಭಿಸಿದನು. ಸ್ವಯಂಸೈ
ನಿಕರ ದಂಡನ್ನು ಸೇರಿಸಿ, ಫ್ರಾನ್ಸಿನ ಸಹಾಯವು ಹೋದುದಕ್ಕಾಗಿ ಬೆದರದೆ
ಸ್ವಶಕ್ತಿಯಿಂದ ಮುಂದರಿಸಿರೆಂದು ತನ್ನ ಜನರಿಗೆ ಬೋಧಿಸಿ, ಗ್ಯಾರಿಬಾಲ್ಡಿ
ಗೆ ದಕ್ಷಿಣಕ್ಕೆ ದಂಡೆತ್ತಿ ಹೋಗುವಂತೆ ಪ್ರೋತ್ಸಾಹಪಡಿಸಿದನು.

ಗ್ಯಾರಿಬಾಲ್ಡಿಯೂ ಮಹಾವೀರನು. ಆತನ ಶೌರ್ಯವೀರ್ಯಗಳಿಗೆ
ಮ್ಯಾಝಿನಿಯ ತೀಕ್ಷ್ಣಮತಿಯು ಸಹಾಯವೊದಗಿದುದರಿಂದ ಅವು ಉಜ್ವಲ
ವಾಗಿ ಪ್ರಕಾಶಿಸತೊಡಗಿದುವು. ಹೋದಹೋದಲ್ಲಿ ಆತನ ಸೈನ್ಯಕ್ಕೆ ವಿಜ
ಯಪ್ರಾಪ್ತಿಯಾಗತೊಡಗಿತು. ಸಿಸಿಲಿ ಮತ್ತು ನೇಪಲ್ಸ್ ರಾಜ್ಯಗಳು
ಕೈವಶವಾದುವು. ಪಿಡ್‌ಮಾಂಟಿನ ವಿಕ್ಟರ್ ಇಮ್ಯಾನುಯಲ್ಲನು ಪೋಪನ
ಸೈನ್ಯವನ್ನು ಸೋಲಿಸಿ, ಗ್ಯಾರಿಬಾಲ್ಡಿಯನ್ನು ಕೂಡಿಕೊಂಡನು. ಸಿಸಿಲಿ,
ನೇಪಲ್ಸ್ ರಾಜ್ಯಗಳೂ ಪಿಡ್‌ಮಾಂಟಿನ ಅಧೀನಕ್ಕೊಳಪಟ್ಟುವು. ಈ

ಸ್ವಾತಂತ್ರ್ಯ ಯುದ್ಧದಿಂದ, ರೋಮ್ ಮತ್ತು ವೆನಿಸ್ ಎಂಬೆರಡು ಸಂಸ್ಥಾನಗಳನ್ನು ಬಿಟ್ಟು ಮಿಕ್ಕ ಇಟಲಿದೇಶವೆಲ್ಲವೂ ವಿಕ್ಟರ್ ಇಮ್ಯಾನುಲ್ಲಾನ ಆಡಳಿತಕ್ಕೆ ಒಳಪಟ್ಟಂತಾಯಿತು.

ರೋಮ್ ವೆನಿಸ್ ಪ್ರಾಂತಗಳೆರಡೂ ಸ್ವಾಧೀನವಾಗದಿದ್ದುದು ಏಕೀಕರಣ ಪೂರ್ಣತೆಗೆ ಕಳಂಕವೆನ್ನಿಸಿತ್ತು. ರೋಮ್ ಸಂಸ್ಥಾನವು ಪೋಪನ ರಾಜಧಾನಿಯಾಗಿದ್ದುದರಿಂದ ಕ್ಯಾಥೊಲಿಕ್ ಪಂಥದವರಿಂದ ಕೂಡಿದ್ದ ಫ್ರಾನ್ಸ್ ರಾಜ್ಯಾಂಗವು ಅದಕ್ಕೆ ಬೆಂಬಲವಾಗಿದ್ದಿತು. ಆದುದರಿಂದ ಸಧ್ಯಕ್ಕೆ ಅದನ್ನು ಜಯಿಸುವುದು ಅಸಾಧ್ಯವೆಂದೆಣಿಸಿ, ಮ್ಯಾಝಿನಿಯು ವೆನಿಸ್ ಪ್ರಾಂತದಲ್ಲಿ ದಂಗೆಯೆಬ್ಬಿಸಿ ಅದನ್ನು ಆಸ್ಟ್ರಿಯಾದ ಸ್ವಾಧೀನದಿಂದ ತಪ್ಪಿಸಬೇಕೆಂದು ಪ್ರಯತ್ನ ನಡೆಸಿದನು. ಈ ಮಧ್ಯೆ ಗ್ಯಾರಿಬಾಲ್ಡಿಯು-'ರೋಮ್ ಪ್ರಾಂತವನ್ನು ಗೆಲ್ಲುವೆನು-ಅಥವ ಈ ಪ್ರಯತ್ನದಲ್ಲೇ ಪ್ರಾಣಬಿಡುವೆನು' ಎಂದು ಪ್ರತಿಜ್ಞೆತೊಟ್ಟು ೧೮೬೭ರಲ್ಲಿ ಸೈನ್ಯದೊಂದಿಗೆ ಆ ರಾಜ್ಯದಮೇಲೆ ದಂಡೆತ್ತಿದನು. ಫ್ರಾನ್ಸ್ ಸೈನ್ಯದ ಸಹಾಯವು ರೋಮಿನವರಿಗೆ ಯುಕ್ತಕಾಲಕ್ಕೆ ಬಂದೊದಗಿ ಗ್ಯಾರಿಬಾಲ್ಡಿಯ ಸೈನ್ಯಕ್ಕೆ ಬಹು ಪೆಟ್ಟು ತಾಕಿತು. ಈ ಯುದ್ಧದಲ್ಲಿ ಆತನಿಗೂ ಭಯಂಕರ ಗಾಯವಾಗಿ ಪ್ರಾಣದೊಂದಿಗೆ ಬದುಕಿದ್ದೇ ಕಷ್ಟವಾಯಿತು. ಮುಂದೆ ವಿಕ್ಟರ್ ಇಮ್ಯಾನುಲ್ಲಾನು ನೆಪೋಲಿಯನೊಂದಿಗೆ ಮಾಡಿಕೊಂಡ ಒಪ್ಪಂದವನ್ನನುಸರಿಸಿ ತರುವಾಯ ಎರಡು ವರ್ಷಗಳಮೇಲೆ ರೋಮ್ ಪ್ರಾಂತವೂ ಪ್ರಷ್ಯಾದ ಪ್ರಖ್ಯಾತ ಮಂತ್ರಿಯಾದ ಬಿಸ್ಮಾರ್ಕನ ಸಹಾಯದಿಂದ ವೆನಿಸ್ ಪ್ರಾಂತವೂ ಇಟಲಿಯೊಂದಿಗೆ ಸೇರಿ ಏಕೀಕರಣ ಕಾರ್ಯವೇನೋ ಒಂದು ದೃಷ್ಟಿಯಿಂದ ನೆರವೇರಿದಂತಾಯಿತು. ಆದರೆ ಈ ಬಗೆಯಿಂದ ಆದ ವಿಜಯವು ಮ್ಯಾಝಿನಿಯ ದೃಷ್ಟಿಯಲ್ಲಿ ವಿಜಯವೆಂದು ಪರಿಗಣಿತವಾಗಲಿಲ್ಲ.

ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯು ಸ್ಥಾಪಿಸಲ್ಪಡದೆ, ಕೇವಲ ಈ ಬಗೆಯ ಏಕೀಕರಣ ಮಾತ್ರವೇ ಪ್ರಾಪ್ತವಾದುದು ವಿಕ್ಟರ್ ಇಮ್ಯಾನುಲ್ಲಾನ ಅಧಿಕಾರವೂ ಪ್ರತಿಷ್ಠೆಯೂ ಹೆಚ್ಚಲು ಮಾತ್ರವೇ ಸಹಾಯಕವಾಯಿತೆಂಬುದು ಸರ್ವವಿದಿತವಾಯಿತು. ಇಟಲಿಯ ಸಕಲ ಪ್ರಾಂತಗಳ ಪ್ರಜೆಗಳೂ ಪ್ರಜಾಸತ್ತಾವಾದವನ್ನು ಮುಂದರಿಸಿ ಉದ್ಯೋಗ ನಡಿಸಬೇ

ಕಾದುದರ ಆವಶ್ಯಕತೆಯನ್ನು ಕಂಡುಕೊಂಡು ಮ್ಯಾಝಿನಿಯನ್ನು ಇಟಲಿಯಲ್ಲೇ ಬಂದಿದ್ದು ಕೆಲಸಮಾಡೆಂದು ಪ್ರಾರ್ಥಿಸಿಕೊಂಡರು. ಆದರೆ ಆತನಮೇಲೆ ಇದ್ದ ಮರಣದಂಡನೆಯ ಶಾಸನವು ಇನ್ನೂ ರದ್ದಾಗದಿದ್ದುದರಿಂದ ಆತನು ಇಟಲಿಯ ಎಲ್ಲಾ ಪ್ರಾಂತಗಳಲ್ಲೂ ನಿಶ್ಶಂಕೆಯಿಂದ ಸಂಚರಿಸುವಂತಿರಲಿಲ್ಲ. ಆದುದರಿಂದ ಆ ಶಾಸನವನ್ನು ರದ್ದುಪಡಿಸಬೇಕೆಂದು ಒಂದು ಬಿನ್ನಹಪತ್ರವು ಸಿದ್ಧವಾಗಿ, ಅದಕ್ಕೆ ಇಟಲಿಯ ಎಲ್ಲಾ ಪ್ರಾಂತಗಳ ನಾಲ್ವತ್ತುಸಾವಿರ ಜನರ ರುಜುವು ಹಾಕಲ್ಪಟ್ಟು ಅದು ರಾಜನ ಬಳಿಗೆ ಕಳುಹಲ್ಪಟ್ಟಿತು. ರಾಜನೂ ಮ್ಯಾಝಿನಿಯ ವಿಷಯದಲ್ಲಿದ್ದ ಪ್ರಜಾಭಿಪ್ರಾಯದ ಬಲವನ್ನು ಗಮನಿಸಿ ಆ ಶಾಸನವನ್ನು ರದ್ದುಪಡಿಸಿದನು. ಆದರೇನು, ಸ್ವಾತಂತ್ರ್ಯಪ್ರಿಯನಾದ ಮಹಾತ್ಮಾ ಮ್ಯಾಝಿನಿಯು ಸರಕಾರದ ಈ ಉಪಕಾರವನ್ನು ಸ್ವೀಕರಿಸಲು ಒಪ್ಪದೆ, ಇಟಲಿಗೆ ಬಂದಾಗಲೆಲ್ಲ ಗುಪ್ತ ವೇಷದಿಂದಲೇ ಬಂದುಹೋಗುತ್ತಿದ್ದನು.

ಪ್ರಜಾಸತ್ತೆಯನ್ನು ಸ್ಥಾಪಿಸುವುದೇ ಆತನ ಜನ್ಮೋದ್ದೇಶವಾಗಿದ್ದುದರಿಂದ ಅದಕ್ಕೆ ಸಾಧಕವೆಂದು ತೋರಿದ ಕೆಲಸವನ್ನೆಲ್ಲ ಮಾಡಲು ಮ್ಯಾಝಿನಿಯು ಹಿಂದೆ ಮುಂದೆ ನೋಡುತ್ತಿರಲಿಲ್ಲ. ೧೮೭೦ ರಲ್ಲಿ ಆ ಉದ್ದೇಶದಿಂದ ಮತ್ತೊಂದು ಒಳಸಂಚನ್ನು ನಡೆಸಿದನಾದರೂ ಅದೂ ಯಶಸ್ವಿಯಾಗಲಿಲ್ಲ. ತರುವಾಯ ಫ್ರಾನ್ಸಿಗೂ ಜರ್ಮನಿಗೂ ಪ್ರಾಪ್ತವಾದ ಯುದ್ಧಪ್ರಸಂಗದಲ್ಲಿ ಇಟಲಿಯು ಫ್ರಾನ್ಸಿನ ಕಡೆ ಸೇರದಂತಿರಲೆಂದು ಜರ್ಮನಿಯ ಮುಖ್ಯಪ್ರಧಾನನಾದ ಬಿಸ್ಮಾರ್ಕನು ಮ್ಯಾಝಿನಿಯೊಂದಿಗೆ ಒಂದು ಒಡಂಬಡಿಕೆ ಮಾಡಿಕೊಂಡನು. ಈ ಸಂಬಂಧ ಮಾತುಕಥೆಗಳನ್ನಾಡಲು ಮ್ಯಾಝಿನಿಯು ಸಿಸಿಲಿ ದ್ವೀಪಕ್ಕೆ ಹೋಗಬೇಕಾಯಿತು. ಆದರೆ ಅದು ಮೋಸದ ಒಪ್ಪಂದವೆಂದು ಆತನಿಗೆ ತಿಳಿದಿರಲಿಲ್ಲವಾಗಿ, ಅಲ್ಲಿಗೆ ಹೋಗಿ ಹಡಗು ಇಳಿದೊಡನೆಯೇ ಇಟಲಿ ಸರಕಾರದವರು ಆತನನ್ನು ಸೆರೆಹಿಡಿದು ಗೀಟಾ ಎಂಬೊಂದು ಸ್ಥಳಕ್ಕೆ ಕೊಂಡೊಯ್ದು ಅಲ್ಲಿ ನಿರ್ಬಂಧದಲ್ಲಿಟ್ಟರು.

ಈ ಗೀಟಾದ ಸೆರೆಮನೆಯಲ್ಲಿ ಮ್ಯಾಝಿನಿಯು ಎರಡು ತಿಂಗಳಕಾಲ ವಿದ್ದನು. ರಾಜಸತ್ತೆಯ ಅಧಿಕಾರಪ್ರಾಬಲ್ಯಕ್ಕೆ ಸೆರೆಸಿಕ್ಕವನಾಗಿದ್ದರೂ, ಸೆರೆಮನೆಯ ಸೇವಕರಿಗೂ ಸಹ ಮ್ಯಾಝಿನಿಯು ಮಹಾತ್ಮನು, ಅಪ್ರತಿಮ

ದೇಶಭಕ್ತನು ಎಂಬ ಅರಿವು ಉಂಟಾಗಿದ್ದುದರಿಂದ ಸಕಲರೂ ಆತನನ್ನು ಭಯಭಕ್ತಿಗಳಿಂದ ಗೌರವಿಸುತ್ತಿದ್ದರು. ಅಷ್ಟರಲ್ಲೇ ರಾಜನಿಗೆ ಪುತ್ರೋತ್ಸವವಾದುದರ ಜ್ಞಾಪಕಾರ್ಥವಾಗಿ ಇತರರೊಂದಿಗೆ ಆತನಿಗೂ ಬಿಡುಗಡೆಯಾಯಿತು. ಆದರೇನು! ಅದು ಅರಸನ ಕೃಪಾಮೂಲಕವಾಗಿ ದೊರೆತ ಸ್ವಾತಂತ್ರ್ಯವಾದುದರಿಂದ, ಆ ಬಗೆಯ ಸ್ವಾತಂತ್ರ್ಯದಲ್ಲಿ ತಲೆಯೆತ್ತಿ ತಿರುಗುವುದಾದರೂ ಆತನಿಗೆ ಅವಮಾನವೆನ್ನಿಸಿತು. ಆಗಿನ ಇಟಲಿಯ ಸ್ವರೂಪವನ್ನು ಕಂಡು ಆ ಮಹಾತ್ಮನು ಎಷ್ಟುಮಟ್ಟಿನ ಹೃದಯವೇದನೆಗೊಂಡಿದ್ದನೆಂಬುದನ್ನು, ಆ ಸಂದರ್ಭದಲ್ಲಿ ಆತನ ಬಾಯಿಂದ ಹೊರಟಿರುವ ಈ ಮಾತಿನಿಂದ ತಿಳಿಯಬಹುದು. 'ಓ ಇಟಲಿಯೇ, ಇಟಲಿಯೇ, ನನ್ನ ಪವಿತ್ರಾಂತಃಕರಣದ ಧ್ಯೇಯಸ್ವರೂಪೇ ಇಟಲಿಯೇ- ಓ ನನ್ನ ಸ್ವಪ್ನ ವ್ಯಕ್ತಿಯೇ, ನನ್ನ ಘನತೆಯ ಬೀಡೂ, ಸೌಂದರ್ಯದ ಪ್ರತಿನಿಧಿಯೂ ಆದ ಇಟಲಿಯೇ! ಇಂದು ನೀನೆಲ್ಲಿರುವೆ? ಇಂದು ಸ್ವಾರ್ಥಸಾಧಕರ, ಪರರಾಜರ ಇಚ್ಛೆಯಂತೆ ಕುಣಿವ ಸಮಯಾನುವರ್ತಿಗಳ, ಹೇಡಿಗಳ, ಕುಟಿಲ ನೀತಿಜ್ಞರ ಬೀಡಾಗಿರುವೆಯಲ್ಲವೆ? ನಾನು ಅಪೇಕ್ಷಿಸಿದ ನನ್ನ ತಾಯ್ನಾಡಿನ ಸ್ವರೂಪವು ಇದೇಯೇ! ಛೆ, ಎಂದಿಗೂ ಅಲ್ಲ. ಇದು ಇಟಲಿಯ ಆತ್ಮವಲ್ಲ- ಇದು ಇಟಲಿಯ ಮೃತಕಳೇಬರವು'.

ಇಷ್ಟಾದ ತರುವಾಯ ಮುಂದೆ ಮ್ಯಾಝಿನಿಯು ಕೇವಲ ಮನಃಕ್ಲೇಶಕ್ಕೆ ಕಾರಣವೂ ನಿಷ್ಫಲದಾಯಕವೂ ಆದ ಒಳಸಂಚು-ದಂಗೆಗಳ ಯೋಚನೆಯನ್ನು ಬಿಟ್ಟು, ಕೇವಲ ಜನತಾಶಿಕ್ಷಣ ವಿಚಾರವನ್ನೇ ಗಮನಿಸಿಕೊಂಡು ಕಾಲಯಾಪನೆ ಮಾಡಿದನು. ಅದಕ್ಕಾಗಿ ಸಾರ್ವಜನಿಕ ಪುಸ್ತಕಾಲಯಗಳು, ರಾತ್ರಿಯ ಪಾಠಶಾಲೆಗಳು ಮುಂತಾದ ಸಾಮಾನ್ಯ ಕಾರ್ಯಗಳಿಂದ ಸಮಾಜಸುಧಾರಣಾ ಕಾರ್ಯಗಳನ್ನು ನಡೆಯಿಸಿದನು. ನಾಲ್ವತ್ತು ವರ್ಷಕಾಲ ಅವಿಶ್ರಾಂತವಾಗಿ ಅವ್ಯಕ್ತವಾದೊಂದು ಧ್ಯೇಯದಲ್ಲಿ ದೃಷ್ಟಿಯಿಟ್ಟು ದುಡಿದ ಆ ಕರ್ಮವೀರನ ಮಾನವ ದೇಹವು ಮುಪ್ಪಿನಿಂದ ಕೃಶವಾಗಿ ಬಲಹೀನವಾಯಿತು. ಇನ್ನು ಮುಂದೆ ಬಹುಕಾಲ ಜೀವಿಸಲಾರದೆಂದು ತೋರಿತು. ಆ ಸಂಗತಿಯು ಆತನಿಗೆ ಮನವರಿಕೆಯಾಗಿದ್ದಿತೆಂದು ತೋರುತ್ತದೆ. ಅಂತಹ ಮುಪ್ಪಿನ ವಯಸ್ಸಿನಲ್ಲೇ ಫ್ಲೋರೆನ್ಸ್, ಜಿನೀವಾ,

ಪೀಸಾ ನಗರಗಳಿಗೆ ಹೋಗಿ ತನ್ನ ಮಿತ್ರರನ್ನು ಸಂದರ್ಶಿಸಿದನು. ತನ್ನ ಗುರುವಾದ ಫಾಸ್ಕೋಲೋನ ಗೋರಿಯನ್ನು ಸಂದರ್ಶಿಸಿ ಅದಕ್ಕೆ ಪುಷ್ಪ ಮಾಲೆಯನ್ನು ಸಮರ್ಪಿಸಿದನು. ಮೃತ್ಯುಕಾಲವು ಸನ್ನಿಹಿತವಾಯಿತು. ೧೮೭೨ ನೆಯ ಸಂವತ್ಸರದ ಪ್ರಾರಂಭದಲ್ಲಿ ದೇಹದಲ್ಲಿ ಅಸ್ವಸ್ಥತೆಯುಂಟಾ ಯಿತು. ಕೆಲಕಾಲ ಮಾತ್ರ ಹಾಸಿಗೆಹಿಡಿದು ಮಲಗಿ ನರಳಿದನು. ಕೊನೆಗೆ ಅದೇ ವರ್ಷದ ಮಾರ್ಚಿ ೧೦ ನೆಯ ದಿನ ಆ ಪುಣ್ಯಾದೇಹಿಯ ಪವಿತ್ರಾತ್ಮವು ಪಾಂಚಭೌತಿಕ ಶರೀರ ಬಂಧನದಿಂದ ಹೊರಬಿದ್ದು ಮುಕ್ತವಾಗಿ, ಸ್ವತಂ ತ್ರವಾಗಿ, ಸ್ವೇಚ್ಛೆಯಾಗಿ ದಿವಂಗತವಾಯಿತು.



# ಉ ಪ ಸ ಂ ಹಾ ರ

ಆ ಮಹನೀಯನು ಮೃತನಾಗುವುದಕ್ಕೆ ಕೆಲವು ದಿನಗಳ ಮುಂದೆ, ತನ್ನ ರುಗ್ಣಶಯ್ಯೆಯಿಂದಲೇ, ತನ್ನ ದೇಶೀಯರನ್ನುದ್ದೇಶಿಸಿ— ‘ ಪ್ರಿಯದೇಶ ಬಾಂಧವರೇ! ನಾನು ಇನ್ನೇನು ಕೆಲವು ದಿನಗಳು ಮಾತ್ರ ಜೀವಿಸಿರಬಹುದು, ಅಥವ ಶೀಘ್ರವಾಗಿಯೇ ಮೃತನಾಗಬಹುದು. ಆದರೆ ನಿಮ್ಮಮೇಲಿನ ನನ್ನ ಪ್ರೀತಿಯು ಮಾತ್ರ ಅಳಿಯಲಾರದು ; ಹಾಗೆಯೇ ನನ್ನ ಮೇಲಿನ ನಿಮ್ಮ ಪ್ರೀತಿಯೂ ಅಳಿಯಲಾರದೆಂದು ತಿಳಿಯುತ್ತೇನೆ. ನಿಮಗೆ ನನ್ನ ಮೇಲಿ ರುವ ಪ್ರೇಮವನ್ನು ವ್ಯಕ್ತಪಡಿಸುವ ಮಾರ್ಗವು ಒಂದೇ ಒಂದಿದೆ: ಅದೇನೆಂ ದರೆ, ನಾನು ಈ ಲೋಕವನ್ನು ಬಿಟ್ಟುಹೋದಮೇಲೆ ನನ್ನ ಜೀವಿತ ಧ್ಯೇ ಯವು ನಷ್ಟವಾಗದಂತೆ, ಎಲ್ಲರೂ ಹೆಚ್ಚು ಆಸ್ಥೆವಿಶ್ವಾಸಗಳಿಂದ ಕೆಲಸಮಾಡಿ ನಮ್ಮ ಮಾತೃದೇಶವು ಜಗತ್ತಿನಲ್ಲಿ ತಲೆಯೆತ್ತಿ ನಿಲ್ಲುವಂತೆ ಮಾಡಬೇಕು: ಈ ಆಸೆಯನ್ನು ನೀವು ಪೂರ್ಣಮಾಡಲಾರಿರೋ! ’—ಎಂದು ನುಡಿದಿದ್ದನು.

ಮ್ಯಾಝಿನೀ ಮಹಾತ್ಮನು ಪೀಸಾಪಟ್ಟಣದಲ್ಲಿ ಮೃತನಾದ ವಾರ್ತೆ ಯು ಒಡನೆ ಇಟಲಿಯಲ್ಲೆಲ್ಲ ಹಬ್ಬಿತು. ಆ ವಾರ್ತೆಯು ಆ ಬಾಲವೃದ್ಧರೆ

ನ್ನದೆ ಸಮಸ್ತರನ್ನು ದುಃಖಸಮುದ್ರದಲ್ಲಿ ಮುಳುಗಿಸಿತು. ಇಟಲಿಯ ಪಾರ್ಲಿಮೆಂಟು ಆತನ ಮರಣಕ್ಕಾಗಿ ದುಃಖಪ್ರದರ್ಶನಮಾಡಿ, ಅತಿಶಯ ನಿಸ್ವಾರ್ಥತಾಮೂರ್ತಿಯೂ, ಅಪ್ರತಿಮ ದೇಶಾಭಿಮಾನಿಯೂ ಆದ ಆ ಮಹಾನುಭಾವನಿಗೆ ಸ್ತೋತ್ರಾಂಜಲಿಯೊಂದನ್ನು ಸಮರ್ಪಿಸಿ, ದೇಶದ ಕೃತಜ್ಞತೆಯನ್ನು ವ್ಯಕ್ತಪಡಿಸಿತು. ಆತನ ಸದ್ಗುಣಮಾಲೆಯನ್ನು ದೇಶವೇ ಅನೇಕ ಮುಖಗಳಿಂದ ಹೊಗಳಿ ಕೀರ್ತಿಸಿತು.

ಪಾಂಚಭೌತಿಕ ಕಳೇಬರವು ನಶಿಸಿತಾದರೂ ಆ ಮಹನೀಯನು ತನ್ನ ಲೇಖನಗಳಿಂದಲೂ ಕೃತಿಗಳಿಂದಲೂ ಇಂದಿಗೂ ಜೀವಂತನಾಗಿದ್ದಾನೆನ್ನಲು ಸಂಶಯವಿಲ್ಲ. ರಾಜಕೀಯಸಂಬಂಧವಾದ, ಗ್ರಂಥಗಳು ಮತ್ತು ಲೇಖನಗಳೂ ಅಲ್ಲದೆ, ಸಾಮಾಜಿಕ ಮತ್ತು ಸಾಹಿತ್ಯಸಂಬಂಧ ಲೇಖನಗಳೂ ಎಷ್ಟೋ ಆತನಿಂದ ರಚಿತವಾದುವು. ಅವುಗಳಲ್ಲೆಲ್ಲ, Duties of man ಎಂಬುದೊಂದು ಶಿರೋಮಣಿಪ್ರಾಯವಾದುದು. ಅದರಲ್ಲಿನ ಅಮೌಲ್ಯ ವಿಚಾರಗಳನ್ನು ಈ ಚಿಕ್ಕ ಪುಸ್ತಕದಲ್ಲಿ ತಿಳಿಯ ಹೇಳಲು ಸಾಧ್ಯವಿಲ್ಲದುದಕ್ಕಾಗಿ ವಿಷಾದಿಸುತ್ತೇನೆ. ಅದರಲ್ಲಿ ದೇವರು, ಭಗವತ್ಸಂಕಲ್ಪ ಮತ್ತು ಆತನ ನಿಯಮ, ವಿಶ್ವಬಂಧುತ್ವ, ಸ್ವದೇಶ, ಮಾನವ ಕುಟುಂಬ ಮುಂತಾದ ಹಲವು ವಿಚಾರಗಳನ್ನೆಲೆ ಸರ್ವರೂ ಓದಿ ತಿಳಿದು, ಜೀವಮಾನದಲ್ಲಿ ಆಚರಣೆಗೆ ಇಟ್ಟುಕೊಳ್ಳಬೇಕಾದ ಅಮೌಲ್ಯ ವಿಚಾರಗಳನಿಧಿಯೇ ಇದೆ. ಸರ್ವರೂ ಸಂಗ್ರಹಿಸಿ ಪಠಿಸಬೇಕಾದ ಗ್ರಂಥರತ್ನವದು!

ಲೋಕದಲ್ಲಿ ಏಕಾಂಗಿಯಾಗಿ ಜನ್ಮಿಸುವ ಮಾನವ ಪ್ರಾಣಿಯು ಏಕಾಂಗಿಯಾಗಿಯೇ ಹೊರಟುಹೋಗುತ್ತಾನಲ್ಲದೆ, ಎಂದೂ ಯಾವನೂ ಏನನ್ನೂ ತನ್ನೊಂದಿಗೆ ತೆಗೆದುಕೊಂಡು ಹೋದುದನ್ನು ಕಂಡು ಕೇಳಿ ಇಲ್ಲವಲ್ಲವೆ? ಇಂತಹ ಮಹಾತ್ಮರ ಜೀವಿತಗಳಾದರೋ, ಹಾಗೆ ಈ ಜಗತ್ತಿನಲ್ಲಿ ಜೀವಿಸುವ ಕೆಲಕಾಲವು ಪರೋಪಕಾರಕ್ಕಾಗಿಯೇ ವಿನಿಯೋಗಿಸಲಾಗಿದ್ದು, ನಿಸ್ವಾರ್ಥತೆ, ನಿರಲಸಿಕೆ, ಆಸ್ತಿಕತೆ, ದೇಶಾಭಿಮಾನ ಧರ್ಮಾಭಿಮಾನಗಳ ಪ್ರತ್ಯಕ್ಷ ಮೂರ್ತಿಗಳೋ ಎಂಬಂತೆ ಮಾನವಲೋಕಕ್ಕೇ ಉದಾಹರಣಸ್ವರೂಪವಾಗಿ ಬೆಳಗು

ತ್ತವೆ. ಇತರರೂ ಇಂತಹ ಮಹಾತ್ಮರ ಅಮೌಲ್ಯ ಜೀವಿತಗಳ ಉದಾಹರಣೆಗಳನ್ನು ತೆಗೆದುಕೊಂಡು ತಮ್ಮ ಜೀವಿತಾಚರಣೆಗಳನ್ನು ಕ್ರಮಪಡಿಸಿಕೊಂಡು ಸಾರ್ಥಕಗೊಳಿಸಿಕೊಳ್ಳಬೇಕು. ಮಹನೀಯನಾದ ಮ್ಯಾಝಿನಿಯ ಜೀವಿತವೂ ಆತನ ಸ್ವಾತಂತ್ರ್ಯಕಾಂಕ್ಷೆಯೂ, ಆತ್ಮಗೌರವಪಾಲನೆ, ನಿಸ್ವಾರ್ಥತೆ ಮುಂತಾದ ಸ್ವರ್ಗೀಯ ಗುಣಗಳೂ ಪ್ರಕೃತ ಕಾಲದಲ್ಲಿ ಎಲ್ಲರಿಗೂ ಆದರ್ಶವಾಗಿದ್ದು ಭಾರತೀಯರ ಉದ್ಧಾರಕ್ಕೆ ಉತ್ತೇಜಕಗಳಾಗಿರಲಿ-

ತಥಾಸ್ತು.



*'Whenever the voice of your conscience corresponds with that general voice of Humanity you are certain of the truth, certain of knowing one line of God's law'.*

*'Let us believe in Humanity, the sole interpreter of God's law upon earth'.*

*—JOSEPH MAZZINI.*

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

|| ಶ್ರೀ ರಾಮ ಸಹಾಯಂ ||

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ :—**

**'ಬಾಬು ಸುರೇಂದ್ರನಾಥ ಬ್ಯಾನರ್ಜೀ'** ಎಂಬೀ ಹೆಸರು, ಭಾರತ ದೇಶದ ರಾಷ್ಟ್ರೀಯ ಚಳವಳಿಯ ಪರಿಚಯವಿರುವ ಯಾವನಿಗೆ ತಿಳಿಯದು ? ರಾಷ್ಟ್ರ ಚಳವಳಿಯ ಪ್ರಾರಂಭದ ದಿನಗಳಲ್ಲಿ - ಇಂದು ಮಹಾತ್ಮಾಗಾಂಧಿಯವರ ಹೆಸರು ಹೇಗೆ ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ, ಸಿಂಧೂ ದೇಶದಿಂದ ಅಸ್ಸಾಮಿನವರೆಗೂ ಮೂಲೆಮೂಲೆಗೂ ವ್ಯಾಪಿಸಿದೆಯೋ ಹಾಗೆಯೇ-ಬಾಬು ಸುರೇಂದ್ರನಾಥ ಬ್ಯಾನರ್ಜಿಯ ಹೆಸರೂ ದೇಶದ ಮೂಲೆಮೂಲೆಗೂ ವ್ಯಾಪಿಸಿತ್ತು —ಪ್ರತಿಮನೆಯ ಮಾತಾಗಿತ್ತು. ನಮ್ಮ ಕಥಾನಾಯಕನಂತೆ ಅಷ್ಟು ಪ್ರಮಾಣದಿಂದ ರಾಷ್ಟ್ರ ಪ್ರೇಮವನ್ನು ಗಳಿಸುವ ಭಾಗ್ಯವು ಬಹು ಸ್ವಲ್ಪ ಮಂದಿಗೆ ಮಾತ್ರ ಲಭ್ಯವಾಗುವುದು. ರಾಷ್ಟ್ರೀಯ ಚಳವಳಿಯು ಬೆಳೆದು ಅಭಿವೃದ್ಧಿಯಾಗಿರುವ ಈಗಿನ ಕಾಲದಲ್ಲಿ, ಅತ್ಯಲ್ಪ ತ್ಯಾಗದಿಂದಲಾಗಲಿ ಅಥವ ಬಹು ಸ್ವಲ್ಪ ವಿದ್ಯಾ-ಧನ ಮುಂತಾದ ಸಹಾಯಗಳಿಂದಲಾಗಲಿ ಯಶಸ್ಸನ್ನು ಪಡೆಯಲು ಸಾಧ್ಯವೆಂದು ತೋರೀತು! ಹೆಸರೂ ಬಹು ಸುಲಭವಾಗಿಯೇ ದೇಶದಲ್ಲಿ ಹಲವರ ಬಾಯಲ್ಲಿ ಬಿದ್ದೀತು. ಯಶಸ್ಸಂಪಾದನೆಗೆ ಅಥವ ಧನಸಂಪಾದನೆಗೆ-ದೇಶಸೇವಕನೆಂಬ ರಕ್ಷಾಬಂಧನವು (ತಾಳಿಯು) ಒಂದು ಸಾಧನವು, ಎಂದು ಭಾವಿಸಿಕೊಂಡು ವೇಷಧಾರಿಗಳಾಗುತ್ತಿರುವವರು ಹೆಚ್ಚಿರುವ ಈಚೆಗಿನ ದಿನಗಳಲ್ಲಿ ಇಂತಹ ಅಪ್ರತಿಮ ದೇಶಭಕ್ತರ ನಾಮಪರಿಚಯವು-ಕೃತಿಪರಿಚಯವು-ಕೀರ್ತಿಪಠನವು ಅಪ್ರಕೃತವೆನಿಸಲಾರದು.

ಬಾಬು ಸುರೇಂದ್ರನಾಥ ಬ್ಯಾನರ್ಜಿಯು ತನ್ನ ಯಾವ ಶಕ್ತಿಯ ಪ್ರದರ್ಶನದಿಂದ ಅಂತಹ ರಾಷ್ಟ್ರಪ್ರೇಮವನ್ನು ಗಳಿಸಿದನು ? ಆತನ ಕೀರ್ತಿಯು ಭಾರತದೇಶವೊಂದರಲ್ಲಿ ಮಾತ್ರವಲ್ಲ, ಇಂಗ್ಲೆಂಡಿನಲ್ಲೂ ಬೆಳಗಲು ಆತ

ನ ಯಾವಶಕ್ತಿಯು ಕಾರಣವಾಯಿತು! ಆತನು ಕೋಟ್ಯಾಧೀಶನೇ, ರಾಷ್ಟ್ರಾಧಿಪತಿಯೇ, ಅಥವಾ ರಾಜಕುಮಾರನೇ! ಬಾಬು ಸುರೇಂದ್ರನಾಥನು ವಿಶೇಷ ಧನವಂತನೂ, ರಾಜ್ಯಾಧಿಪತಿಯೂ ಅಲ್ಲ. ಆದರೂ, ಕೇವಲ ಧನದಿಂದಲೂ ಅಧಿಕಾರದಿಂದಲೂ ಯಾವ ಕಾರ್ಯವಾಗುವುದು ಸಾಧ್ಯವಲ್ಲವೋ ಅಂತಹ ಮಹತ್ಕಾರ್ಯಮಾಡಿ ಮಾತೃದೇಶದ ಸೇವೆಮಾಡಿದನು. ಆಗಿನ ಕಾಲದಲ್ಲಿ ಆತನು ಮಾಡಿದಂತಹ ಸೇವೆಯನ್ನು ನೂರಾರುಮಂದಿ ಕೋಟ್ಯಾಧೀಶರೂ, ಹಲವುಮಂದಿ ರಾಜರೂ ಒಂದಾಗಿ ಕಲೆತಿದ್ದರೂ ಮಾಡಲು ಸಾಧ್ಯವಿರುತ್ತಿರಲಿಲ್ಲ. ಅಂತಹ ಒಂದು ಅಪೂರ್ವ ಸೇವೆಯು ರಾಷ್ಟ್ರಜಾಗೃತಿಯಾಗಬೇಕಾಗಿದ್ದ ಆಗಿನ ಕಾಲದಲ್ಲಿ ಆ ಮಹನೀಯನಿಂದ ನೆರವೇರಿತು.

ಅಗಣಿತ ಧನದಿಂದಲೂ, ಅಧಿಕಾರದಿಂದಲೂ ಆಗದಿದ್ದ ಅಂತಹ ಯಾವ ಸೇವೆಯು ಬಾಬು ಸುರೇಂದ್ರನಾಥನಿಂದ ನಡೆಯಿತು, ಎಂದು ತಿಳಿಯಲು ವಾಚಕ ಮಹಾಶಯರು ಆತುರರಾಗಿರಬಹುದು! ಆತನು ಮಹಾವಕ್ತೃವು. ಆತನ ವಾಗ್ಝರಿಯು ಶಿವಜಟಾನಿರ್ಮುಕ್ತವಾದ ನಿರ್ಜರತರಂಗಿಣಿಯಂತೆಯೂ, ಕುಂಭದ್ರೋಣವೃಷ್ಟಿಯಂತೆಯೂ, ನಿರರ್ಗಳವಾಗಿ ಪ್ರವಹಿಸತಕ್ಕದು. ಆತನ ವಕ್ತೃತ್ವ ವೈಭವವನ್ನು ಗ್ರೀಸ್‌ದೇಶದ ಡೆಮಾಸ್ತನೀಸ್ ಮತ್ತು ಇಟಲಿಯ ಸಿಸಿರೋ ಈ ವಕ್ತೃಶಿರೋಮಣಿಗಳ ವಾಗ್ಝರಿಯೊಂದಿಗೆ ಹೋಲಿಸುತ್ತಿದ್ದುದುಂಟು. ಘಂಟೆ ಘಂಟೆಗಳವರೆಗೆ ಮಾತನಾಡಿದರೂ, ಆ ಮಹನೀಯನ ಕಂಠಧ್ವನಿಯು ಕುಗ್ಗಿದುದಿಲ್ಲ, ವಾಕ್ಪೌರುಷವು ಕುಂದಿದುದಿಲ್ಲ, ಶಬ್ದಜಾಲದ ಒರತೆಯು ಬತ್ತಿದುದಿಲ್ಲ. ಸುರೇಂದ್ರನಾಥನ ಉಪನ್ಯಾಸವೆಂದರೆ ಜನರು ತಂಡ ತಂಡವಾಗಿ ಹತ್ತುಸಾವಿರ ಸಂಖ್ಯೆಯಿಂದ ನೆರೆಯುವರು. ಆತನ ವಕ್ತೃತ್ವ ಸರಣಿಯು ದೇಶೀಯರ ಹೃದಯದಲ್ಲಿ ದೇಶಾಭಿಮಾನದ ಅಗಣಿತ ತರಂಗಗಳನ್ನು ಹುಟ್ಟಿಸಿ ಉಕ್ಕಿಸುತ್ತಿದ್ದಿತು. ಹಾಗೆ ದೇಶಾಭಿಮಾನ ಪರಿಪೂರಿತ ಹೃದಯವಲ್ಲವೆ, ಸಾಧನೆಯಿಂದ ತನುಮನಧನಗಳನ್ನು ತೆತ್ತು ದೇಶವನ್ನುದ್ಧರಿಸಲು ಸೊಂಟಕಟ್ಟಲು ಸಿದ್ಧವಾಗಬಲ್ಲುದು! ಇಂದು ಮಹಾತ್ಮರ ಭೇರೀನಿನಾದವನ್ನು ಕೇಳಿದೊಡನೆಯೇ ಜನರು ಪ್ರಾಣಗಳನ್ನು ತೃಣಮಾತ್ರವೆಂದೆಣಿಸಿ ದೇಶಕಾರ್ಯಕ್ಕೆ ನುಗ್ಗುತ್ತಲಿದ್ದರೆ, ಇದರ ಪ್ರಥಮಪಾಠವು ಇಂದಿಗೆ ನಾಲ್ವತ್ತೈವತ್ತು ವರ್ಷಗಳ

ಹಿಂದೆ ನಮ್ಮ ಕಥಾನಾಯಕನಿಂದ ಬೋಧಿಸಲ್ಪಟ್ಟಿತು ಎಂದು ತಿಳಿಯಬೇಕು. ಜನಾಂಗಕ್ಕೆ ಪ್ರಾರಂಭದ ಆ ಬಾಲಪಾಠವನ್ನು ನಿಷ್ಕಾಮಬುದ್ಧಿಯಿಂದಲೂ ನಿಸ್ವಾರ್ಥತೆಯಿಂದಲೂ ನಡೆಯಿಸಿದ ಈ ಮಹನೀಯನ ಉಪಕಾರವನ್ನು ದೇಶವು ಕೃತಜ್ಞತೆಯಿಂದ ಸ್ಮರಿಸತಕ್ಕುದು ಆವಶ್ಯಕ. ಭಾರತ ರಾಷ್ಟ್ರವೆಂಬ ಮಹಾಸೌಧದ ಗೋಡೆಗಳನ್ನು ಕಟ್ಟುವ, ಅದರಮೇಲೆ ತೊಲೆ ಬೋದಿಗೆಗಳನ್ನು ಏರಿಸುವ, ಹೆಂಚುಗಳನ್ನು ಹೊದ್ದಿಸುವ ಅಥವ ಅದನ್ನು ಸುಣ್ಣಬಣ್ಣಗಳಿಂದ ಸಿಂಗರಿಸುವ ಕಾರ್ಯವು ಯೋಗ್ಯ ಕರ್ಮಚಾರಿಗಳಿಂದ ಈಗೀಗ ನಡೆಯುತ್ತಿರಬಹುದಾದರೂ, ಆ ಕಟ್ಟಡದ ತಳಹದಿಯ ಕಲ್ಲು ಗಾರೆಗಳನ್ನು ಹೊತ್ತು ತಂದು, ತಳಪಾಯ ಶುದ್ಧಿಯಿಂದ ಗೋಡೆಯನ್ನು ಕಟ್ಟಲು ಪ್ರಾರಂಭಮಾಡಿದವರು ನಮ್ಮ ಕಥಾನಾಯಕ ಪ್ರಭೃತಿ ವ್ಯಕ್ತಿಶ್ರೇಷ್ಠರೇ! ಎಂದು ಯಾವ ವ್ಯಕ್ತಿಯಿಂದ ಎಷ್ಟು ಪ್ರಮಾಣದ ಕೆಲಸ ನಡೆಯಬೇಕಾದುದು ಆವಶ್ಯಕವೋ ಅಂದು ಆತನಿಂದ ಅಷ್ಟು ಕೆಲಸವನ್ನು ಸರ್ವರ ಹೃದಯಾಂತರ್ವರ್ತಿಯಾದ ಪರಮೇಶ್ವರನೇ ನಿಂತು ನಡೆಯಿಸುವನು! ಭಗವಂತನ ಕೃಪಾಕಟಾಕ್ಷಕ್ಕೆ ಒಳಪಡದೆ ಇಂದಿನ ಭಾರತ ಸ್ವಾತಂತ್ರ್ಯ ಚಳವಳಿಯು ಏನೋ ಹೇಗೋ ನಡೆಯುತ್ತಿರುವುದು ಎಂದು ಯಾವನಾದರೊಬ್ಬನು ಹೇಳುವುದಾದರೆ, ಅವನನ್ನು ನಾಸ್ತಿಕನೆಂದೆನ್ನಲು ಏನೂ ಸಂದೇಹವಿಲ್ಲ. ದೇವರು ಪ್ರತಿಯೊಂದು ಕಾರ್ಯದಲ್ಲೂ ತನ್ನ ಅವ್ಯಕ್ತ ಹಸ್ತವನ್ನಿಟ್ಟೇ ಅದನ್ನು ನಡೆಯಿಸುತ್ತಿರುವನು. ಹಾಗೆಯೇ ಆ ಲೋಕರಕ್ಷಕನು, ಆ ಕಾಲಕ್ಕೆ ನಮ್ಮ ಕಥಾನಾಯಕನ ಮೂಲಕ ಅಂತಹ ಒಂದು ಮಹತ್ಕಾರ್ಯವನ್ನು ಆಗಮಾಡಿಸಿ, ಆತನ ಜನ್ಮಸಾರ್ಥಕಗೊಳಿಸಿದನು. ಈತನ ಚರಿತ್ರೆಯನ್ನು ಪ್ರತಿಯೊಬ್ಬ ಕನ್ನಡಿಗನೂ ತಪ್ಪದೆ ಓದಿ ದೇಶಾಭಿಮಾನದ ಬೀಜಗಳನ್ನು ಆಯ್ದುಕೊಳ್ಳಬೇಕು. ಇಂತಹ ಮಹನೀಯರ ಜೀವನ ಚರಿತ್ರೆಗಳನ್ನು ಒದಗಿಸುವುದಕ್ಕಾಗಿಯೇ ಜನ್ಮಿಸಿ, ಜೀವಿಸುತ್ತಿರುವ ಗ್ರಂಥಮಾಲೆಯನ್ನು ಸ್ವಹಸ್ತ ಪರಹಸ್ತ ಪ್ರೋತ್ಸಾಹಿಸಬೇಕು.

ಬೆಂಗಳೂರು
ತಾ. ೨-೧೨-೧೯೩೧

ಇತಿ ಸುಜನವಿಧೇಯ
**ಯಂ. ರಾಮರಾವ್**

Is there a land more worthy of service and sacrifice? Where is a land more interesting, more venerated in antiquitiy, more rich in historic traditions, in the wealth of religious, ethical and spiritual conceptions which have left an enduring impression on the civilization of mankind? India is the cradle of true religions. It is the holy land of the East. Here Knowledge first lit her torch. Here in the morning of the world the Vedic Rishies sang those hymns which represent the first yearnings of infant humanity towards the divine ideal.

—*Babu Surendranath Banerjea.*

|| ಶ್ರೀರಾಮಸಹಾಯಂ ||

# ಅಪ್ರತಿಮ ವಕ್ತೃಶಿಖಾಮಣಿ

# ಬಾಬು ಸುರೇಂದ್ರನಾಥ ಬ್ಯಾನರ್ಜೀ

## ಅಧ್ಯಾಯ ೧ "ಜನನ-ಬಾಲ್ಯ-ವಿದ್ಯಾಭ್ಯಾಸ"

ನಮ್ಮ ಪವಿತ್ರ ಮಾತೃಭೂಮಿಯ - ಭರತಖಂಡದ ಕೀರ್ತಿಯು ದಿಗಂತಗಳಲ್ಲೂ ವ್ಯಾಪಿಸುವಂತೆ ಮಾಡಿದ ಹಲವು ಸತ್ಪುತ್ರ-ಪುತ್ರಿಯರು ಈ ನಮ್ಮ ದೇಶಮಾತೆಯ ಪವಿತ್ರ ಗರ್ಭದಲ್ಲಿ ಜನಿಸಿದರು- ಜನಿಸುತ್ತಲಿರುವರು. ಒಬ್ಬನು ತನ್ನಲ್ಲಿ ಧೈರ್ಯವೀರ್ಯ ಗಾಂಭೀರ್ಯಗಳನ್ನು ವೃದ್ಧಿಪಡಿಸಿಕೊಂಡು, ಅವುಗಳಿಂದ ತನ್ನ ಕೀರ್ತಿಪ್ರತಿಷ್ಠೆಗಳನ್ನು ಹೆಚ್ಚಿಸಿಕೊಳ್ಳಬಹುದು. ಆಗಲೂ ಆತನು ಇಂತಹ ದೇಶೀಯನು, ಅವನ ತಾಯಿತಂದೆಗಳಿಂಥವರು ಎಂದು ಅವನ ಮಾತೃದೇಶಕ್ಕೂ ಮಾತಾಪಿತೃಗಳಿಗೂ ಕೀರ್ತಿಪ್ರತಿಷ್ಠೆಗಳು ಪ್ರಾಪ್ತವಾಗುವುವು. ಒಬ್ಬನು ಚತುಶ್ಶಾಸ್ತ್ರಪಂಡಿತನಾಗಿ, ವೇದವೇದಾಂಗ ಪಾರಂಗತನಾಗಿ ಅದ್ವಿತೀಯ ವಿದ್ಯಾನಿಧಿಯೆಂದೆನ್ನಿಸಬಹುದು. ಆಗಲೂ ಆತನ ವಿದ್ಯಾದಿಗಳಿಂದ ಆತನಿಗೆ ಮಾತ್ರವಲ್ಲದೆ ಆತನು ಜನ್ಮಿಸಿದ ಮನೆತನ, ಗ್ರಾಮ, ದೇಶ ಮುಂತಾದುವುಗಳಿಗೆ ಕೀರ್ತಿಯು ಪ್ರಾಪ್ತವಾಗುವುದು. ಒಬ್ಬನು ವಿವಿಧ ವೃತ್ತಿ-ವ್ಯವಹಾರಗಳಲ್ಲಿ ಪ್ರವೇಶಿಸಿ, ಅಗಣಿತ ಧನಕನಕಾದಿಗಳನ್ನು ಗಳಿಸಬಹುದು. ಆಗಲೂ ಇಂಥವನೊಬ್ಬನು ಐಶ್ವರ್ಯವಂತನು, ಲಕ್ಷ್ಮೀಪುತ್ರನು, ಕೋಟ್ಯಾಧೀಶನು- ಎಂದು ಅವನಿಗೆ ಕೀರ್ತಿಯುಂಟಾಗಬಹುದಲ್ಲದೆ, ಅವನ ಮೂಲಕ ಅವನ ಊರಿಗೂ, ಮನೆತನಕ್ಕೂ ಕೀರ್ತಿಪ್ರತಿಷ್ಠೆಗಳು ಲಭಿಸುವುವು. ಆದುದರಿಂದ ಪ್ರತಿಯೊಬ್ಬ ಬಾಲಕನೂ, ತನ್ನ ಕಾಲವನ್ನು ವ್ಯರ್ಥವಾಗಗೊಳಿಸದೆ, ಸದಾ ಕಾರ್ಯತತ್ಪರನಾಗಿದ್ದು, ವಿದ್ಯೆಯನ್ನೂ, ಧನವನ್ನೂ ಮಾತ್ರವಲ್ಲದೆ

ಸದ್ಗುಣ, ಸದಾಚರಣೆಗಳನ್ನೂ ಸಂಪಾದಿಸಿ ತನ್ಮೂಲಕ ತಾನೂ ಯಶೋವಂತನಾಗಬೇಕಲ್ಲದೆ, ತನಗೆ ಜನ್ಮವಿತ್ತ ಮನೆತನ, ಗ್ರಾಮ, ದೇಶಗಳಿಗೂ ಕೀರ್ತಿಯುಂಟಾಗುವಂತೆ ಪರಿಶ್ರಮ ಮಾಡಬೇಕು.

ಆದರೆ ಮೇಲೆಹೇಳಿದ ಕೆಲಕೆಲವು ಪರಿಸ್ಥಿತಿಗಳಲ್ಲಿ ವ್ಯಕ್ತಿಯು ಕೇವಲ ಸ್ವಪ್ರಯೋಜನಕ್ಕಾಗಿ ಗಳಿಸಿದ ವಿದ್ಯಾ, ಧನ, ದೇಹಬಲ ಮುಂತಾದ ಸೌಭಾಗ್ಯಗಳಿಂದ ಪ್ರಾರಂಭಕ್ಕೆ ಅವನಿಗೆ ಕೀರ್ತಿಪ್ರತಿಷ್ಠೆಗಳು ಪ್ರಾಪ್ತವಾಗಿ, ತರುವಾಯ ಆತನ ಸಂಬಂಧದಿಂದ ದೇಶಕ್ಕೂ ಹೆಸರು ಬರಬಹುದು- ಮಾತ್ರವಲ್ಲದೆ ಆತನಿಂದ ನಿಜವಾಗಿ ನಡೆದ ದೇಶಸೇವೆಯೆಂಥದು? ಅವನು ದೇಶಸೇವಾ ಗಂಧವನ್ನೇ ಅರಿಯದಿದ್ದರೂ, ಅವನು ವಿದ್ಯಾವಂತನೂ ಧನವಂತನೂ ವ್ಯವಹಾರ ಚತುರನೂ ಎಂದು ಹೆಸರುವಾಸಿಯಾಗಬಹುದು. ಅವನಿಂದ ದೇಶಕ್ಕಾದ ನಿಶ್ಚಯವಾದ ಪ್ರಯೋಜನವೇನು? ಆದರೆ ಯಾವನು ತನಗೆ ಭಗವದ್ದತ್ತವಾಗಿ ಲಭ್ಯವಾಗಿರುವ ವಿದ್ಯೆಯನ್ನು ಸೇವಾಬುದ್ಧಿಯಿಂದ-ನಿಷ್ಕಾಮಬುದ್ಧಿಯಿಂದ ತನ್ನ ದೇಶೀಯರಿಗೂ ಬೋಧಿಸುವನೋ, ಅವರ ಅಭಿವೃದ್ಧಿಗಾಗಿ ಪಾಠಶಾಲಾದಿಗಳನ್ನು ಸ್ಥಾಪಿಸಿ ವಿದ್ಯಾದಾನಮಾಡುವನೋ, ಗ್ರಂಥರಚನೆಮಾಡಿ ತನ್ಮೂಲಕ ನವನವೀನ ಭಾವಗಳನ್ನು ಜನಮನದಲ್ಲಿ ತುಂಬಿ ತನ್ಮೂಲಕ ಅವರಿಗೆ ವಿದ್ಯಾದಾನಮಾಡಲು ಯತ್ನಿಸುವನೋ ಅವನ ವಿದ್ಯೆಯೇ ಸಾರ್ಥಕವಾದುದು. ಅದೇ ನಿಜವಾದ ಮಾತೃಸೇವಾರೂಪ ತ್ಯಾಗವೆನ್ನಿಸಲ್ಪಡುವುದು. ಯಾವನು ತನ್ನಲ್ಲಿರುವ ಧನಧಾನ್ಯಗಳನ್ನು ಪ್ರತಿಫಲಾಪೇಕ್ಷೆಯಿಲ್ಲದೆ ದೇಶಹಿತದೃಷ್ಟಿಯಿಂದ ದಾನಮಾಡಿ ತನ್ನ ದೇಶದ ಬಡಬಗ್ಗರ ಪ್ರಾಣರಕ್ಷಣೆ ಮಾಡುವನೋ, ಅವರಿಗೆ ಅನ್ನವಸ್ತ್ರಗಳೂ ಕೈಗೆ ಉದ್ಯೋಗವೂ ಲಭಿಸಲು ಅವಕಾಶವನ್ನು ಕಲ್ಪಿಸಿ, ಅವರ ಬಾಳ್ವೆಗಳನ್ನು ಸುಖಮಯವನ್ನಾಗಿಸುವನೋ ಆತನಲ್ಲಿರುವ ಧನ-ಧಾನ್ಯಗಳೇ- ಐಶ್ವರ್ಯವೇ ಸಾರ್ಥಕವಾದುವು. ಯಾವನೊಬ್ಬನು ಅಗಾಧ ದೇಹಬಲವನ್ನು ಸಂಪಾದಿಸಿ, ಮಲ್ಲಯುದ್ಧದಲ್ಲಿ ಸಕಲ ಮಲ್ಲರಿಗೂ ಮೇಲ್ಗೈಯಾಗಿ, ಆನೆಯನ್ನಾದರೂ ಎತ್ತಿ, ಕಬ್ಬಿಣದ ಸರಳುಗಳನ್ನಾದರೂ ಬಗ್ಗಿಸಿ ಭೀಮಬಲನೆಂದು ಪ್ರತಿಷ್ಠಾವಂತನಾಗಬಹುದು. ಇಂಥಾ ದೇಶದಲ್ಲಿ ಇಂಥವನೊಬ್ಬನಿರುವನೆಂದು ಹೆಸರುವಾಸಿಯೂ ಉಂಟಾಗಬಹುದು.

ಆದರೆ ಅವನಿಂದ ದೇಶಕ್ಕಾದ ನಿಶ್ಚಯ ಪ್ರಯೋಜನವೇನು! ಆದರೆ ಅವನು, ತನ್ನ ದೇಹಬಲ ಶಕ್ತಿಸಾಮರ್ಥ್ಯಗಳಿಂದ ತನ್ನ ದೇಶದಲ್ಲಿರುವ ಪುಂಡರನ್ನಡಗಿಸಿ ದುಷ್ಟರನ್ನು ನಿರ್ಮೂಲಗೊಳಿಸಿ ಸಾಧುಸಜ್ಜನರಿಗೂ ನಿಸ್ಸಹಾಯಕರಾದ ಸ್ತ್ರೀಯರಿಗೂ ಬಾಲಕರಿಗೂ ಅನಾಥರಿಗೂ ಅಭಯಪ್ರದಾನಮಾಡಿ, ಅವರಿಗೆ ಬಂದಿದ್ದ ಆಪತ್ತನ್ನು ನಿವಾರಿಸಿ, ತನ್ನಂತೆಯೇ ಹಲವರನ್ನೂ ಸಿದ್ಧಗೊಳಿಸಿದರಲ್ಲವೆ ಅವನು ಗಳಿಸಿದ ದೇಹಬಲಕ್ಕೂ, ಶಕ್ತಿಸಾಮರ್ಥ್ಯಗಳಿಗೂ ಬೆಲೆಯೂ ಸಾರ್ಥಕ್ಯವೂ ಉಂಟಾದುವು! ಸದ್ಯಃಕಾಲದಲ್ಲಿ ನಮ್ಮ ದೇಶಸ್ಥಿತಿಯಲ್ಲಿ ಯಾವನೊಬ್ಬನು ತನ್ನಮಟ್ಟಿಗೆ ತಾನು ವಿದ್ಯಾವಂತನಾಗುವುದಾಗಲೀ, ಧನವಂತನಾಗುವುದಾಗಲೀ, ವೃತ್ತಿವ್ಯವಹಾರಗಳಲ್ಲಿ ಚತುರನಾಗುವುದಾಗಲೀ, ತನ್ಮೂಲಕ ಹೆಸರುವಾಸಿಯನ್ನು ಗಳಿಸಿ-ದೊಡ್ಡಮನುಷ್ಯನೆನ್ನಿಸಿಕೊಳ್ಳುವುದಾಗಲೀ ಮಾತ್ರವೇ ಪ್ರಯೋಜನಕಾರಿಯಾಗಲಾರದು. ತನ್ನ ಮಟ್ಟಿಗೆ ತಾನು, ತನ್ನ ಪ್ರಯೋಜನವಾದರಾಯಿತು, ಮಿಕ್ಕ ಲೋಕವೆಲ್ಲಾದರೂ ಹೋಗಲಿ ಎಂದು ಬೊಜ್ಜುಬೆಳೆಸಿಕೊಂಡರೆ ಮಾತ್ರ ಏನೂ ಪ್ರಯೋಜನವಿಲ್ಲ. ಹಾಗೊಂದುವೇಳೆ ಲೇಶಮಾತ್ರ ಯಶಸ್ಸು ಪ್ರಾಪ್ತವಾಗಬಹುದಾದರೂ ಅದು ಕಾಡಿನಲ್ಲಿಕಾಯ್ದ ಬೆಳದಿಂಗಳಂತೆ ಯಾರ ಪ್ರಯೋಜನಕ್ಕೂ ಬಾರದೆ ಹೋಗುವುದು. ಈಗ ಬೇಕಾದುದು, ತ್ಯಾಗ - ಭೋಗವಲ್ಲ: ನಿಸ್ವಾರ್ಥತೆಯಿಂದ, ನಿರ್ಲೋಭದಿಂದ ಪ್ರೇಮಪೂರ್ವಕ ಸ್ವಜನಹಿತಸಾಧನೋದ್ದೇಶದಿಂದ ಯಾವ ದೇಶಪುತ್ರನು ತನ್ನ ವಿದ್ಯೆ ವಿಚಾರಶಕ್ತಿ, ಧನ, ಧಾನ್ಯ, ದೇಹಬಲ, ಮುಂತಾದ ಸಕಲ ಶಕ್ತಿಗಳನ್ನೂ ದೇಶಸೇವೆಯೇ ಈಶಸೇವೆ ಎಂಬ ಪವಿತ್ರೋದ್ದೇಶದಿಂದ ಸಮರ್ಪಿಸುವನೋ ಆತನ ದಾನವೇ ಸರ್ವೋತ್ತಮವಾದ ದಾನವು, ಅದರಿಂದ ಕೀರ್ತಿಯು ಲಭಿಸುವುದಿದ್ದರೆ ಲಭಿಸಲಿ. ಈ ಸಂದರ್ಭದಲ್ಲಿ ಉದ್ದೇಶವು ಕೀರ್ತಿಸಂಪಾದನೆಯಲ್ಲ- ಪ್ರತಿಷ್ಠಾಕಾಮಿತ್ವವಲ್ಲ - ಸೇವಾಭಾವನೆ, ದಾನದೃಷ್ಟಿ !

ಭಾರತದೇಶವು ನೂರಾರು ವರ್ಷಗಳ ತುರುಷ್ಕ ಪ್ರಭುಗಳ ಆಳ್ವಿಕೆಯಲ್ಲೂ, ಸ್ವಾರ್ಥಿಗಳಾದ ಪರದೇಶೀಯರ - ಖಂಡಾಂತರದವರ ಆಳ್ವಿಕೆಯಲ್ಲೂ ನೆಗ್ಗಿನುಗ್ಗಾಗಿ, ತನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡು, ಪ್ರಪಂಚದ ಜನಾಂಗಗಳಲ್ಲಿ ನಾಮಾವಶೇಷವಾಗುವ ಸ್ಥಿತಿಗೆಬಂದ ಈ ಸಂದರ್ಭದಲ್ಲಿ, ಭಗವ

ದನುಗ್ರಹದಿಂದಲೋ ಎಂಬಂತೆ ಆ ದೇಶಮಾತೆಯ ಗರ್ಭಸುಧಾಂಬುಧಿಯಲ್ಲಿ ಕೆಲಮಂದಿ ಸುಪುತ್ರರು ಉದ್ಭವಿಸಿ, ತಾವು ಕಲಿತ ವಿದ್ಯೆಯನ್ನೂ ತಾವು ಗಳಿಸಿದ ಧನವನ್ನೂ, ಇತರ ವ್ಯಕ್ತಿಗತಶಕ್ತಿಸಾಮರ್ಥ್ಯಗಳನ್ನೂ ತ್ಯಾಗಬುದ್ಧಿಯಿಂದಲೂ ದೇಶಹಿತದೃಷ್ಟಿಯಿಂದಲೂ ಸಮರ್ಪಿಸಿ ತಮ್ಮ ದೇಶಮಾತೆಯ ಕೀರ್ತಿಪ್ರತಿಷ್ಠೆಗಳನ್ನು ಹೆಚ್ಚಿಸಿದರು. ತಮ್ಮ ಸರ್ವಶಕ್ತಿಗಳನ್ನೂ ಆಕೆಯ ಪಾದಪದ್ಮಗಳ ಸೇವೆಗಾಗಿ ಸಮರ್ಪಿಸಿ ಆಕೆಗೆ ಲೋಕದ ಪ್ರತಿಷ್ಠಿತ ಜನಾಂಗಗಳಲ್ಲಿ ವ್ಯಕ್ತಿತ್ವವನ್ನು ಗಳಿಸಿಕೊಟ್ಟರು. ಅಂತಹ ಮಹನೀಯರಲ್ಲಿ ನಮ್ಮ ಕಥಾನಾಯಕನೂ ಒಬ್ಬನು. ಈತನು ದೇಶಸೇವೆಗೆಂದು ಪಿತ್ರಾರ್ಜಿತವಾದ ದ್ರವ್ಯವನ್ನು ಕೋಟಿಸಂಖ್ಯೆಯಿಂದ ಸಮರ್ಪಿಸಲಿಲ್ಲ. ಗುಡ್ಡವನ್ನು ಕಿತ್ತಿಡಲಿಲ್ಲ. ಈ ಮಹನೀಯನು ತನ್ನ ವಕ್ತೃತ್ವಪ್ರವಾಹದಿಂದ ದೇಶೀಯರ ಮನಸ್ಸಿನಮೇಲೆ ದಟ್ಟವಾಗಿ ಕವಿದಿದ್ದ ಅಂಧಕಾರವನ್ನು ನಿವಾರಿಸುವಲ್ಲಿ ತನ್ನ ಶಕ್ತಿಸಾಮರ್ಥ್ಯಗಳನ್ನು ವ್ಯಯಗೊಳಿಸಿದನು ಅವರಿಗೆ ತಾವಾರು, ತಮ್ಮ ದೇಶವಾವುದು, ತಮ್ಮ ಸ್ಥಿತಿಗತಿಗಳೇನು? ತಾವೇಕೆ ಪರದಾಸ್ಯದ ಬಾಧೆಯಲ್ಲಿ ಸಿಕ್ಕು ನರಳುತ್ತಾ ಆದರೂ ಅದನ್ನೇ ಪರಮ ವರಪ್ರಸಾದವೆಂದು ತಿಳಿದು ಮರುಳಾಗಿದ್ದೇವೆ! ಇದರಿಂದ ನಿವಾರಣೆಹೊಂದಲು ಸಾಧ್ಯವುಂಟೆ? ಹಾಗಿದ್ದರೆ ಅದು ಏಕೆ, ಹೇಗೆ ಸಾಧ್ಯ? ಪರದಾಸ್ಯದಿಂದ ಮುಕ್ತವಾದರೆ ಮುಂದೆ ಪ್ರಾಪ್ತವಾಗುವ ಸ್ಥಿತಿಯಾವುದು! ಅದು ಹೇಗೆ ಪ್ರತಿಯೊಬ್ಬ ದೇಶಪುತ್ರನ ಜನ್ಮಸಿದ್ಧಹಕ್ಕಾಗಿರುವುದು? ಎಂಬ ಮುಂತಾದವಿಚಾರಗಳಲ್ಲಿ ಅಮೌಲ್ಯಜ್ಞಾನತರಂಗಿಣಿಯ ಪ್ರವಾಹವನ್ನು ಹರಿಯಲಿತ್ತು, ಜನಮನದಲ್ಲಿದ್ದ ಮಾಲಿನ್ಯವನ್ನು ತೊಳೆದ ಪ್ರಾರಂಭದ ಮಹತ್ಕಾರ್ಯವೊಂದು ನಮ್ಮ ಕಥಾನಾಯಕನ ನಿಸ್ವಾರ್ಥದೇಶಸೇವೆಯಿಂದ ನೆರವೇರಿತು. ಆತನ ಆಗಿನ ಸೇವೆಯು ಈಗ ದೇಶದಲ್ಲಿ ನಡೆಯುತ್ತಿರುವ ರಾಷ್ಟ್ರೀಯ ಚಳವಳಿಗೆ ಹೇಗೆ ತಳಹದಿಯಾಯಿತು .ಎಂಬದು ಕಥಾನುಸರಣೆಯಿಂದ ಬೋಧವಾಗುವುದು. ವಾಚಕಮಹಾಶಯರು ಸಾವಧಾನದಿಂದ ಮುಂದರಿಸಬೇಕು.

ಬಂಗಾಳಾಪ್ರಾಂತದಲ್ಲಿ ಕುಲೀನ ಬ್ರಾಹ್ಮಣ ಪಂಗಡವು ಬಹು ಗೌರವಪಾತ್ರವಾದುದು. ಈ ಪಂಗಡವು ಸತ್ಯವಂತರೂ ಶುಚಿರ್ಭೂತರೂ ವಿದ್ಯಾಧಿಕರೂ ಆದ ಅನೇಕ ಮಹನೀಯರಿಗೆ ಜನ್ಮವಿತ್ತು, ಆ ದೇಶ ಮರ್ಯಾದೆಯು

ನ್ನು ಕಾಪಾಡುವಲ್ಲಿ ಹೆಚ್ಚುಭಾಗವನ್ನು ವಹಿಸಿದೆ. ಹತ್ತೊಂಬತ್ತನೆಯ
ಶತಮಾನದ ಮಧ್ಯಭಾಗದಲ್ಲಿ ಭಾರತದೇಶದ ಇತರ ಭಾಗಗಳಲ್ಲಿ ದೇಶಭಕ್ತ
ರಾದ ಅನೇಕಮಂದಿ ಮಹನೀಯರು ಜನ್ಮವೆತ್ತಿದಂತೆಯೇ, ಬಂಗಾಳಾದಲ್ಲೂ
ಜನ್ಮವೆತ್ತಿ ದೇಶಸೇವೆಗೆ ಸಿದ್ಧರಾದ ಅನೇಕಮಂದಿ ಮಹನೀಯರುಂಟು.
ಬಂಗಾಳದ ಕುಲೀನ ಬ್ರಾಹ್ಮಣ ಸಮಾಜದಲ್ಲಿ ಬಾಬು ದುರ್ಗಾಚರಣ ಬ್ಯಾ
ನರ್ಜೀ ಎಂಬೊಬ್ಬ ಸದ್ಗೃಹಸ್ಥನು ಕಲ್ಕತ್ತಾನಗರದಲ್ಲಿ ವಾಸವಾಗಿದ್ದ
ನು. ಆತನು ಆಂಗ್ಲೇಯ ವೈದ್ಯಶಾಸ್ತ್ರವನ್ನಭ್ಯಸಿಸಿ ತನ್ನ ಉದ್ಯೋಗದಿಂದ
ಸಹವಾಸಿಗಳಿಗೆ ಉಪಕಾರಿಯೆನಿಸಿ ಜೀವಿಸಿಕೊಂಡಿದ್ದನು ಆತನಿಗೆ ಐದು
ಮಂದಿ ಗಂಡುಮಕ್ಕಳಾದರು. ನಮ್ಮ ಕಥಾನಾಯಕನು, ಆ ಐದು ಮಂದಿ
ಪುತ್ರರಲ್ಲಿ ಎರಡನೆಯವನಾಗಿ ೧೮೪೮ನೆಯ ಸಂವತ್ಸರದಲ್ಲಿ ಜನ್ಮವೆತ್ತಿದನು.
ತಂದೆಯಲ್ಲಿದ್ದ ಪರೋಪಕಾರ ಬುದ್ಧಿಯೂ, ಕೈಕೊಂಡಕಾರ್ಯದಲ್ಲಿ ಏಕಾಗ್ರ
ತೆಯಿಂದ ತೊಡಗುವ ನಿಶ್ಚಲ ಮನೋದಾರ್ಢ್ಯವೂ, ಕಷ್ಟಸಹಿಷ್ಣುತಾಸ್ವಭಾ
ವವೂ ಈ ಎರಡನೆಯ ಮಗನಲ್ಲಿ ಅಚ್ಚಳಿಯದೆ ಮೂಡಿದ್ದುವು. ಬಾಲಕ ಸು
ರೇಂದ್ರನಾಥನು ತನ್ನ ಆಟಪಾಟಗಳಿಂದ ತಾಯಿತಂದೆಗಳಿಗೆ ಪರಮಾನಂದ
ದಾಯಕನಾಗಿ ತನ್ನ ಬಾಲ್ಯವನ್ನು ಕಳೆದನು.

ಬಾಲಕನಿಗೆ ಐದು ವರ್ಷ ವಯಸ್ಸಾದೊಡನೆಯೇ, ತಂದೆ ದುರ್ಗಾಚ
ರಣ ಬ್ಯಾನರ್ಜಿಯು ತನ್ನ ಮಗನನ್ನು ಪ್ರಾರಂಭ ವಿದ್ಯಾಭ್ಯಾಸಕ್ಕೆಂದು
ಒಂದು ಪಾಠಶಾಲೆಗೆ ಕಳುಹಿಸಿದನು. ಅಲ್ಲಿ ಆಡುತ್ತ ಪಾಡುತ್ತ ಮಾತೃ
ಭಾಷೆಯ ಪ್ರಾರಂಭ ಪಾಠಗಳನ್ನು ಕಲಿತ ತರುವಾಯ ಸುರೇಂದ್ರನಾಥನು
ತನ್ನ ಏಳನೆಯ ವಯಸ್ಸಿನಲ್ಲಿ ಆಂಗ್ಲೋ ಇಂಡಿಯನ್ನರಿಂದ ನಡೆಸಲ್ಪಡುತ್ತಿದ್ದ
ಡೌಟನ್ ಕಾಲೇಜೆಂಬ ಒಂದು ಪಾಠಶಾಲೆಗೆ ಸೇರಿ ಇಂಗ್ಲಿಷ್ ಭಾಷಾಭ್ಯಾ
ಸಮಾಡಲಾರಂಭಿಸಿದನು. ಆ ಪಾಠಶಾಲೆಯು ಈಗಿನಂತೆ ಆಗಲೂ, ಕೇವ
ಲ ಆಂಗ್ಲೋ ಇಂಡಿಯನ್ ಬಾಲಕರ ವಿದ್ಯಾಭ್ಯಾಸಕ್ಕೆಂದೇ ಮೀಸಲಾಗಿದ್ದು
ದರಿಂದ ಅಲ್ಲಿನ ಬಾಲಕರಲ್ಲಿ ಆ ಕುಲಕ್ಕೆ ಸೇರಿದವರೇ ಅಧಿಕ ಸಂಖ್ಯಾಕರಿರು
ತ್ತಿದ್ದರು. ಇದರಿಂದ ಬಾಲಕ ಸುರೇಂದ್ರನಾಥನಿಗೆ ಪ್ರಾರಂಭದಿಂದಲೂ
ತನ್ನ ಗೆಳೆಯರೊಂದಿಗೆ ಇಂಗ್ಲಿಷ್ ಭಾಷೆಯಲ್ಲೇ ಮಾತನಾಡುವ ರೂಢಿಬೀ
ಳಲು ಹೆಚ್ಚು ಅವಕಾಶದೊರೆಯಿತು. ಈ ಸೌಲಭ್ಯದಿಂದ ಬಾಲಕನು ಆ

ಚಿಕ್ಕವಯಸ್ಸಿನಲ್ಲೇ ತನ್ನ ಮನೋಭಿಪ್ರಾಯವನ್ನು ತಡೆಬಡೆಯಿಲ್ಲದೆ ಇಂಗ್ಲೀಷ್ ಭಾಷೆಯಲ್ಲೇ ವ್ಯಕ್ತಗೊಳಿಸುವಂತಹ ಒಂದು ಸಾಮರ್ಥ್ಯವನ್ನು ಪಡೆದನು. ಮುಂದೆ, ಬಂಗಾಳಾದೇಶದ ಮಹಾವಕ್ತೃವೆನಿಸಿ ಇಂಡಿಯಾದೇಶದ ಡೆಮೊಸ್ತನೀಸ್ ಎಂಬ ವಿಖ್ಯಾತನಾಮವನ್ನು ಗಳಿಸಿದುದಕ್ಕೆ ಬಾಲ್ಯದಲ್ಲಿ ಆತನಿಗೆ ದೊರೆತ ಈ ಸೌಕರ್ಯವೂ ಒಂದು ಕಾರಣವೆಂದು ಆತನ ಚರಿತ್ರ ಲೇಖಕರಲ್ಲಿ ಕೆಲವರು ಅಭಿಪ್ರಾಯಪಟ್ಟಿದ್ದಾರೆ.

ಡೌರ್ಟ್ ಕಾಲೇಜಿನಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದ ಸುರೇಂದ್ರನಾಥನು ಪ್ರಾರಂಭದ ಕೆಲವರ್ಷಗಳು ಇಂಗ್ಲಿಷಿನೊಂದಿಗೆ ಮಾತೃಭಾಷೆಯನ್ನೂ ಅಭ್ಯಸಿಸುತ್ತಿದ್ದು ತರುವಾಯ, ಇಂಗ್ಲೀಷ್‌ಭಾಷೆಗೆ ಮಾತೃಸ್ಥಾನೀಯವಾದ ಲ್ಯಾಟಿನ್ ಭಾಷೆಯನ್ನು ತೆಗೆದುಕೊಂಡು ಅಭ್ಯಸಿಸಿ ೧೮೬೩ರಲ್ಲಿ ನಡೆದ ಪ್ರವೇಶಪರೀಕ್ಷೆಯಲ್ಲಿ ಪ್ರಥಮವರ್ಗದಲ್ಲಿ ಉತ್ತೀರ್ಣನಾದನು. ಇನ್ನೂ ಕೇವಲ ಹದಿನೈದು ವರ್ಷ ವಯಸ್ಸಿನಲ್ಲೇ ಅಷ್ಟುಮಟ್ಟಿನ ಪ್ರತಿಭೆಯನ್ನು ವ್ಯಕ್ತಪಡಿಸಿದ ಆತನನ್ನು ಆ ಕಾಲೇಜಿನ ಉಪಾಧ್ಯಾಯ ವರ್ಗದವರು ಒಂದು ವಿದ್ಯಾರ್ಥಿ ವೇತನವಿತ್ತು ಪ್ರೋತ್ಸಾಹಗೊಳಿಸಿದರು. ಅದರ ಮಾರನೇ ವರ್ಷವೇ ನಡೆದ ಎಫ್. ಎ. ಪರೀಕ್ಷೆಯಲ್ಲೂ ಸುರೇಂದ್ರನಾಥನು ಪ್ರಥಮ ಶ್ರೇಣಿಯಲ್ಲೇ ತೇರ್ಗಡೆ ಹೊಂದಿದನು. ಈ ಬಾರಿಯೂ ಆತನಿಗೆ ಇನ್ನೂ ಉತ್ತಮದರ್ಜೆಯ ವಿದ್ಯಾರ್ಥಿ ವೇತನವು (*Senior Scholarship*) ಲಭ್ಯವಾಯಿತು. ಹೀಗೆ ಮೇಲೆ ಮೇಲೆ ಪ್ರೋತ್ಸಾಹಪಡಿಸಲ್ಪಟ್ಟ ಆ ವಿದ್ಯಾರ್ಥಿಯು ಹಾಗೆಯೇ ತನ್ನಾಪವಿತ್ರೋದ್ಯಮದಲ್ಲಿ ಮುಂದರಿದು ೧೮೬೮ನೆಯ ಸಂವತ್ಸರದಲ್ಲಿ ಬಿ. ಎ. ಪರೀಕ್ಷೆಯಲ್ಲೂ ತೇರ್ಗಡೆ ಹೊಂದಿದನು. ಬಿ. ಎ. ಪರೀಕ್ಷೆಗೆ ಕುಳ್ಳಿರಲು ಕೆಲವು ದಿನಗಳ ಪೂರ್ವದಲ್ಲಿ ಅವನು ಕಾಹಿಲೆಬಿದ್ದನಾದುದರಿಂದ ಅದರಲ್ಲಿ ಪ್ರಥಮವರ್ಗದಲ್ಲಿ ತೇರ್ಗಡೆಯಾಗಲಿಲ್ಲ-ದ್ವಿತೀಯ ಶ್ರೇಣಿಯಲ್ಲಿ ತೇರ್ಗಡೆಹೊಂದಿದನು.

ಕಾಲೇಜಿನಲ್ಲಿ ವಿದ್ಯಾಭ್ಯಾಸಮಾಡಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾದೊಡನೆಯೇ-ತಾವು ಸರ್ವಜ್ಞರಾದೆವು, 'ಇನ್ನು ತಾವು ಕಲಿಯಬೇಕಾದುದು ಏನೂ ಇಲ್ಲ' ಎಂಬ ಅಭಿಪ್ರಾಯವು ಕೆಲಮಂದಿ ಯುವಕರ ತಲೆಯನ್ನು ಹೊಗುವುದುಂಟು. ತನ್ನ ವಿದ್ಯೆಯ ವಿಷಯದಲ್ಲಿ ಯಾವನಿಗೆ ಎಂದು

ಅಹಂಕಾರವು ಉಂಟಾಗುವುದೋ ಅಂದಿನಿಂದಲೇ ಅವನ ಅವನತಿಗೆ ಆರಂಭವೆಂದು ತಿಳಿಯಬೇಕು. ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗುವುದೆಂದರೆ ವಿದ್ಯಾಭ್ಯಾಸವನ್ನು ಮುಗಿಸಿದಂತಲ್ಲ - ಆಂಗ್ಲೇಯಭಾಷಾ ಭಂಡಾರದ ಬೀಗದ ಕೈಯನ್ನು 'ಪಡೆದಂತೆ' ಎಂದು ಮಾತ್ರ ಭಾವಿಸಬೇಕು. ನಮ್ಮ ಕಥಾನಾಯಕನು, ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾದೊಡನೆಯೇ ತಾನಿನ್ನು ಕಲಿಯಬೇಕಾದುದು ಏನೂ ಇಲ್ಲವೆಂದು ಭಾವಿಸಲಿಲ್ಲ. ಅಂದಿನಿಂದಲೇ ತನ್ನ ನಿಜವಾದ ವಿದ್ಯಾಭ್ಯಾಸವು ಆರಂಭವಾಗತಕ್ಕುದು ಎಂದು ತಿಳಿದನು. ಆವರೆಗೆ ನಡೆದುದು ಕೇವಲ ವಿದ್ಯಾಭ್ಯಾಸಕ್ಕಾಗಿ ಬೇಕಾಗಿದ್ದ ಪೂರ್ವಸಿದ್ಧತೆ. ಪ್ರಾಜ್ಞರಾದ ಮಾತಾಪಿತೃಗಳಿಂದ ಜನನ ಹೊಂದಿ, ಉತ್ತಮ ವಾತಾವರಣದಲ್ಲಿ ಬಾಲ್ಯವನ್ನು ಕಳೆದು ಸಮಾಚೀನ ಸನ್ನಿವೇಶಗಳಿಗೊಳಪಟ್ಟು ಶ್ರದ್ಧೆಯಿಂದ ವಿದ್ಯಾಭ್ಯಾಸಮಾಡಿದರೆ, ಆ ಪರಿಶ್ರಮದ ಫಲವು ಎಂತಿರುವುದು ಎಂಬುದನ್ನು ನಮ್ಮ ಕಥಾನಾಯಕನ ಜೀವಿತದಿಂದ ಗ್ರಹಿಸಬಹುದು.



## ಅಧ್ಯಾಯ ೨ "ಇಂಡಿಯನ್ ಸಿವಿಲ್ ಸರ್ವಿಸ್"

ಸುರೇಂದ್ರನಾಥನು ಕಲ್ಕತ್ತಾ ಡೌವ್ಟನ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದೊಡನೆಯೇ-ಸ್ವಾಭಾವಿಕವಾಗಿಯೇ ಮುಂದೇನು ಮಾಡಬೇಕೆಂಬ ಪ್ರಶ್ನೆಯುದಯಿಸಿತು. ಆ ಕಾಲದಲ್ಲಿ, ಭಾರತೀಯರ ಮನಸ್ಸಿನಲ್ಲಿ ಬ್ರಿಟಿಷ್ ಸರ್ಕಾರದ ವಿಷಯದಲ್ಲೂ ಬ್ರಿಟಿಷ್ ಜನಗಳ ವಿಷಯದಲ್ಲೂ ಈಗಿನಂತೆ ಅಸೂಯೆ ಅಪನಂಬಿಕೆಗಳು ಉದಯಿಸಿರಲಿಲ್ಲವಾದುದರಿಂದ ಉಚ್ಚಶ್ರೇಣಿಯ ಯುವಕರು ಇಂಗ್ಲೆಂಡಿಗೆ ಹೋಗಿ, ಪ್ರೌಢವಿದ್ಯಾಭ್ಯಾಸ ಮಾಡಿ, ಪದವೀಧರರಾಗಿ ಹಿಂದೂಸ್ಥಾನಕ್ಕೆ ಹಿಂದಿರುಗಿ ದೊಡ್ಡದೊಡ್ಡ ಅಧಿಕಾರಸ್ಥಾನಗಳನ್ನು ಆಕ್ರಮಿಸಬೇಕು ಎಂಬ ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ಪ್ರಾರಂಭಕ್ಕೆ ಇಂಗ್ಲೀಷರ ಸಂಬಂಧವು ಬಂಗಾಳಾದೇಶೀಯರಿಗೇ ವಿಶೇಷವಾಗಿ ಆದುದರಿಂದ ಅವರಲ್ಲೇ ಅನೇಕಮಂದಿ ಯುವಕರು ಇಂಗ್ಲೆಂಡಿಗೆ ಹೋಗಿ ಬ್ಯಾರಿಷ್ಟರ್ ಪರೀಕ್ಷೆಗೂ, 'ಇಂಡಿಯನ್ ಸಿವಿಲ್

ಸರ್ವಿಸ್” ಪರೀಕ್ಷೆಗೂ ಅಭ್ಯಾಸಮಾಡುತ್ತಿದ್ದುದುಂಟು. ನೂತನವಾಗಿ ಪಟ್ಟ ಪರೀಕ್ಷೆಯಲ್ಲಿ ತೇರ್ಗಡೆಯಾಗಿ- ಮುಂದೆ ಅನುಸರಿಸಬೇಕಾದ ಮಾರ್ಗ ತೋರದೆ ಕುಳಿತಿದ್ದ ಸುರೇಂದ್ರನಾಥನಿಗೆ ತಾನೂ ಇಂಗ್ಲೆಂಡಿಗೆ ಹೋಗಿ ಐ. ಸಿ. ಎಸ್. ಪರೀಕ್ಷೆಗೆ ಏಕೆ ಪ್ರಯತ್ನಿಸಬಾರದು ಎಂಬ ಆಸೆಯುಂಟಾ ಯಿತು. ತನ್ನ ಉದ್ದೇಶವನ್ನು ಪ್ರಾರಂಭಕ್ಕೇ ಮನೆಯವರೊಂದಿಗೆ ತಿಳಿಸಿ ದರೆ, ಸಮುದ್ರಪ್ರಯಾಣವನ್ನೂ ಪರದೇಶವಾಸವನ್ನೂ ವಿರೋಧಿಸುತ್ತಿದ್ದ ತನ್ನ ಹಿರಿಯರು ಒಂದುವೇಳೆ ತನ್ನ ಪ್ರಯಾಣಕ್ಕೆ ವಿಘ್ನವನ್ನುಂಟುಮಾ ಡುವರೋ ಎಂದು ತಿಳಿದು ಕೆಲವುಕಾಲ ಆ ವಿಚಾರವನ್ನೇ ಎತ್ತದೆ ಒಳ ಗೊಳಗೇ ಸಿದ್ಧಪಡಿಸಿಕೊಳ್ಳುತ್ತಿದ್ದನು. ಆತನ ಮಹತ್ವಾಕಾಂಕ್ಷೆಗೆ ವಿಶೇಷ ಪ್ರೋತ್ಸಾಹ ಕೊಡುತ್ತಿದ್ದ ಆಗಿನ ಡೌರ್ಟ ಕಾಲೇಜಿನ ಪ್ರಿನ್ಸಿಪಾಲನು- ಸಮುದ್ರ ಪ್ರಯಾಣವು ನಿಷಿದ್ಧ ಎಂಬ ಮುಂತಾದ ಸಂಕುಚಿತ ಭಾವ ಗಳನ್ನು ಮನಸ್ಸಿಗೆ ತಂದುಕೊಳ್ಳದೆ ಧೈರ್ಯದಿಂದ ಪ್ರಯಾಣಮಾಡೆಂದು ಆತನಿಗೆ ಮೇಲಿಂದಮೇಲೆ ಉತ್ತೇಜನಗೊಳಿಸುತ್ತಿದ್ದನು. ಎಂತೂ ೧೮೬೮ ನೆಯ ಸಂವತ್ಸರದ ಕೊನೆಯ ಭಾಗದಲ್ಲಿ ಸುರೇಂದ್ರನಾಥನು ಇಂಗ್ಲೆಂಡಿಗೆ ಪ್ರಯಾಣಮಾಡಿಯೇಬಿಟ್ಟನು.

ಇಂಗ್ಲೆಂಡನ್ನು ಸೇರಿದಮೇಲೆ ಸುರೇಂದ್ರನಾಥನು ಲಂಡನ್ ನಗರದ ಯೂನಿವರ್ಸಿಟಿ ಕಾಲೇಜ್ ಎಂಬ ಕಲಾಶಾಲೆಯನ್ನು ಸೇರಿ ಪ್ರೊಫೆಸರ್ ಹೆನ್ರಿ ಮಾರ್ಲೀ ಎಂಬವರಲ್ಲಿ ಇಂಗ್ಲೀಷ್ ಪ್ರೌಢಸಾಹಿತ್ಯವನ್ನೂ, ಪ್ರೊಫೆ ಸರ್ ಗೋಲ್ಡ್‌ಸ್ಟುಕರ್ ಎಂಬವರ ಬಳಿ ಸಂಸ್ಕೃತವನ್ನೂ ಅಭ್ಯಾಸಮಾಡ ಲಾರಂಭಿಸಿದನು. ವಿದ್ಯಾಭ್ಯಾಸವು ವಿಶೇಷ ಶ್ರದ್ಧಾಭಕ್ತಿಯಿಂದ ನಡೆ ಯಿತು. ೧೮೬೯ರಲ್ಲಿ ನಡೆದ ಐ ಸಿ. ಎಸ್. ಪರೀಕ್ಷೆಗೆ ಸುರೇಂದ್ರನಾಥನು ಉಮೇದುವಾರನಾಗಿ ಕುಳಿತಿದ್ದನು. ಆಗ ಆತನೊಂದಿಗಿದ್ದವರಲ್ಲಿ ಸುಪ್ರ ಸಿದ್ಧರಾದ ರಮೇಶಚಂದ್ರದತ್ತ, ಬಿಹಾರಿಲಾಲಗುಪ್ತ ಮತ್ತು ಶ್ರೀಪಾದ ಬಾಬಾಜಿಠಾಕುರ್ ಎಂಬವರು ಅತಿ ಮುಖ್ಯರು. ಈ ಮಧ್ಯೆ ಒಂದು ವಿಘ್ನ ವುಂಟಾಯಿತು. ಗೊತ್ತಾಗಿದ್ದ ವಯೋಪರಿಮಾಣವು ಮೀರಿದೆಯೆಂಬ ಕಾರ ಣದಿಂದ ಸುರೇಂದ್ರನಾಥನಿಗೆ ಪ್ರಾರಂಭದಲ್ಲಿ ಆ ಪರೀಕ್ಷೆಗೆ ಕುಳ್ಳಿರಲು ಅನು ಮತಿ ದೊರೆಯುವುದು ಸ್ವಲ್ಪ ಕಷ್ಟವಾಯಿತು. ಆದರೆ ಮೇಲ್ಕಂಡ ಇಬ್ಬರು

ಪ್ರೊಫೆಸರರು ತಮ್ಮ ಪ್ರಿಯಶಿಷ್ಯನ ವಿಷಯದಲ್ಲಿ ಅಭಿಮಾನವಿಟ್ಟು ಶಿಫಾರಸುಮಾಡಿದುದರಿಂದ ಅನುಮತಿದೊರೆತು ಆತನು ಪರೀಕ್ಷೆಗೆ ಕುರಿತು ಉತ್ತಮರೀತಿಯಿಂದಲೇ ತೇರ್ಗಡೆಯಾದನು. ಪರೀಕ್ಷೆಯಾದ ತರುವಾಯ ಮಾತೃದೇಶಕ್ಕೆ ಹಿಂದಿರುಗಿದ ಆತನಿಗೆ ಸರ್ಕಾರದವರು ಒಮ್ಮೆಗೇ ಸಿಲ್ಹಟ್ ಪ್ರಾಂತದ ಅಸಿಸ್ಟೆಂಟ್ ಮ್ಯಾಜಿಸ್ಟ್ರೇಟ್ ಎಂಬ ಉನ್ನತೋದ್ಯೋಗವನ್ನು ಕೊಟ್ಟು ಪ್ರೋತ್ಸಾಹಿಸಿದರು. ಸುರೇಂದ್ರನಾಥನು ಆ ಕಠಿಣವಾದ ಪರೀಕ್ಷೆಯಲ್ಲಿ ಉತ್ತೀರ್ಣನಾದ ಸಂತೋಷದೊಂದಿಗೆ ಮಾತೃದೇಶಾಭಿಮುಖವಾಗಿ ಹಿಂದಿರುಗುವ ವೇಳೆಗೆ ಇತ್ತ ಆತನ ಪ್ರಿಯಜನಕನು ಮೃತನಾಗಿ ಕೆಲವು ವಾರಗಳಾಗಿದ್ದುವು. ಮನೆಯವರು ಮಗನ ಉಚ್ಚಾಶ್ರಯಸ್ಥಿತಿಗಾಗಿಯೂ, ಕುಟುಂಬದ ಯಜಮಾನನ ಮರಣಕ್ಕಾಗಿಯೂ ಏಕಕಾಲದಲ್ಲೇ ಸುಖದುಃಖಗಳೆರಡನ್ನೂ ಅನುಭವಿಸಿ ಸಂಸಾರದ - ಇಹಲೋಕದ ಬಾಳ್ವೆಯ ನಿಶ್ಚಯಸ್ವರೂಪವೆಂಥದೆಂಬುದರ ಅನುಭವಗೊಂಡರು.

ಬಾಬು ಸುರೇಂದ್ರನಾಥ ಬ್ಯಾನರ್ಜಿಯು ೧೮೭೧ನೆಯ ಸಂವತ್ಸರದ ಸೆಪ್ಟಂಬರು ತಿಂಗಳಿನಲ್ಲಿ ಎಂದರೆ ತನ್ನ ೨೩ನೆಯ ವಯಸ್ಸಿನಲ್ಲೇ ಆ ಉನ್ನತೋದ್ಯೋಗವನ್ನು ವಹಿಸಿ ಸಿಲ್ಹಟ್ಟಿಗೆ ಪ್ರಯಾಣಮಾಡಿದನು. ತೀಕ್ಷ್ಣಮತಿಯ-ನವತಾರುಣ್ಯದ ಆ ಅಧಿಕಾರಿಯು ಬಹು ಜವಾಬುದಾರಿಯು ತನ್ನ ಅಧಿಕಾರದ ವಿಶೇಷ ಕಾರ್ಯಭಾರಗಳನ್ನು ಲವಲೇಶವೂ ಕಷ್ಟವೆಂಬುದಿಲ್ಲದೆ ಆಟವೋ ಎಂಬಂತೆ ಮಾಡಿ ಮುಗಿಸಿ ಸಮಾಮಿತ್ರರೊಂದಿಗೆ ವಿನೋದಸಂಭಾಷಣೆ ಆಟಪಾಟಗಳು ಮುಂತಾದುವುಗಳಲ್ಲೇ ಕಾಲಕಳೆಯುತ್ತಿದ್ದನು. ಆತನ ಈ ವಿನೋದಭಾವವು, ಆತನ ಮೇಲ್ಪಟ್ಟ ಇಂಗ್ಲೀಷ್ ಅಧಿಕಾರಿಗಳಿಗೆ ವಿಪರೀತವಾಗಿ ತೋರಿ ಆತನನ್ನು ಏನಾದರೊಂದು ಕಾರಣದಿಂದ ಕಷ್ಟಕ್ಕೆ ಗುರಿಪಡಿಸಿ ನರಳಿಸಬೇಕೆಂದು ಹೊಂಚಿಕೊಂಡಿದ್ದರು. ಹೀಗಿರುವಲ್ಲಿ ಆತನಿಗೆ ಅಧಿಕಾರ ಪ್ರಾಪ್ತವಾಗಿ ಇನ್ನೂ ಎರಡು ವರ್ಷಗಳಾಯಿತೆಂಬಷ್ಟರಲ್ಲೇ ಆತನಮೇಲೆ ಅನೇಕ ಅಪರಾಧಗಳು ಹೊರಿಸಲ್ಪಟ್ಟವು. ಸಾಮಾನ್ಯ ದೃಷ್ಟಿಗೆ ಅವು ತಪ್ಪುಗಳೇ ಅಲ್ಲವೆಂದು ತೋರಬಹುದಾದರೂ, ಬೇಕೆಂದು ತಪ್ಪು ಹೊರಿಸಬೇಕೆಂದು ಹೊಂಚಿ ಕುಳಿತಿದ್ದ ಅವರಿಗೆ ಆ ಅಲ್ಪಾಪರಾಧಗಳೇ ಮಹದಪರಾಧಗಳೆಂದು ಬೋಧವಾಗಿ, ಆತನ

ವಿಚಾರಣೆಗೆಂದು ಪ್ರತ್ಯೇಕವಾದೊಂದು ಕಮಿಷನ್ನನ್ನೇ ಏರ್ಪಡಿಸಿದರು. ಸುರೇಂದ್ರನಾಥನು ಆ ವಿಚಿತ್ರ ಪರಿಸ್ಥಿತಿಯನ್ನು ಕಂಡು ತನ್ನನ್ನು ಮನ್ನಿಸಿ ಉಪಕಾರಮಾಡಿರೆಂದು ಬೇಡಿಕೊಳ್ಳಲಿಚ್ಛಿಸದೆ-ತನ್ನ ವಿಚಾರಕ್ಕಾಗಿ ಏರ್ಪಟ್ಟಿರುವ ಕಮಿಷನ್ನು ತನ್ನ ವಿಚಾರಣೆಯನ್ನು ಬಹಿರಂಗವಾಗಿ ನಡೆಸುವಂತೆ ಮಾತ್ರ ಆಜ್ಞಾಪಿಸಿರೆಂದು ಸರ್ಕಾರದವರನ್ನು ಕೇಳಿಕೊಂಡನು. ಆದರೆ ಆತನ ಆ ಮನವಿಯು ವ್ಯರ್ಥವಾಯಿತು. ಆ ಕಮಿಷನ್ನಿನವರು ಕಲ್ಕತ್ತೆಯಿಂದ ದೂರದ ಒಂದು ಮೂಲೆಯ ಊರಿನಲ್ಲಿ ಗೋಪ್ಯವಾಗಿ ನಡೆಸಿ, ಮೊದಲೇ ಅಭಿಪ್ರಾಯಪಟ್ಟಿದ್ದಂತೆ ಸುರೇಂದ್ರನಾಥನನ್ನು ತಪ್ಪಿತಸ್ಥನೆಂದು ತಮ್ಮ ತೀರ್ಮಾನವನ್ನು ಸರ್ಕಾರಕ್ಕೆ ಕಳುಹಿಸಿದರು. ಸರ್ಕಾರದವರಿಗೂ ಅಷ್ಟು ಮಾತ್ರದ ಒಂದು ಅಭಿಪ್ರಾಯವೇ ಬೇಕಾಗಿದ್ದಿತೋ ಎಂಬಂತೆ ಒಡನೆ ಆತನನ್ನು ಆ ಕೆಲಸದಿಂದಲೇ ವಜಾ (ಡಿಸ್ಮಿಸ್) ಮಾಡಿಬಿಟ್ಟರು. ಆತನು ಮಾಡಿರಬಹುದಾದ ತಪ್ಪಿಗೂ, ಆತನಮೇಲೆ ಹೊರಿಸಲ್ಪಟ್ಟ ತಪ್ಪಿಗೂ, ಅದಕ್ಕಾಗಿ ಆತನಿಗಾದ ಶಿಕ್ಷೆಗೂ ಅಜಗಜಾಂತರವೆಂಬಂತಿದ್ದ ಮೇಲಧಿಕಾರಿಗಳ ಆ ಬಗೆಯ ಅನೀತಿಯ ಆಡಳಿತದ ಕಥೆಯನ್ನು ಕೇಳಿದವರು ಪರಮಾಶ್ಚರ್ಯಪಡುತ್ತಿದ್ದರು. ಈ ವ್ಯವಹಾರದಿಂದ ಒಟ್ಟಿನಲ್ಲಿ ಆತನಿಗಾದ ಮೇಲೆಂದರೆ, ಹಾಗೆ ಕೆಲಸದಿಂದ ವಜಾಮಾಡುವಾಗ್ಗ ಸರ್ಕಾರದವರು ಆತನಿಗೆ ತಿಂಗಳಿಗೆ ಐವತ್ತು ರೂಪಾಯಿಗಳ ವಿರಾಮವೇತನ (Pension) ವು ದೊರೆಯತಕ್ಕದೆಂದು ಅಪ್ಪಣೆಮಾಡಿದ್ದರು. ಸುರೇಂದ್ರನಾಥನು ತನ್ನ ಮೇಲ್ಪಟ್ಟ ಅಧಿಕಾರಿಗಳು ನಿರಂಕುಶತೆಯಿಂದ ತನ್ನಮೇಲೆ ಹೊರಿಸಿದ ಅಪರಾಧದಕಥೆಯನ್ನೂ-ಅನ್ಯಾಯವಾದ ತೀರ್ಪಿನ ವಿಚಾರವನ್ನೂ ಇಂಗ್ಲೆಂಡಿನ ನಾಗರಿಕರೆದುರಿಗೂ, ಪ್ರಿವಿ ಕೌನ್ಸಿಲ್ ಸಭೆಯ ಮುಂದೆಯೂ, ಇಟ್ಟು ವಾದಿಸಬೇಕೆಂಬ ಉದ್ದೇಶದಿಂದ ಇಂಗ್ಲೆಂಡಿಗೆ ಪ್ರಯಾಣಮಾಡಿದನು. ಆದರೆ ಅಲ್ಲಿಯೂ ಆತನಿಗೆ ಯಾವ ವಿಧದಿಂದಲೂ ಪ್ರೋತ್ಸಾಹ ದೊರೆಯಲಿಲ್ಲವಾಗಿ, ಪುನಃ ಸ್ವದೇಶಾಭಿಮುಖವಾಗಿ ಹಿಂದಿರುಗಬೇಕಾಯಿತು.

ಇಂಗ್ಲೀಷ್ ಭಾಷೆಯಲ್ಲಿ (*Out of the evil cometh good*) ಎಂಬೊಂದು ಗಾಥೆಯುಂಟು. ಇದಕ್ಕೆ ಸಾಮ್ಯವಾಗಿ 'ಆದದ್ದೆಲ್ಲಾ ಒಳಿತೇ ಆಯಿತು' ಎಂಬ ನಮ್ಮ ದಾಸರಾಯರ ವಾಕ್ಯವನ್ನು ಉದಹರಿಸಬಹುದು.

ಸುರೇಂದ್ರನಾಥನಂತಹ ಧೀಮಣಿಯನ್ನು ಕಳೆದುಕೊಂಡುದರಿಂದ ಸರ್ಕಾರಕ್ಕೆ ಉಂಟಾದ ನಷ್ಟದ ಹತ್ತರಷ್ಟು ಪ್ರಯೋಜನವು, ಸುರೇಂಧ್ರನಾಥನು ಸರ್ಕಾರಿಯ ಬಂಧನದಿಂದ ಬಿಡುಗಡೆಹೊಂದಿ ಸ್ವತಂತ್ರನಾದುದರಿಂದ ದೇಶಕ್ಕೆ ಪ್ರಾಪ್ತವಾಯಿತು. ಆತನು ಒಂದುವೇಳೆ ಸರ್ಕಾರಿ ನೌಕರಿಯಲ್ಲೇ ಇದ್ದಿದ್ದರೆ ಆತನ ಹೃದಯಮೂಲದಲ್ಲಿ ಮನೆಮಾಡಿಕೊಂಡಿದ್ದ ಈ ದೇಶಾಭಿಮಾನವೆಂಬ ತೀಕ್ಷ್ಣಾಗ್ನಿಯು ಏನಾಗುತ್ತಿತ್ತು, ಹೇಗೆ ವಿಕಾಸ ಹೊಂದುತ್ತಿತ್ತು ಎಂಬುದನ್ನು ಕುರಿತು ಈಗ ಪ್ರಸ್ತಾಪಿಸುವುದು ಅಪ್ರಕೃತವಂತೂ ಆತನು ಬಲವಂತವಾಗಿ ಸರ್ಕಾರಿಯ ಉದ್ಯೋಗದಿಂದ ನಿವೃತ್ತಿಗೊಳಿಸಲ್ಪಟ್ಟುದರಿಂದ ದೇಶಕ್ಕೆನೋ ಅಮೌಲ್ಯನಿಧಿಯೇ ದೊರೆತಂತಾಯಿತು ಸಿವಿಲ್ ಸರ್ವಿಸ್ ಪರೀಕ್ಷೆಗಾಗಿ ಬ್ರಿಟಿಷ್ ರಾಜ್ಯಾಂಗಯಂತ್ರಕ್ಕೆ ಸಂಬಂಧಿಸಿದ ಕೀಲುಗಳನ್ನು ಶೋಧಿಸಿ, ಸಕಲವಿಧ ಕಾಯಿದೆ ಕಾನೂನುಗಳ ಅಂತರ್ಯ ರಹಸ್ಯಗಳನ್ನೆಲ್ಲಾ ಮಥಿಸಿ ಮನನಮಾಡಿಕೊಂಡಿದ್ದ ಆತನು ಕೇವಲ ಹಲವು ನೂರು ರೂಪಾಯಿಗಳಿಗೆ ವಿಕ್ರೀತನಾಗಿ ಒಂದು ಮೂಲೆಯಲ್ಲಿ ಕುಳ್ಳಿರುವುದರ ಬದಲಾಗಿ ದೇಶಸೇವೆಗಾಗಿ ನಡುಕಟ್ಟನಿಲ್ಲಲು ದೊರೆತುದು ದೇಶದ ಪುಣ್ಯೋದಯವಲ್ಲವೆ?

---

## ಅಧ್ಯಾಯ ೩ "ವಿದ್ಯಾದಾನಸೇವೆ"

ಶತಾಂಶ ಅನ್ಯಾಯವೆಂದು ಕಂಡುಬಂದಿದ್ದರೂ, ಅದಕ್ಕೆ ಪ್ರತೀಕಾರವಾಗಿ ಸರ್ಕಾರದಲ್ಲಿ ನ್ಯಾಯದೊರೆಯದಿದ್ದುದು ಬಾಬು ಸುರೇಂದ್ರನಾಥ ಬ್ಯಾನರ್ಜಿಯ ಮನಸ್ಸಿನಲ್ಲಿ ಸರ್ಕಾರದ ವಿಷಯವಾಗಿ ದುರಭಿಪ್ರಾಯವನ್ನು ಹುಟ್ಟಿಸಲು ಪ್ರಥಮ ಕಾರಣವಾಯಿತು. ಈ ದೇಶದಲ್ಲಿರುವ ಇಂಗ್ಲಿಷ್ ಅಧಿಕಾರಿಗಳು, ದೇಶೀಯರು ಉನ್ನತಾಧಿಕಾರಗಳಿಗೆ ಬರುವ ವಿಷಯದಲ್ಲಿ ಅಸೂಯೆಯುಳ್ಳವರಾಗಿದಾರೆಂಬ ಸಂಗತಿಯನ್ನು ಆತನು ಸ್ಪಷ್ಟವಾಗಿ ತಿಳಿದನು. ದೇಶೀಯರು ವಿಧೇಯರಾಗಿ-ಅಣಗಿ ಮಣಗಿ ಸೇವಕರಾಗಿರುವವರೆಗೆ ಅಭಿಮಾನಶಾಲಿಗಳಾಗಿರುವಂತೆ ತೋರ್ಪಡುವ ಇಂಗ್ಲಿಷ್ ಅಧಿಕಾರಿಗಳು,

ಸ್ವತಂತ್ರಾಭಿಪ್ರಾಯವುಳ್ಳವರಾಗಿ ಸ್ವಾಭಿಮಾನ ಶೀಲರಾಗಿ ತಮ್ಮ ವ್ಯಕ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಿದ್ದರೆ, ಅಂಥವರಿಗೆ ಬ್ರಿಟಿಷ್ ಸರ್ಕಾರದಲ್ಲಿ ಸ್ಥಾನವಿಲ್ಲವೆಂಬರ್ಥವು ಆತನ ಮನಸ್ಸಿನಲ್ಲಿ ಚೆನ್ನಾಗಿ ಮೂಡಿತು.

ಸಿವಿಲ್ ಸರ್ವಿಸ್ ಉದ್ಯೋಗದಿಂದ ನಿವೃತ್ತಿಹೊಂದಿ ಅತ್ತ ಇಂಗ್ಲೆಂಡಿಗೆ ಹೋದ ಪ್ರಯತ್ನವೂ ನಿಷ್ಫಲವಾಗಿ ಮಾತೃದೇಶಾಭಿಮುಖವಾಗಿ ಹಿಂದಿರುಗಿದನೆಂಬ ವೇಳೆಗೆ, ಇತ್ತ ಆ ಧೀಮಣಿಯನ್ನು ಯೋಗ್ಯಸ್ಥಾನದಲ್ಲಿಟ್ಟು ಗೌರವಿಸಲು ಒಂದು ಸ್ಥಾನವು ಕಾದಿತ್ತು. ೧೮೭೬ನೆಯ ಸಂವತ್ಸರದಲ್ಲಿ ಮೆಟ್ರೊಪಾಲಿಟನ್ ಇನ್‍ಸ್ಟಿಟ್ಯೂಷನ್ ಎಂಬೊಂದು ವಿದ್ಯಾಶಾಲೆಯಲ್ಲಿ ಆತನಿಗೆ ಇಂಗ್ಲಿಷ್ ಸಾಹಿತ್ಯದ ಪ್ರೊಫೆಸರ್ ಎಂಬ ಘನವಾದ ಉದ್ಯೋಗವು ದೊರೆಯಿತು. ಅಲ್ಲಿ ತನ್ನ ಬೋಧಕ ಸಾಮರ್ಥ್ಯದಿಂದ ಆತನು ವಿದ್ಯಾರ್ಥಿವರ್ಗದ ಗೌರವ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿ ಎರಡು ಮೂರು ವರ್ಷಕಾಲ ಕೆಲಸಮಾಡಿ, ೧೮೮೧ನೆಯ ಸಂವತ್ಸರದಲ್ಲಿ ಫ್ರೀಚರ್ಚ್ ಕಾಲೇಜ್ ಎಂಬ ಮತ್ತೊಂದು ವಿದ್ಯಾಶಾಲೆಯಲ್ಲೂ ಕಲಿಸತೊಡಗಿದನು. ಕೆಲಸವು ದಿನದಿನಕ್ಕೆ ಅಧಿಕವಾಯಿತು. ಆತನ ದಿನದ ವೇಳೆಯಲ್ಲಾ ಈ ಎರಡು ವಿದ್ಯಾಶಾಲೆಗಳಲ್ಲೂ ಕಲಿಸುವುದಕ್ಕಾಗಿಯೇ ವಿನಿಯೋಗವಾಗುತ್ತಿದ್ದಿತು. ತನ್ನ ದೇಶೀಯ ಯುವಕರನ್ನು ಹೆಚ್ಚು ಹೆಚ್ಚು ಸಂಖ್ಯೆಯಿಂದ ವಿದ್ಯಾವಂತರನ್ನಾಗಿ ಮಾಡಬೇಕು ಎಂಬುದೊಂದು ಆತನ ನಿಶ್ಚಿತ ಗುರಿಯಾಗಿದ್ದು, ಆ ಧ್ಯೇಯಸಾಧನೆಗಾಗಿ ಯುಕ್ತವೆಂದು ತೋರಿದ ಕೆಲಸಗಳನ್ನೆಲ್ಲ ಮಾಡುತ್ತಿದ್ದನು. ೧೮೮೨ರಲ್ಲಿ ಆತನು ತನ್ನ ಸ್ವಂತ ಪರಿಶ್ರಮದಿಂದಲೇ ಒಂದು ಪಾಠಶಾಲೆಯನ್ನು ಸ್ಥಾಪಿಸಿದನು. ಅದರಲ್ಲಿ ಪ್ರಾರಂಭಕ್ಕೆ ನೂರುಮಂದಿ ವಿದ್ಯಾರ್ಥಿಗಳು ಮಾತ್ರ ಸೇರಿದ್ದರೂ, ಅದು ದಿನದಿನಕ್ಕೆ ಅಭಿವೃದ್ಧಿಯಾಗುತ್ತಾ ಬಂದು ಏಳು ವರ್ಷಗಳ ಕಾಲದಲ್ಲಿ ಅದರ ಆಡಳಿತವು ಅಗಾಧವಾಗಿ ಬೆಳೆದು ಹೋಯಿತು. ಒಂದಿಗೇ ಅದನ್ನು ಒಂದು ಕಲಾಶಾಲೆಯನ್ನಾಗಿ **(College)** ರೂಪಿಸಿ ಅದಕ್ಕೆ ಹಿಂದೂಸ್ಥಾನಕ್ಕೆ ಬಂದ ರಾಜಪ್ರತಿನಿಧಿ (*Viceroy*) ಗಳಲ್ಲೆಲ್ಲಾ ದೇಶೀಯರ ಅತಿಶಯ ವಿಶ್ವಾಸಕ್ಕೆ ಪಾತ್ರನಾದ ಲಾರ್ಡ್ ರಿಪ್ಪನ್ ಎಂಬಾತನ ನಾಮಧೇಯವನ್ನಿಟ್ಟು ಪಾಠಪ್ರವಚನಗಳನ್ನು ನಡೆಯಿಸಿಕೊಂಡು ಬಂದನು. ಈಗ ರಿಪ್ಪನ್‍ಕಾಲೇಜ್ ಎಂಬಾ ವಿದ್ಯಾನಿಲಯವು

೧೫೦೦ ಮಂದಿ ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡುತ್ತಾ ಬಂಗಾಳಾದೇಶದಲ್ಲೆಲ್ಲ ಅತ್ಯುತ್ಕೃಷ್ಟವಾದುದೆನ್ನಿಸಿದೆ. ಅದರಲ್ಲಿ ಕೆಲಸಮಾಡುತ್ತಿರುವ ಬೋಧಕರೆಲ್ಲರೂ ಭಾರತೀಯರೇ! ಈಚೆಗೆ ಅದರ ಮೇಲ್ವಿಚಾರಣೆಗಾಗಿ ಬಂಗಾಳೀ ದೊಡ್ಡಮನುಷ್ಯರಿಂದ ಕೂಡಿದ ಒಂದು ಸಮಿತಿಯನ್ನು ರಚಿಸಲಾಯಿತು. ರಿಪ್ಪನ್ ಕಾಲೇಜೆಂಬುದು, ತನ್ನ ಜನ್ಮವನ್ನೂ ಇಷ್ಟುಮಟ್ಟಿನ ಅಭಿವೃದ್ಧಿಯನ್ನೂ ಪಡೆಯುದಕ್ಕೆ ಉದಾರಹೃದಯನೂ ಕರ್ತೃತ್ವಶಾಲಿಯೂ ಆದ ನಮ್ಮ ಕಥಾನಾಯಕನ ಅವಿಶ್ರಾಂತ ಪರಿಶ್ರಮವೇ ಕಾರಣ! ತಾನು ನಟ್ಟ ವಿದ್ಯಾಶಾಲೆಯೆಂಬ ಕಲ್ಪವೃಕ್ಷವೊಂದು ಇಷ್ಟುಮಟ್ಟಿನ ಅಭಿವೃದ್ಧಿಸ್ಥಿತಿಗೆ ಬಂದು ಸಹಸ್ರಾರು ಮಂದಿಗೆ ವಿದ್ಯಾದಾನಮಾಡುತ್ತಿದೆಯೆಂಬುದು ಯಾವನಿಗೆ ತಾನೇ ಹೆಮ್ಮೆಯನ್ನುಂಟುಮಾಡದು!

ಬಾಬು ಸುರೇಂದ್ರನಾಥನ ಉತ್ಸಾಹೀ ಹೃದಯವು ಕಾಲೇಜಿನಲ್ಲಿ ಪ್ರೊಫೆಸರನಾಗಿದ್ದು ಮಾಡಿದ ವಿದ್ಯಾದಾನಸೇವೆಯಿಂದ ಮಾತ್ರವೇ ದಣಿಯಲಿಲ್ಲ. ತನ್ನ ಬೋಧನಾ ಕಾರ್ಯಕ್ಷೇತ್ರವನ್ನು ಸಾಧ್ಯವಾದಷ್ಟು ವಿಸ್ತಾರಗೊಳಿಸಬೇಕೆಂದು ತಪಿಸಿ ತಪಿಸಿ ಕೊನೆಗೆ ಪತ್ರಿಕಾ ಸಂಪಾದಕವೃತ್ತಿಯನ್ನು ಅವಲಂಬಿಸಿತು. ನಾಲ್ಕು ಗೋಡೆಗಳ ಮಧ್ಯದಲ್ಲಿ ನೂರಿನ್ನೂರು ವಿದ್ಯಾರ್ಥಿಗಳಿಗೆ ಮಾತ್ರವೇ ಗೊತ್ತಾದ ಕೆಲ ವಿಷಯಗಳನ್ನು ಮಾತ್ರ ಹೇಳಿ ಬೇಸತ್ತಿದ್ದ ಬಾಬುವು 'ಬಂಗಾಳಿ' ಎಂಬ ಪತ್ರಿಕೆಯ ಸಂಪಾದಕತ್ವವನ್ನು ಸ್ವೀಕರಿಸಿ, ತನ್ನ ವಿದ್ಯೆಯ ಪ್ರಯೋಜನವು ದೇಶಕ್ಕೆಲ್ಲಾ ಒದಗಲು ಅವಕಾಶ ಕಲ್ಪಿಸಿದನು. ಬಂಗಾಳಿ ಪತ್ರಿಕೆಯು, ಹಿಂದೆ ಲಿಟ್ಟನ್ ಪ್ರಭುವಿನ ಆಡಳಿತಕಾಲದಲ್ಲಿ ಡಬ್ಲ್ಯೂ. ಸಿ. ಬ್ಯಾನರ್ಜೀ ಎಂಬ ಸುಪ್ರಸಿದ್ಧ ಬಂಗಾಳೀ ಗೃಹಸ್ಥನಿಂದ ಸ್ಥಾಪಿತವಾದುದು. ಸುರೇಂದ್ರನಾಥನು ಅದರ ಸಂಪಾದಕತ್ವವನ್ನು ಸ್ವೀಕರಿಸಿದೊಡನೆಯೇ ಆ ಪತ್ರಿಕೆಗೆ ನವಚೇತನ ಬಂದಂತಾಗಿ ಬಹು ಸ್ವಲ್ಪಕಾಲದಲ್ಲೇ ಅದು ಬಂಗಾಳಾದ ಇತರ ಎಲ್ಲಾ ಪತ್ರಿಕೆಗಳಿಗಿಂತಲೂ ಉತ್ಕೃಷ್ಟವಾದುದೆಂಬಂತಹ ಸ್ಥಿತಿಗೆ ಬಂದಿತು. ಚಿತ್ತಾಕರ್ಷಕವಾದ ವಿಷಯತರಂಗಗಳನ್ನು ವಾರವಾರಕ್ಕೆ ಓದುವ ಲವಲವಿಕೆಯು ಬಂಗಾಳಾದೇಶೀಯರಲ್ಲಿ ಹೆಚ್ಚಿ, ತನ್ಮೂಲಕ ಆ ಪತ್ರಿಕೆಯ ಗ್ರಾಹಕವರ್ಗವು ದಿನಕ್ಕೆ ಕ್ಷಣಕ್ಕೆ ಹೆಚ್ಚತೊಡಗಿತು. ಕಾಲಾನುಕ್ರಮದಲ್ಲಿ ಅದು ದೈನಿಕ

ಪತ್ರಿಕೆಯಾಗಿಯೂ ಪ್ರಕಟವಾಗತೊಡಗಿತು. ಇನ್ನು ಅದರ ಆರ್ಥಿಕ ಸ್ಥಿತಿಯು ಎಷ್ಟು ಸಮರ್ಪಕವಾಗಿದ್ದಿತೆಂದು ತಿಳಿಯಲು- ದೇಶೀಯ ಪತ್ರಿಕೆಗಳಲ್ಲೆಲ್ಲಾ 'ಪರದೇಶದ ಟೆಲಿಗ್ರಾಫಿಕ್ ವಾರ್ತೆ' (*Reuter's Telegraphic Service*) ಯನ್ನು ತರಿಸಿಕೊಂಡು ಪ್ರಕಟಿಸುತ್ತಿದ್ದ ಪ್ರತಿಕೆಯು ಬಂಗಾಳಿಯೊಂದೇ ಎಂದು ಹೇಳಿದರೆ ಸಾಕಾಗಿದೆ.

ಮನಸ್ಸಾಕ್ಷಿಗೆ ವಿರೋಧವಿಲ್ಲದೆ, ಪತ್ರಿಕಾ ಸಂಪಾದಕವೃತ್ತಿಯನ್ನು ಅವಲಂಬಿಸಿ ಕೆಲಸಮಾಡುವದೇ ದೇಶಾಭಿಮಾನಿಗೆ ಪ್ರಭುತ್ವದವರ ಕೋಪಕ್ಕೆ ಪಾತ್ರನಾಗುವಿಕೆಯು ತಪ್ಪಿದುದಿಲ್ಲ ಎಂದಿದ್ದರೊಂದುದಿನ ಆತನು ಪ್ರವಾಹಕ್ಕೆದುರಾಗಿ ಈಜಲೇಬೇಕಾಗಿಬರುವುದು. ಇಲ್ಬರ್ಟಬಿಲ್ ಎಂಬ ನ್ಯಾಯಚಟ್ಟವೊಂದು ತರಲ್ಪಟ್ಟಾಗ, ಆ ವಿಚಾರದಲ್ಲಿ ಬಂಗಾಳಿ ಪತ್ರದಲ್ಲಿ ಬರುತ್ತಿದ್ದ ನಿರ್ಭಯ ನಿರ್ದಾಕ್ಷಿಣ್ಯ ಟೀಕೆಗಳಿಗಾಗಿ ಬ್ಯಾನರ್ಜಿಯು ಸರ್ಕಾರದ ಮತ್ತು ಹಲವುಮಂದಿ ಆಂಗ್ಲೋಇಂಡಿಯನರ ವಕ್ರದೃಷ್ಟಿಗೆ ಪಾತ್ರನಾಗಬೇಕಾಯಿತು. ತಮ್ಮ ಗುಟ್ಟುಗಳನ್ನೆಲ್ಲ ರಟ್ಟುಮಾಡುವ ಈ ಅಗ್ನಿ ಭಕ್ಷಕನನ್ನು ಹೇಗಾದರೂ ಕಷ್ಟಕ್ಕೆ ಸಿಕ್ಕಿಸಿ ನರಳಿಸಬೇಕೆಂದು ಅವರೆಲ್ಲರೂ ಹೊಂಚಿಕುಳಿತಿರಲಾಗಿ ಮುಂದೆ ಕೆಲವು ದಿವಸಗಳಲ್ಲೇ ಅವರಿಗೊಂದು ಅನುಕೂಲ ಸಂದರ್ಭವು ದೊರೆಯಿತು. ೧೮೮೩ನೆಯ ಸಂವತ್ಸರದಲ್ಲಿ ಕಲ್ಕತ್ತಾ ಹೈಕೋರ್ಟಿನ ಒಬ್ಬ ಇಂಗ್ಲಿಷ್ ನ್ಯಾಯಾಧಿಪತಿಯು ಒಂದಾನೊಂದು ಮೊಕದ್ದಮೆಯ ವಿಚಾರಣೆಯಲ್ಲಿ ಒತ್ತಾಯಪಡಿಸಿ, ಪವಿತ್ರವಾದ ಸಾಲಿಗ್ರಾಮವನ್ನು ಕೋರ್ಟಿಗೆ ಹಾಜರ್‌ಪಡಿಸಿಕೊಂಡುದು ನ್ಯಾಯವಿರುದ್ಧವಾದ ಆಚರಣೆಯೆಂದು ಬಾಬು ಸುರೇಂದ್ರನಾಥನು ಬಹು ತೀಕ್ಷ್ಣವಾಗಿವಾದಿಸಿ, ಟೀಕೆಗಳನ್ನು ಬರೆದನು. ಆತನ ಟೀಕೆಗಳನ್ನು ಕೋರ್ಟಿನ ಗೌರವಕ್ಕೆ ಕುಂದುಂಟಾಯಿತೆಂಬ ಕಾರಣದಿಂದ ಆತನು ನ್ಯಾಯಾಸ್ಥಾನಕ್ಕೆ ಎಳೆಯಲ್ಪಟ್ಟು ವಿಚಾರಣೆ ನಡೆದು ಆತನಿಗೆ ಎರಡು ತಿಂಗಳು ಬಂದೀವಾಸವು ವಿಧಿಸಲ್ಪಟ್ಟಿತು. ದೇಶಾಭಿಮಾನಿಯಾದ ಸುರೇಂದ್ರನಾಥನಿಗೆ ಶಿಕ್ಷೆಯ ತೀರ್ಪು ಹೊರಟ ಆ ಸಮಯದಲ್ಲಿ ಬಂಗಾಳಾದೇಶವೇ ಅಲ್ಲೋಲಕಲ್ಲೋಲವಾದಂತಾಯಿತು. ನ್ಯಾಯವಾದ ವಿಷಯವನ್ನೆತ್ತಿ ಧೈರ್ಯದಿಂದ ವಾದಿಸಿದ ಆ ದೇಶಾಭಿಮಾನಿಗೆ ಶಿಕ್ಷೆಮಾಡುದು ಅನ್ಯಾಯವೆಂದು

ದೇಶವೇ ಏಕವಾಕ್ಯದಿಂದ ಸರ್ಕಾರವನ್ನು ಆಕ್ಷೇಪಿಸಿ, ಆತನಿಗಾದ ಶಿಕ್ಷೆಗಾಗಿ ಸಹಾನುಭೂತಿಯನ್ನು ವಹಿಸಿ ಮರುಗಿತು. ಬಾಬುವು ಎರಡು ತಿಂಗಳ ಕಾಲ ಶಿಕ್ಷೆಯನ್ನನುಭವಿಸಿ, ಬಂದೀವಾಸದಿಂದ ಹೊರಬಿದ್ದೊಡನೆಯೇ, ದೇಶವು ಆತನ ದರ್ಶನಕ್ಕಾಗಿ ಹಾತೊರೆಯುತ್ತಿದ್ದಿತು. ಸುರೇಂದ್ರನಾಥನು ದೇಶೀಯರ ಅಪೇಕ್ಷಾನುಸಾರವಾಗಿ ಒಂದಾವೃತ್ತಿ ಉತ್ತರ ಭಾರತದಲ್ಲೆಲ್ಲ ಸಂಚರಿಸಿ ಪ್ರತಿಯೊಂದು ಸ್ಥಳದಲ್ಲೂ ತನ್ನ ವಾಗ್ವಿಜೃಂಭಣೆಯಿಂದ ಜನಮನದ ಉತ್ಸಾಹ ಶರಧಿಯನ್ನು ಉಕ್ಕಿಸಿ ದೇಶಾಭಿಮಾನದ ಬೀಜಗಳನ್ನು ಬಿತ್ತಿ ದೇಶೀಯರ ಪ್ರೀತಿವಿಶ್ವಾಸಗಳಿಗೆ ಪಾತ್ರನಾದನು.

ಪತ್ರಿಕಾ ಸಂಪಾದನ ಕಾರ್ಯದಿಂದ ಸುರೇಂದ್ರನಾಥ ಬ್ಯಾನರ್ಜಿಯು ಸಾಧಿಸಿದ ಕಾರ್ಯವು ಪ್ರಶಂಸನೀಯವಾದುದು. ಲಾರ್ಡ್ ಲಿಟ್ಟನ್, ಲಾರ್ಡ್ ರಿಪ್ಪನ್, ಲಾರ್ಡ್ ಕರ್ಜನ್, ಮತ್ತು ಲಾರ್ಡ್ ಮಿಂಟೋ ಇವರುಗಳ ಆಧಿಪತ್ಯಗಳಲ್ಲಿ ದೇಶದಲ್ಲಿ ನಡೆದ ರಾಜಕೀಯ ವಿಚಾರಗಳ ಮತ್ತು ಸುಧಾರಣೆಗಳ ಪರಿಚಯವನ್ನು ದೇಶೀಯರಿಗೆ ಮಾಡಿಕೊಟ್ಟು, ಜನಮನವನ್ನು ತಿದ್ದುವಿಕೆಯಲ್ಲಿ 'ಬೆಂಗಾಲೀ' ಪತ್ರಿಕೆಯಿಂದ ನಡೆದ ಸೇವೆಯು ಅಲ್ಪವಾದುದಲ್ಲ. ಈ ದೇಶದ ಪರವಾಗಿ, ಇಂಪೀರಿಯಲ್ ಪ್ರೆಸ್ ಕಾನ್ಫರೆನ್ಸ್ ಎಂಬ ಸಮ್ಮೇಳನದಲ್ಲಿ ಸಾಕ್ಷ್ಯಕೊಡುವುದಕ್ಕಾಗಿ ಲಂಡನ್ ನಗರಕ್ಕೆ ನಮ್ಮ ಕಥಾನಾಯಕನು ಆಹ್ವಾನಿಸಲ್ಪಟ್ಟುದೇ ಆತನು ಸಂಪಾದಕೀಯ ವರ್ಗದಲ್ಲಿ ಎಂತಹ ಗೌರವನೀಯಸ್ಥಾನದಲ್ಲಿದ್ದನೆಂಬುದನ್ನು ವ್ಯಕ್ತಗೊಳಿಸುತ್ತದೆ. ಬ್ಯಾನರ್ಜಿಯು ಆ ಸಭೆಯಲ್ಲಿ ಮಾಡಿದ ಅಮೋಘ ಭಾಷಣವು ಎಲ್ಲರಮೇಲೂ ಅತ್ಯುತ್ತಮ ಪರಿಣಾಮವನ್ನುಂಟುಮಾಡಿತು. ಭಾರತದೇಶದ ದೇಶೀಯ ಪತ್ರಿಕಾ ಪ್ರಚಾರದ ವಿಚಾರವಾಗಿ ಆತನು ಮಾತನಾಡಕುಳಿತೊಡನೆಯೇ, ಲಾರ್ಡ್ ಕ್ರೋಮರ್ ಎಂಬಾತನೆದ್ದು, ನೇಟಿವ್ ಪತ್ರಿಕೆಗಳಿಂದ ದೇಶದಲ್ಲಿನ ಶಾಂತತೆಯು ಹೇಗೆ ನಾಶವಾಗಿ ಅಶಾಂತತೆಯು ಉದ್ರೇಕಿಸಲ್ಪಡುತ್ತದೆ ಎಂಬ ವಿಚಾರದಲ್ಲಿ ಬಹುಮಟ್ಟಿಗೆ ಆಕ್ಷೇಪಿಸಿ ಭಾಷಣ ಮಾಡಿದನು. ಅದನ್ನು ಸಹಿಸಲಾರದೆ ಬಾಬು ಸುರೇಂದ್ರನಾಥನು ಒಡನೆ ಮೇಲಕ್ಕೆದ್ದು ಆ ಪಾಶ್ಚಾತ್ಯ ಪ್ರತಿನಿಧಿಯ ಆಕ್ಷೇಪಗಳಿಗೆಲ್ಲ ಪ್ರತ್ಯುತ್ತರಕೊಟ್ಟು, ದೇಶೀಯ ಪತ್ರಿಕೆಗಳ ಸಹಜವಾದ ನೀತಿ ಮತ್ತತೆಯನ್ನು ಸಮರ್ಥಿಸಿಕೊಂಡನು.

ಆದನ್ನು ಕೇಳಿದ ಲಾರ್ಡ್ ಕ್ರೋಮರನು ಹಿಂದೂಸ್ಥಾನದ ಸಾರ್ವಜನಿಕ ಕಾರ್ಯಗಳ ಚಾಲಕರಾದವರೆಲ್ಲರೂ ಬ್ಯಾನರ್ಜಿಗಳಂತಹ ದೊಡ್ಡಮನುಷ್ಯರೇ ಇದ್ದಲ್ಲಿ, ಹಿಂದೂಸ್ಥಾನಕ್ಕೆ ಇಂದೇ ಸ್ವಪರಿಪಾಲನೆಯನ್ನು ದಯಪಾಲಿಸಬಹುದು ಎಂದು ಬಹೂಕರಿಸಿದನು.

ಬಾಬು ಸುರೇಂದ್ರನಾಥನಿಗಿದ್ದ ಕರ್ತವ್ಯನಿಷ್ಠೆಯೆಂಬುದು ಅಪ್ರತಿಮವಾದುದು. ಮಹನೀಯರ ಗುಣಪರೀಕ್ಷೆಯಾಗುವ ಕಾಲವು ಬಹು ವಿಷಮವೇಳೆಗಳಲ್ಲಿ ಪ್ರಾಪ್ತಿಸುವುದು. ಅಂತಹ ವಿಷಮ ಪರೀಕ್ಷೆಗಳಲ್ಲಿ ಅವರು ಗೆದ್ದರಾದರೆ ಅವರ ಧೈರ್ಯಸಾಹಸಗಳು ಪ್ರಕಾಶಿತವಾಗಿ ಮುಂದೆ ಬಲಗೊಳ್ಳುತ್ತಾ ಹೋಗುವುವು. ೧೮೭೬ನೆಯ ಸಂ॥ದ ಜೂಲೈ ೨೬ನೆಯ ದಿನ 'ಇಂಡಿಯನ್ ಅಸೋಸಿಯೇಷನ್' ಎಂಬೊಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಿಶ್ಚಿತವಾಗಿತ್ತು. ಅದರ ಸ್ಥಾಪನೆಗೆ ಬಾಬು ಸುರೇಂದ್ರನಾಥನೂ ಆನಂದಮೋಹನ ಬೋಸನೂ ಇನ್ನಿತರ ದೇಶಾಭಿಮಾನಿಗಳೂ ಮುಖ್ಯಕಾರಣರಾಗಿದ್ದರು. ಹೀಗಿರುವಲ್ಲಿ ದುರ್ದೈವವಶವಾಗಿ ಆ ದಿನವೇ ಬಾಬು ಸುರೇಂದ್ರನಾಥನ ಏಕಮಾತ್ರ ಪುತ್ರನು ಮೃತನಾದನು. ಮನೆಯಲ್ಲಿ ಮಗನ ಶವ ಬಿದ್ದಿದೆ. ಮನೆಯವರೆಲ್ಲರೂ ವ್ಯಸನಾಂಬುಧಿ ಮಗ್ನರಾಗಿದ್ದಾರೆ. ಆದರೆ ಅತ್ತ ದೇಶದ ಗೌರವವನ್ನು ಕಾಪಾಡುವಿಕೆಯಲ್ಲಿ ಬಹುಮಟ್ಟಿನ ಕಾರ್ಯಮಾಡಲುಳ್ಳದೆಂದು ಸಕಲರೂ ನಿರೀಕ್ಷಿಸುತ್ತಿದ್ದ ಸಂಸ್ಥೆಯ ಸ್ಥಾಪನಾಕಾರ್ಯವು ಆ ದಿನವೇ ನಡೆಯತಕ್ಕದ್ದಿದೆ ಬಾಬುವಿನ ಕರ್ತವ್ಯನಿಷ್ಠೆಯು ಅಪ್ರತಿಮವಾದುದೆಂದು ಮೇಲೆಯೇ ಹೇಳಿದೆಯಲ್ಲವೆ! ತನ್ನ ಪುತ್ರನ ಮರಣವು ಆ ಮಹತ್ಕಾರ್ಯದ ಸ್ಥಾಪನೆಗೆ ವಿಘ್ನಕಾರಿಯಾಗಬಾರದೆಂದುಕೊಂಡು, ಆ ದಿನದ ಸಮಾರಂಭದಲ್ಲಿ ಏನೊಂದು ವಿಶೇಷ ಸಂಗತಿಯೂ ನಡೆಯದಿರುವಂತೆಯೇ ಸಮಾಧಾನದಿಂದ ಭಾಗವಹಿಸಿ, ಸಂಸ್ಥೆಯ ಕೆಲಸ ಕಾರ್ಯಗಳೆಲ್ಲವೂ ಮುಗಿದ ತರುವಾಯ ಮನೆಗೆ ಬಂದು ಶವ ಸಂಸ್ಕಾರಾದಿ ಇತರ ಕಾರ್ಯಗಳನ್ನು ಗಮನಿಸಿದನು. ಕಲ್ಕತ್ತಾದಲ್ಲಿ ಪಾಶ್ಚಾತ್ಯರಿಂದ ಸ್ಥಾಪಿಸಲ್ಪಟ್ಟು ಅವರ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಹೋಡೆದಾಡುತ್ತಿರುವ ಯೂರೋಪಿಯನ್ ಅಸೋಸಿಯೇಷನ್ ಎಂಬ ಸಂಸ್ಥೆಯಂತೆಯೇ, ಈ ಇಂಡಿಯನ್ ಅಸೋಸಿಯೇಷನ್ ಎಂಬ ಸಂಸ್ಥೆಯೂ ಕೂಡ ಕಳೆದ ಮೂವತ್ತು ವರ್ಷಗ

ಳಲ್ಲಿ ಈ ದೇಶವಿಚಾರದಲ್ಲಿ ನಡೆದ ಸಮಸ್ತ ಪ್ರಮುಖ ವಿ ಚಾ ರ ಗ ಳ ಲ್ಲೂ ಭಾಗವಹಿಸಿ, ದೇಶೀಯರ ಹಕ್ಕು ಬಾದ್ಯತೆಗಳ ಸ್ಥಾಪನೆಗಾಗಿ ಹೆಣೆಗಾಡಿದೆ. ಯಾವ ಕಾರ್ಯಗಳ ವಿಚಾರವಾಗಿ ಈ ಸಂಸ್ಥೆಯ ಸಂಬಂಧವು ಕಂಡುಬಂದಿದೆಯೋ ಆ ಕಾರ್ಯಗಳಲ್ಲೆಲ್ಲ, ಅದರ ಕಾರ್ಯದರ್ಶಿಯಾಗಿದ್ದ ಬಾಬು ಸುರೇಂದ್ರನಾಥನ ಧೀಶಕ್ತಿಯ ಸಂಬಂಧವಾಗದೆ ಇದ್ದುದಿಲ್ಲ. ಬ್ಯಾನರ್ಜಿಯು ಈ ಸಂಸ್ಥೆಯ ಮುಖ್ಯ ಉದ್ದೇಶಗಳನ್ನೂ ಭಾರತೀಯರಾದ ನಾವು ಸಂಘ ಸಂಸ್ಥೆಗಳ ಮೂಲಕವಾಗಿ ಜನಮನದ ಬೆಂಬಲ ಪಡೆದು ನಮ್ಮ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಬೇಕಾದುದರ ಆವಶ್ಯಕತೆಯನ್ನೂ ಕುರಿತು ಉಪನ್ಯಸಿಸುತ್ತಾ ದೇಶದಲ್ಲಿ ಅನೇಕ ಬಾರಿ ಸಂಚರಿಸಿದನು.

ಬಾಬು ಸುರೇಂದ್ರನಾಥನಿಂದ ನಡೆದ ಇತರ ಎಲ್ಲಾ ಕಾರ್ಯಗಳಿಗಿಂತಲೂ ರಾಷ್ಟ್ರೀಯ ಮಹಾಸಭಾ ಸಂಬಂಧದಲ್ಲಿ ಆತನು ಮಾಡಿದ ಕಾರ್ಯಗಳು ಅಸಾಮಾನ್ಯವಾದುವು. ಮಹಾಸಭಾ ಪ್ರಾರಂಭವಾದ ಸಂದರ್ಭದಲ್ಲಿ ಕಾರ್ಯಾಂತರದಿಂದ ಆತನು ಬೊಂಬಾಯಿಗೆ ಬರಲು ಆಗಲಿಲ್ಲವಾದರೂ, ಅದರ ತರುವಾಯ ನಡೆದ ಪ್ರತಿಯೊಂದು ಸಮ್ಮೇಳನಕ್ಕೂ ಆತನು ತಪ್ಪದೆ ಹಾಜರಾಗುತ್ತಿದ್ದನು. ಮಾತ್ರವಲ್ಲ, ಮಹಾಸಭೆಯ ಉಪನ್ಯಾಸ ವೇದಿಕೆಯಿಂದ ಕೊಡಲ್ಪಡುವ ಬಾಬು ಸುರೇಂದ್ರನಾಥನ ಉಪನ್ಯಾಸಗಳನ್ನು ಕೇಳಬೇಕೆಂಬ ಮುಖ್ಯೋದ್ದೇಶದಿಂದಲೇ ಸಹಸ್ರಾರುಮಂದಿ ಪ್ರೇಕ್ಷಕರು ಬಹುದೂರಸ್ಥಳಗಳಿಂದ ಬಂದು ನೆರೆಯುತ್ತಿದ್ದರು. ಉನ್ನತವಾದ ಗಿರಿ ಶಿಖರದಿಂದ ಪ್ರವಹಿಸುವ ತರಂಗಿಣಿಯೋ ಎಂಬಂತೆ ತಡೆಬಡೆಯಿಲ್ಲದೆ ಹೊರಟು ಪ್ರವಹಿಸುತ್ತಿದ್ದ ಆತನ ವಾಗ್ಝರಿಯು ನವನವೀನ ಭಾವಗಳು ಶ್ರೋತೃಗಳ ಹೃದಯ ತಂತ್ರಿಗಳನ್ನು ಆಡಿಸಿ ಅವರನ್ನು ಚಿತ್ರಪ್ರತಿಮೆಗಳಂತೆ ಮುಗ್ಧರನ್ನಾಗಿಸುವುವು. ಆತನು ತನ್ನಾವಾಕ್ಸರಣಿಯಲ್ಲಿ ಏನುಮಾಡಬೇಕೆಂದು ಸಲಹೆ ಕೊಟ್ಟರೆ ಆ ಕೆಲಸ ಮಾಡುವಂತೆ ಸಕಲ ಶ್ರೋತೃಗಳೂ ಮೋಹಿತರಾಗಿ ಬಿಡುವರು. ಐದನೆಯ ಕಾಂಗ್ರೆಸ್ಸಿನ ಕಾಲದಲ್ಲಿ ಬಾಬು ಸುರೇಂದ್ರನಾಥನು, ತನ್ನಾ ಉಪನ್ಯಾಸದ ಭರದಲ್ಲಿ ರಾಷ್ಟ್ರಸಭಾ ಮಹತ್ಕಾರ್ಯವನ್ನು ನಿರ್ಬಾಧಕವಾಗಿ ನಡೆಯಿಸಿಕೊಂಡು ಹೋಗಲು ಅದಕ್ಕೆ ಧನಾಭಾವವಿರ

ದಂತೆ ದ್ರವ್ಯಸಹಾಯವಾಗಬೇಕೆಂದು ನಿಧಿಗಾಗಿ ಯಾಚನೆ ಮಾಡಿದನು. ಆತನ ವಾಗ್ವೈಖರಿಯು ಎಷ್ಟುಮಟ್ಟಿನ ಪರಿಣಾಮವನ್ನುಂಟುಮಾಡಿತೆಂದರೆ ಒಡನೆ ಆ ಸಭೆಯಲ್ಲಿ ಅರುವತ್ತು ಸಹಸ್ರ ರೂಪಾಯಿಗಳ ನಿಧಿಯು ಜಮಾವಣೆಯಾಯಿತು. ಪ್ರತಿಯೊಂದು ಸಮ್ಮೇಳನದಲ್ಲೂ ಆತನು ದೇಶಹಿತ ದೃಷ್ಟಿಯಲ್ಲಿ ಅತ್ಯಾವಶ್ಯಕವೆನ್ನಿಸುವ ಒಂದೆರಡು ಠರಾವುಗಳನ್ನು ತಂದು ಅವುಗಳ ಸಮರ್ಥನೆಗಾಗಿ ತನ್ನ ಮುಖ್ಯೋದ್ದೇಶವೇನೆಂಬುದನ್ನು ಕುರಿತು ಅಮೋಘ ಭಾಷಣಗಳನ್ನು ಮಾಡಿ ಸಕಲರ ಮನಸ್ಸನ್ನೂ ತನ್ನ ಪಕ್ಷಕ್ಕೆ ಒಲಿಸಿಕೊಂಡು ಬಹು ಮತವನ್ನು ಪಡೆಯುವನು. ಐದನೆಯ ಕಾಂಗ್ರೆಸ್ ಅಧಿವೇಶನದಲ್ಲಿ, ಈ ದೇಶದ ಆಡಳಿತಕ್ಕೆಂದು ವೈಸರಾಯಿಯ ಸಹಾಯಕ್ಕಾಗಿ ಇರುವ ನ್ಯಾಯವಿಧಾಯಕ ಸಭೆ (*Legislative Council*) ಯ ಸುಧಾರಣೆಯು ಆಗಬೇಕಾದುದರ ಆವಶ್ಯಕತೆಯನ್ನು ಕುರಿತು ಆತನು ಮಾಡಿದ ಭಾಷಣವು ಬಹು ಉತ್ತಮ ಪರಿಣಾಮವನ್ನುಂಟುಮಾಡಿತು. ಅದರ ಫಲವಾಗಿ ಇಂಗ್ಲೆಂಡಿನಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ಸುಧಾರಿಸಲಿಕ್ಕಾಗಿ ಒಂದು ರಾಯಭಾರವು ಇಲ್ಲಿಂದ ಕಳುಹಿಸಲ್ಪಡಬೇಕೆಂದು ನಿರ್ಧರವಾಯಿತು. ಈ ರಾಯಭಾರದಲ್ಲಿ ಸುರೇಂದ್ರನಾಥನೂ ಒಬ್ಬನಾಗಿದ್ದು ಇಂಗ್ಲೆಂಡಿನಲ್ಲೂ ತನ್ನ ವಕ್ತೃತ್ವದಿಂದ ವಿಶೇಷ ಲಾಭವನ್ನು ದೊರಕಿಸಿದನು. ಇಂಗ್ಲೆಂಡಿನಲ್ಲಿ ಆತನು ಉಪನ್ಯಸಿಸಿದ ಹಲವು ಸಭೆಗಳಲ್ಲಿ ಆತನ ಅಪ್ರತಿಮ ಭಾಷಣಗಳನ್ನು ಕೇಳಿ ಬೆರಗಾದ ಒಬ್ಬಾನೊಬ್ಬ ಆಂಗ್ಲೇಯ ಪ್ರತಿಷ್ಠಿತ ಪುರುಷನು ಆತನ ಭಾಷಣದ ಯೋಗ್ಯತೆಯನ್ನು ಕುರಿತು ಹೀಗೆಂದು ಪ್ರಶಂಸೆ ಮಾಡಿದ್ದಾನೆ— 'ಪಾರ್ಲಿಮೆಂಟಿನ ಸಭೆಮನೆಯಲ್ಲೂ, ಹೊರಗೂ ತಮ್ಮ ಭಾಷಣ ವೈಖರಿಯಿಂದ ಜನಗಳನ್ನು ಬೆರಗುಗೊಳಿಸುವ ಅನೇಕಮಂದಿ ಅನುಭವಿಕ ಆಂಗ್ಲೇಯ ಉಪನ್ಯಾಸಕರಿಗೂ ಸಹ ಈ ಬಾಬು ಮಹಾಶಯನ ಉಪನ್ಯಾಸ ವೈಖರಿಯು ಆಶ್ಚರ್ಯವನ್ನುಂಟುಮಾಡಿದೆ. ಈತನ ಈ ಉಪನ್ಯಾಸದಲ್ಲಿ ಸುಪ್ರಸಿದ್ಧ ಆಂಗ್ಲೇಯ ವಾಗ್ಮಿಗಳಾದ ಪಿಟ್, ಫಾಕ್ಸ್, ಬರ್ಕ್, ಷೆರಿಡನ್ ಮಹಾಶಯರ ಪ್ರತಿಭೆಗಳೆಲ್ಲವೂ ಏಕತ್ರ ಕಂಡ ಬರುತ್ತಿವೆ.' ಈ ಪ್ರಶಂಸೆಯು ಸುಲಭವಾಗಿ ಲಭ್ಯವಾಗತಕ್ಕುದೇ?

ಇಂಗ್ಲೆಂಡಿನಲ್ಲಿ ಸುರೇಂದ್ರನಾಥನಿಂದ ಮಾತೃದೇಶ ಸಂಬಂಧವಾಗಿ

ನಡೆದ ಕಾರ್ಯವನ್ನು ಕುರಿತೂ, ಆತನು ತನ್ನದೇ ಆದ ಒಂದು ವಿಶಿಷ್ಟ ಶೈಲಿಯ ಭಾಷಣದಿಂದ ಇಂಗ್ಲಿಷ್ ಶ್ರೋತೃವರ್ಗವನ್ನು ಹೇಗೆ ಮೆಚ್ಚಿಸಿ, ನಮ್ಮ ದೇಶಹಿತಕಾರ್ಯಕ್ಕೆ ಸಹಾನುಭೂತಿಯುಳ್ಳವರಾಗುವಂತೆ ಮಾಡಿದ ನೆಂಬುದನ್ನು ಕುರಿತು ಆರನೆಯ ರಾಷ್ಟ್ರಸಭಾಧ್ಯಕ್ಷನಾದ ಸರ್. ಪಿ. ಎಂ. ಮೆಹತಾ ಮಹಾಶಯನು, ಆತನನ್ನು ವಿಶೇಷ ರೀತಿಯಿಂದ ಪ್ರಶಂಸಿಸಿ ಗೌರವಿಸಿದನು. ೧೮೯೫ ನೆಯ ಸಂವತ್ಸರದಲ್ಲಿ ಪೂನಾ ನಗರದಲ್ಲಿ ನಡೆದ ರಾಷ್ಟ್ರಮಹಾಸಭಾ ಅಧ್ಯಕ್ಷಸ್ಥಾನವು ನಮ್ಮ ಕಥಾನಾಯಕನಿಗೇ ಸಮರ್ಪಿ ಸಲ್ಪಟ್ಟಿತು. ಆವರೆಗೆ ಸಭೆಯಲ್ಲಿ ಉಂಟಾಗಿದ್ದ ಮತಭೇದ ಮುಂತಾದು ವುಗಳ ಕಾರಣದಿಂದ ಆ ವರ್ಷದ ಅಧಿವೇಶನವು ಹೇಗೆ ಸುರಕ್ಷಿತವಾಗಿ ನಡೆದೀತೆಂದು ಸಕಲರೂ ಚಿಂತೆಗೊಂಡಿದ್ದರು. ಆದರೆ ಸುರೇಂದ್ರನಾಥನು, ತನ್ನ ಯುಕ್ತಿಯುಕ್ತ ವಾಗ್ಜಾಲದಿಂದ ಉಭಯ ಪಕ್ಷಗಳವರ ಮನಸ್ಸಿ ನಲ್ಲಿದ್ದ ಅಭಿಪ್ರಾಯಗಳನ್ನು ಸಮರಸಗೊಳಿಸಿ, ರಾಷ್ಟ್ರಮಹಾಸಭೆಯ ನಿಶ್ಚಿತ ಧ್ಯೇಯವಿಂತಹುದೆಂಬುದನ್ನು ಸ್ಪಷ್ಟಶಬ್ದಗಳಿಂದ ನಿರೂಪಿಸಿ, ಆ ಬಾರಿಯ ಅಧಿವೇಶನವನ್ನು ಅಭೂತಪೂರ್ವವಾದುದೆನ್ನಿಸಿ ಸಕಲರ ಮನ್ನಣೆಗೂ ಪಾತ್ರನಾದನು. ಅಧ್ಯಕ್ಷಸ್ಥಾನದಿಂದ ಆತನು ಮಾಡಿದ ಭಾಷಣವೇ ಒಂದು ಅಮೌಲ್ಯಸಾಹಿತ್ಯ ನಿಧಿಯೆನ್ನಿಸಬಹುದಾಗಿದೆ. ಮೂರು ಗಂಟೆಗಳಕಾಲ ಮಾಡಿದ ಆತನ ಆ ಭಾಷಣದಲ್ಲಿ ಆ ಮಹನೀಯನು ಒಂದುಸಾರಿಯಾ ದರೂ ಲಿಖಿತ ಉಪನ್ಯಾಸವನ್ನು ಕಣ್ಣೆತ್ತಿನೋಡದೆ, ಸಕಲ ವಿಷಯಗ ಳನ್ನೂ ತನ್ನ ಕೇವಲ ಸ್ಮರಣಶಕ್ತಿಯಿಂದಲೇ ಹೇಳಿಬಿಟ್ಟನು. ಆ ಮೂರು ಗಂಟೆಗಳ ಕಾಲವೂ ಶ್ರೋತೃಗಳು ನಿಶ್ಶಬ್ದವಾಗಿ ಚಿತ್ರಲಿಖಿತ ಪ್ರತಿ ಮೆಗಳಂತೆ ಕುಳಿತು ಆ ನಿರರ್ಗಳ ಪಾಕ್ಪ್ರವಾಹದ ಅಲೆಗಳಿಂದ ಕೊಚ್ಚಿಹೋ ಗದಂತೆ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದುದೇ ವಿಶೇಷವು. ಆಗ ಆತನು ಮಾಡಿದ ಆ ಉಪನ್ಯಾಸ ವೈಭವವನ್ನು ವರ್ಣಿಸುತ್ತಾ, ಮಹಾ ವಿದ್ಯಾನಿಧಿ ಗಳನೇಕರು ಅದು ಮಾನುಷ-ದೈವೀ (***Super human effort of oratory***) ವಕ್ತೃಸಂಪತ್ತಿಯಲ್ಲದೆ ಮಾನುಷಿಕವಾಗಿ ಅಂತಹ ಭಾಷಣವು ಅಸಾಧ್ಯವೆಂದು ಹೊಗಳಿದರು. ಪುನಃ ಏಳುವರ್ಷಗಳ ತರುವಾಯ ಸುರೇಂ ದ್ರನಾಥ ಬಾಬುವು ಅಹಮ್ಮದಾಬಾದಿನಲ್ಲಿ ನಡೆದ ರಾಷ್ಟ್ರಮಹಾಸಭಾ

ಸಮ್ಮೇಳನಕ್ಕೆ ಮತ್ತೊಂದುಬಾರಿ ಅಧ್ಯಕ್ಷನಾಗಿ ಚುನಾಯಿಸಲ್ಪಟ್ಟನು. ಈ ಸಾರಿಯ ಭಾಷಣವೂ ಹಿಂದಿನಂತೆಯೇ ಅಪೂರ್ವ ಸಾಹಿತ್ಯಶೈಲಿಯಿಂದ ಶೋಭಿಸುತ್ತಾ ಎರಡು ಗಂಟೆಗಳ ಕಾಲದಲ್ಲಿ ಉಪನ್ಯಸಿಸಲ್ಪಟ್ಟಿತು. ಮುಖ್ಯ ವೇನು? ಆತನ ಭಾಷಣವನ್ನು ಪ್ರತ್ಯಕ್ಷ ಎದುರಿಗೆ ಕುಳಿತು ಕೇಳಿದವರಲ್ಲದೆ, ಅದರ ಸಹಜ ಸ್ವರೂಪವು ಮನವರಿಕೆಯಾಗದು. ಬಾಬು ಸುರೇಂದ್ರನಾಥ ಬ್ಯಾನರ್ಜಿಯು ತನ್ನ ಮಾತೃದೇಶಕ್ಕೆ ಮಾಡಿದ ವಿದ್ಯಾದಾನಸೇವೆಯು, ಉಪಾಧ್ಯಾಯವೃತ್ತಿಯಿಂದ ಪ್ರಾರಂಭವಾಗಿ, ಉಪನ್ಯಾಸಗಳಿಂದ ಪರಿಪೋಷಿತವಾಗಿ, ಕೊನೆಗೆ ರಾಷ್ಟ್ರಮಹಾಸಭಾಧ್ಯಕ್ಷತೆಯಿಂದ ಸಂಪೂರ್ಣ ಫಲ ಪ್ರದವಾಗಿ ವಿರಾಜಿಸಿತು. ಇಂತಹ ದಾನವೇ ಸರ್ವೋತ್ತಮ ದಾನವಲ್ಲವೆ?



## ಅಧ್ಯಾಯ ೪ "ಬಿರುಗಾಳಿ-ಸುರಿಮಳೆ"

ಪ್ರತಿಯೊಬ್ಬ ಮನುಷ್ಯನ ಸ್ವಾಭಾವಿಕಶಕ್ತಿಯ ಪ್ರಕಟಣೆಗೂ ಒಂದು ಗೊತ್ತಾದ ಕಾಲವಿರುವುದು. ಆ ಅನುಕೂಲ ಸಮಯವು ಆತನ ಜೀವಮಾನದಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಪ್ರಾಪ್ತಿಸುವುದು. ಹಾಗೆ ಪ್ರಾಪ್ತವಾದ ಅನುಕೂಲ ಸಂಧಿಯನ್ನು ಉಪಯೋಗಿಸಿಕೊಂಡು ಯಾವನು ಕಾರ್ಯಪ್ರಯತ್ನ ಮಾಡುವನೋ ಅವನಿಂದ ಮಹತ್ವದಕಾರ್ಯವು ನಡೆಯುವುದು. ಆದರೆ ಯಾವನು ಅಂತಹ ಒಂದು ಅನುಕೂಲ ಸಂದರ್ಭವು ಪ್ರಾಪ್ತವಾಗಿದ್ದಾಗಲೂ, ಆಲಸ್ಯಭಾವದಿಂದ-ಆಕಳಿಸಿ ತೂಕಡಿಸುತ್ತಾ, ಏನೂ ಕೆಲಸಮಾಡದೆ ವ್ಯರ್ಥ ಕಾಲಕ್ಷೇಪಮಾಡುವನೋ ಅಂತಹ ಜಡಮತಿಯು ಸಕಲವಿಧ ಪ್ರಯೋಜನಗಳನ್ನೂ ಕಳೆದುಕೊಂಡು ನರಳಬೇಕಾಗುವುದು.

ನಮ್ಮ ಕಥಾನಾಯಕನ ನಿಜವಾದ ಜನ್ಮೋದ್ದೇಶವೆಂದರೆ, ತನ್ನ ದೇಶಬಾಂಧವರಲ್ಲಿ ರಾಜಕೀಯ ಜಾಗೃತಿಯನ್ನು ಉಂಟುಮಾಡುವಿಕೆ. ಆತನ ಜೀವಮಾನದಲ್ಲಿ ನಡೆದ ಮುಖ್ಯವಾದ ಕಾರ್ಯವಾವುದೆಂದು ಗಮನಿಸುವುದಾದರೆ, ಇದೊಂದೇ ಎಂಬುದು ಸ್ಪಷ್ಟವಾಗಿ ಗೋಚರಿಸುವುದು.

ಈವರೆಗೆ ಉದಾಹೃತವಾದ ಚರಿತ್ರೆಯಿಂದ ಈ ಕಾರ್ಯವು ಲೇಶಮಾತ್ರ ನಡೆದಂತೆ ತಿಳಿವುದಾದರೂ, ಆತನ ನಿಜವಾದ ರಾಜಕೀಯ ಕಾರ್ಯವು ಬಂಗಾಳಾದೇಶದ ವಿಭಜನೆಯಾದಾಗಿನಿಂದಲೇ ಎಂಬುದು ಸ್ಪಷ್ಟವಾಗಿ ಕಂಡುಬರುವುದು.

ವಂಗವಿಭಜನೆಯ ದುರಂತಕಾರ್ಯವು ಲಾರ್ಡ್ ಕರ್ಜನ್ ಪ್ರಭುವು ವೈಸರಾಯ್ ಪದವಿಯಲ್ಲಿದ್ದಾಗ ನಡೆದುದು. ವಿಸ್ತಾರವಾದ ಬಂಗಾಳಾ ದೇಶವನ್ನು ರಾಜಕೀಯ ಕಾರ್ಯಗಳ ಸೌಕರ್ಯಕ್ಕಾಗಿ ಎರಡು ಭಾಗವಾಗಿ ಮಾಡತಕ್ಕದು ಆವಶ್ಯಕವೆಂದು ವೈಸರಾಯಿಯು ಕೌನ್ಸಿಲ್ ಸಭೆಮನೆಯಲ್ಲಿ ಸರ್ಕಾರದ ಮೆಚ್ಚಿನ ಮಕ್ಕಳಾದ ಕೆಲಮಂದಿ ಸಭಾಸದರ ಬಹುತ್ವಮತ ವನ್ನು ಪಡೆದು ಹಿಂದೂಸ್ಥಾನ ಸರ್ಕಾರವು, ಆ ದೇಶವನ್ನು ಇಬ್ಭಾಗವಾಗಿ ಮಾಡಲು ಪ್ರಯತ್ನಿಸಿತು. ದೇಶವೆಲ್ಲಾದರೂ ಹೋಗಲಿ, ದೇಶೀಯರೆಲ್ಲಾ ದರೂ ನಾಶವಾಗಲಿ ತಮ್ಮ ಬೊಜ್ಜು ಬೆಳೆದರೆ ಸರಿ ಎಂಬ ಸ್ವಾರ್ಥಸಾಧನೆ ಯಲ್ಲಿ ಮುಳುಗಿದ ಕ್ಷುದ್ರಜೀವಿಗಳು ಕೆಲವರು ಸರ್ಕಾರದವರ ಈ ಸಲಹೆಗೆ ತಮ್ಮ ಸಮ್ಮತಿಯನ್ನಿತ್ತರೆ ನಿಜವಾದ ದೇಶಪುತ್ರರು ಮನೆಮುರುಕ ಅಭಿ ಪ್ರಾಯಕ್ಕೆ ಒಪ್ಪುವರೇ! ಒಡನೆ ಬಂಗಾಳಾದೇಶದಲ್ಲಿ ಸರ್ಕಾರದ ಈ ನಿರಂ ಕುಶಕಾರ್ಯವನ್ನು ವಿರೋಧಿಸಿ ಅನೇಕಾನೇಕ ಸಭೆಗಳು ನಡೆದು ಈ ಕಾರ್ಯ ವನ್ನು ಖಂಡಿಸಿ ಹಲವು ಬಗೆಯ ಟೀಕೆಗಳು ಹೊರಟವು. ಪತ್ರಿಕೆಗಳ ಮೂ ಲಕವಾಗಿಯೂ, ಉಪನ್ಯಾಸಗಳ ಮೂಲಕವಾಗಿಯೂ, ಜನಮನವು ಈ ಅಭಿ ಪ್ರಾಯಕ್ಕೆ ವಿರುದ್ಧವಾದದ್ದಿದೆಯೆಂಬ ಸಂಗತಿಯನ್ನು ರಾಜ್ಯಾಂಗದ ಕಿವಿಯ ವರೆಗೂ ತಲ್ಪಿಸಲಾಯಿತು. ಸರ್ಕಾರವು ಎಷ್ಟುಮಟ್ಟಿನ ದೃಢಮುಷ್ಟಿಯಿಂದ ಈ ಕಾರ್ಯವನ್ನು ಕೊನೆಗಾಣಿಸಿಯೇ ತೀರಬೇಕು, :ಎಂದು ಸಂಕಲ್ಪಿಸಿದ್ದಿ ತೋ ಅಷ್ಟುಮಟ್ಟಿನ ದೃಢಮನಸ್ಸಿನಿಂದಲೇ, ಅದಕ್ಕೆ ವಿರೋಧವಾಗಿ ಕೆಲಸ ಮಾಡತಕ್ಕವನೂ ಕಾರ್ಯಪ್ರಯತ್ನಮಾಡಿದರಲ್ಲದೆ ಜಯವಾಗಲಾರದಷ್ಟೆ ! ಧನಬಲ ಜನಬಲಗಳಿಂದ ಮೂವತ್ತುಕೋಟಿ ಭಾರತೀಯರ ಅಧಿಕಾರವನ್ನೂ ನ್ಯಾಯುವನ್ನೂ ಲಕ್ಷ್ಯಮಾಡದೆ ಇಂತಹ ರಾಷ್ಟ್ರಗೌರವ ವಿಘಾತಕಾರ್ಯಗಳ ನ್ನು ಧೈರ್ಯವಾಗಿ - ನಿರಂಕುಶತೆಯಿಂದ ನಡೆಯಿಸುತ್ತಿರುವ ಸರ್ಕಾರಕ್ಕೆ ವಿರೋಧಿಸಿ ನಿಂತು-ಪ್ರತಿದ್ವಂದ್ವಿಯಾದ ಬೇರೊಂದು ಚಳುವಳಿಯನ್ನು

ಎಬ್ಬಿಸಲು ಬಾಬು ಸುರೇಂದ್ರನಾಥ ಬ್ಯಾನರ್ಜಿಯು ಸಿದ್ಧನಾದನು. ಬಂಗಾಳದ ಎಲ್ಲಾ ಪ್ರಾಂತಗಳಲ್ಲಿಯ ಗುಡುಗಾಡಿ ದಿನಕ್ಕೊಂದು ಗಂಟೆಗೊಂದರಂತೆ ಹಲವು ಸಭೆಗಳನ್ನು ನೆರೆಯಿಸಿ ಭಾಷಣಗಳನ್ನಿತ್ತು, ಜನರಿಗೆ ತಮ್ಮ ನಿಜವಾದ ಹಕ್ಕುಬಾಧ್ಯತೆಗಳೇನು? ಅವುಗಳನ್ನು ಪಡೆಯುವುದು ಹೇಗೆ? ಸರ್ಕಾರದವರು ಆಗ ಮಾಡಿದ್ದ ವಂಗವಿಭಜನೆ ಮುಂತಾದ ಕಾರ್ಯಗಳಿಂದ ದೇಶದ ಪ್ರಜಾವರ್ಗದಲ್ಲಿ ಐಕಮತ್ಯ ಪ್ರೀತಿವಿಶ್ವಾಸಗಳು ಮುಂತಾದುವುಗಳ ಅಭಿವೃದ್ಧಿಗೆ ಎಷ್ಟುಮಟ್ಟಿನ ಕುಂದಕವುಂಟಾಗಲು ಕಾರಣವಾಗುತ್ತದೆ, ಎಂಬ ಮುಂತಾದ ಸಂಗತಿಗಳನ್ನು ತನ್ನ ದೇಶೀಯರ ಮಾತೃಭಾಷೆಯಲ್ಲೇ ವಿವರಿಸಿ ಹೇಳಿದನು. ಸರ್ಕಾರದವರು - ರಾಜ್ಯಭಾರದ ಸೌಕರ್ಯಕ್ಕಾಗಿ-ಎಂದು, ಸರ್ವ ಸುಲಭವಾಗಿ ಹೇಳುತ್ತಿರುವಷ್ಟೇ ಕಾರಣವಲ್ಲ - ಈ ವಂಗವಿಭಜನೆಯಲ್ಲಿ ವಂಗದೇಶೀಯ ಜೀವಿತದ ಆತ್ಮನಾಶಕ ಸಾಮಗ್ರಿಯೂ ಅಡಗಿದೆಯೆಂಬುದನ್ನು ಪ್ರಜೆಗಳು ಸುರೇಂದ್ರನಾಥನ ಅನೋಘ ಭಾಷಣಗಳನ್ನು ಕೇಳಿ ತಿಳಿದು ಉರಿದೆದ್ದರು. ಬಾಬುವು ಗಿರಿಗುಹೆಗಳನ್ನು ಕೊರೆದುಕೊಂಡು ಹೋಗುವಂತಹ ಪ್ರಳಯಕಾಲಾಗ್ನಿಸದೃಶವಾದ ವಾಗ್ವಿಜೃಂಭಣೆಯಿಂದ, ತನ್ನ ದೇಶಮಾತೆಯ ಹೃದಯಾಂತರಾಳದಲ್ಲಿದ್ದ ತಾಪವನ್ನು ಹೊರಗೆಡಹಿ ದೇಶೀಯರ ಹೃದಯಗಳಲ್ಲೂ ಅಡಗಿದ್ದ ದೇಶಾಭಿಮಾನವೆಂಬ ದೀಪಗಳನ್ನು ಹೊತ್ತಿಸಿ ಜ್ವಾಲೆಯಾಗಿ ಉರಿಸತೊಡಗಿದನು. ಆತನ ಉಪನ್ಯಾಸಗಳನ್ನು ಕೇಳಿದವರು ತಮ್ಮ ಮಾತೃದೇಶಕ್ಕಾಗಿ ತನುಮನಧನಗಳನ್ನು ಸಮರ್ಪಿಸಲು ಹಿಂದೆ ಮುಂದೆ ನೋಡದೆ ದೇಶಕಾರ್ಯದಲ್ಲಿ ಧುಮುಕಲು ಸಿದ್ಧರಾದರು. ಬಾಬು ಸುರೇಂದ್ರನಾಥನು ಇಂಗ್ಲಿಷ್ ಭಾಷೆಯಲ್ಲಿ ಮಾತ್ರವೇ ವಿಶೇಷ ಪರಿಣಾಮಕಾರಿಯಾದ ಭಾಷಣ ಮಾಡಲು ಯೋಗ್ಯತೆಯುಳ್ಳವನೆಂದು ಈವರೆಗೂ ತಿಳಿದಿದ್ದವರನೇಕರು, ಈ ಸಂದರ್ಭದಲ್ಲಿ ಆತನು ದೇಶಭಾಷೆಯಲ್ಲೂ ಲೇಶಮಾತ್ರವೂ ಹಿಂದಾಗದಂತೆ ಮಹತ್ವದ ಭಾಷಣಕೊಡುವ ವಾಗ್ಮಿಶ್ರೇಷ್ಠನೆಂದು ತಿಳಿದು ಆತನನ್ನು ವಿಶೇಷವಾಗಿ ಗೌರವಿಸತೊಡಗಿದರು.

ಸುರೇಂದ್ರನಾಥ ಬ್ಯಾನರ್ಜಿಯು ಬಂಗಾಳದ ಎಲ್ಲಾಪ್ರಾಂತಗಳಲ್ಲೂ ಅಲ್ಲದೆ, ಭಾರತದೇಶದ ಮುಖ್ಯ ಮುಖ್ಯವಾದ ಇತರ ಹಲವು ಪ್ರಾಂತಗಳಲ್ಲೂ ಸಂಚರಿಸಿ. ತನ್ನ ಮಾತೃದೇಶಕ್ಕೆ ಪ್ರಾಪ್ತವಾಗಿದ್ದ ದುರಂತಮನೋವ್ಯ

ಥೆಯನ್ನು ಹೃದಯದ್ರಾವಕವಾಗಿ ವರ್ಣಿಸಿದನು. ಕರುಳುಗಳನ್ನು ಕರಗಿಸು ವಂತಿದ್ದ ಆತನ ದೇಶಸ್ಥಿತಿಯ ವರ್ಣನೆಯೂ, ಅದರಿಂದ ಮುಂದೆ ದೇಶಕ್ಕಾ ಗುವ ಮಹತ್ತರವಾದ ಹಾನಿಯ ಚಿತ್ರವೂ ಜನಗಳ ಕಣ್ಣಿಗೆ ಕಟ್ಟಿದಂತಾ ಯಿತು. ಎಲ್ಲರೂ ಮರುಗಿದರು. ಕಳವಳಿಸಿದರು. ನೊಂದುಕೊಂಡರು. ಏನುಮಾಡಿ ಈ ಸಂಕಟವನ್ನು ನಿವಾರಿಸಬಹುದೆಂದು ಹಲುಬಿಕೊಂಡರು. ಆದರೆ ಇಷ್ಟುಬಗೆಯಿಂದ ನಡೆದ ಕಾರ್ಯವೆಲ್ಲವೂ ಕೇವಲ ನಡೆದ ಸಂಗತಿ ಇಂಥದೆಂದು ತಿಳಿದು ಅದಕ್ಕಾಗಿ ಕೇವಲ ಮರುಗಿದುದೊಂದಾಯಿತಲ್ಲದೆ, ಅದನ್ನು ನಿವಾರಿಸುವಲ್ಲಿ ಯಾವ ಬಗೆಯ ಪ್ರತಿಕ್ರಿಯೆಯನ್ನೂ ಮಾಡಿದಂತಾ ಗಲಿಲ್ಲ. ಬಾಬು ಮಹಾಶಯನು ಇದನ್ನಾದರೂ ಯೋಚಿಸದಿರಲಿಲ್ಲ. ಬಿಸಿ ಲಿಗಿಟ್ಟರೆ ಬೆಣ್ಣೆಯೊಂದುವೇಳೆ ಕರಗಬಹುದಲ್ಲದೆ. ಕಬ್ಬಿಣವು ಕರಗಲಾರ ದು ಎಂಬುದನ್ನು ಮನಗಂಡನು. ಬಹು ಬಲವಾಗಿ ಬೇರೂರಿ ಬೇಕಾದ ಷ್ಟು ಸೈನ್ಯಸಹಾಯ ದ್ರವ್ಯಸಹಾಯಗಳ ಬೆಂಬಲದಿಂದ ನಿರ್ಲಕ್ಷ್ಯವಾಗಿರುವ ಸರ್ಕಾರವು, ಕೇವಲ ಗಾಳಿಗೆ ಹೊರಟುಹೋಗುವ ನಮ್ಮ ಮಾತುಗಳ,-ಉ ಪನ್ಯಾಸಗಳ,-ಹರಟೆಯ ಅಂಜಿಕೆಗೆ ಬೆದರಿ ತನ್ನ ಕಾರ್ಯವನ್ನು ಬಿಡಲಾರ ದೆಂದು ತಿಳಿದು, ಅವರಿಗೆ ಬಿಸಿ ತಗಲುವಂತೆ ಮಾಡುವ ಕಾರ್ಯವೇನೆಂದು ಯೋಚಿಸತೊಡಗಿದನು.

ಆತನ ತೀಕ್ಷ್ಣಮತಿಗೆ ಒಡನೆ ಒಂದು ಸಲಹೆ ಹೊಳೆಯಿತು.-'ಇಂಗ್ಲಿ ಷ್‌ವರ್ತಕರು ನಮ್ಮ ದೇಶದಿಂದ ಹತ್ತಿ-ಅರಳೆಗಳನ್ನು ಅಗ್ಗವಾಗಿಕೊಂಡು' ಅದನ್ನು ನೂಲು- ಬಟ್ಟೆಗಳಾಗಿ ರೂಪಿಸಿ, ಬಹು ಬೆಲೆಗೆ ಪುನಃ ಅದನ್ನೇ ನಮಗೆ ಮಾರುತ್ತಾ ವಿಶೇಷ ಲಾಭಸಂಪಾದನೆಮಾಡುತ್ತಿದ್ದಾರೆ. ಈ ವ್ಯಾ ಪಾರದಿಂದ ಇಂಗ್ಲಿಷ್ ವರ್ತಕರೂ, ಹಾಗೆ ವಿಲಾಯಿತಿಯಿಂದ ಈ ದೇಶಕ್ಕೆ ರಫ್ತಾಗಿ ಬರುವ ನೂಲುಬಟ್ಟೆಗಳಮೇಲೆ ವಸೂಲುಮಾಡುವ ಸುಂಕದಿಂದ ಇಲ್ಲಿಯ ಸರ್ಕಾರದವರೂ ವಿಶೇಷ ದ್ರವ್ಯವನ್ನು ಗಳಿಸುತ್ತಿದ್ದಾರೆಂದೂ, ಆದರೆ ಈ ಕಾರ್ಯದಲ್ಲಿ ಭಾರತೀಯನು ದಿನದಿನಕ್ಕೆ ಕ್ಷಯಿಸುತ್ತಾ ದಾರಿ ದ್ರ್ಯದುಃಖಗಳ ಪರಮಾವಧಿಯನ್ನು ಕೊಂಡುತ್ತಿದ್ದಾನೆಂದೂ ಆತನಿಗೆ ಮ ನವರಿಕೆಯಾಯಿತು. ಭಾರತದೇಶದ ದಾರಿದ್ರ್ಯವನ್ನು ನಿವಾರಿಸುವುದರೊಂ ದಿಗೆ, ಭಾರತೀಯರ ದ್ರವ್ಯದಿಂದಲೇ ಉಪಜೀವಿಸುತ್ತಿದ್ದರೂ ಅವರ ಎದೆ

ಯನ್ನೇ ಮೆಟ್ಟುತ್ತಿರುವ ಸರ್ಕಾರದ ದುರ್ವ್ಯತ್ತಿಗೂ ಒಂದು ತಡೆಯನ್ನುಂ ಟುಮಾಡಬೇಕೆಂದರೆ, ಅವರ ಯಂತ್ರಪರಿಶ್ರಮದಿಂದ ನಮ್ಮ ದೇಶಕ್ಕೆ ರವಾನೆಯಾಗುತ್ತಿರುವ ಬಟ್ಟೆಗಳಿಗೂ, ಅವರ ದೇಶದ ಇತರ ಪದಾರ್ಥಗಳಿಗೂ ತಡೆಯನ್ನು ಕಲ್ಪಿಸುವುದರೊಂದಿಗೆ, ನಮ್ಮ ದೇಶದಲ್ಲಿ ತಯಾರಾಗಿ ದೊರೆಯುತ್ತಿರುವ ಬಟ್ಟೆಗಳಿಗೂ ಇತರ ಪದಾರ್ಥಗಳಿಗೂ ಯೋಗ್ಯಪ್ರೋತ್ಸಾಹವನ್ನೀಯುವಿಕೆಯೊಂದೇ ತಕ್ಕ ಉಪಾಯವೆಂದೂ ಕಂಡುಹಿಡಿದು ತನ್ನಾಭಿಪ್ರಾಯವನ್ನು ವೃತ್ತಪತ್ರಗಳ ಮೂಲಕವಾಗಿಯೂ, ಭಾಷಣಗಳ ಮೂಲಕವಾಗಿಯೂ, ಹಸ್ತಪುಸ್ತಕಗಳ ಮೂಲಕವಾಗಿಯೂ ದೇಶದ ಎಲ್ಲಾ ಭಾಗಗಳಲ್ಲೂ ಹರಡಿದನು. ಈ ಬಹಿಷ್ಕಾರ (**Boycott**) ಮತ್ತು ಸ್ವದೇಶೀ ಪ್ರೋತ್ಸಾಹ (***Swadeshi***) ಈ ಎರಡು ಕಾರ್ಯಗಳೂ ಜಯಶಾಲಿಗಳಾದರೆ ಮಾತ್ರವೇ ಸರ್ಕಾರದವರು ತಾವು ಮಾಡಿರುವ ಕಾರ್ಯವು ದೇಶೀಯರ ಇಷ್ಟಕ್ಕೆ ವಿರೋಧವಾದುದೆಂದು ತಿಳಿಯಬಲ್ಲರಲ್ಲದೆ, ಈ ರೀತಿಯಿಂದ ಅವರ ಕಿಸೆಗೆಬೀಗೆ ತಗುಲದಿದ್ದಲ್ಲಿ ಅವರಿಗೆ ನಮ್ಮ ದುಃಖದ ಮನವರಿಕೆಯಾಗಲಾರದೆಂದು ಬಾಬು ಮಹಾಶಯನು ತನ್ನ ದೇಶೀಯರಿಗೆ ಸಾರಿ ಹೇಳಿದನು. ಬಹಿಷ್ಕಾರ ಬೇರೆ ಸ್ವದೇಶಿ ಬೇರೆ ಎಂದು ಯಾರೂ ತಿಳಿಯಬಾರದು. ಅವೆರಡೂ ಒಂದು ನಾಣ್ಯದ ಉಭಯ ಮುಖಗಳೂ ಇದ್ದಹಾಗೆ. ಆ ಪೈಕಿ ಯಾವುದೊಂದು ಇಲ್ಲದಿದ್ದರೂ ದೇಶೀಯ ಕಾರ್ಯವು ಸುರಕ್ಷಿತವಾಗದು. ಪರದೇಶೀಪದಾರ್ಥಗಳಿಗೆ ಬಹಿಷ್ಕಾರ ಹಾಕದಿದ್ದರೆ, ಸ್ವದೇಶೀ ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರಕುವುದು ಸಾಧ್ಯವಿರುವುದಿಲ್ಲವಾದುದರಿಂದ ಅವು ಬದುಕಲಾರವು. ಸ್ವದೇಶೀ ವಸ್ತುಗಳಿಗೇ ಪ್ರೋತ್ಸಾಹಕೊಟ್ಟು, ಪರದೇಶೀ ವಸ್ತುಗಳಿಗೆ ಬಹಿಷ್ಕಾರ ಹಾಕದಿದ್ದಲ್ಲಿ, ಅವರಿಗೆ ನಷ್ಟವುಂಟಾಗಿ, ನಮ್ಮ ಮನಸ್ಸು ಕ್ಷುಬ್ಧವಾಗಿದೆಯೆಂಬ ವಿಚಾರದ ಪರಿಚಯವು ಸರ್ಕಾರಕ್ಕೆ ಉಂಟಾಗಲಾರದಾಗಿ ಸರ್ಕಾರದ ಮೂಲಕ ನಡೆಯಬೇಕಾದ ನಮ್ಮ ದೇಶದ ಆಳ್ವಿಕೆಯು ಸುರಕ್ಷಿತವಾಗಲಾರದು. ಆದುದರಿಂದ ನಾವು ಏಕಕಾಲದಲ್ಲೇ ಬಹಿಷ್ಕಾರವನ್ನೂ, ಸ್ವದೇಶಿಯನ್ನೂ ಮನಃಪೂರ್ವಕ ಕೈಕೊಂಡು ನಡೆಯಿಸಬೇಕಾದುದು ಅತ್ಯಾವಶ್ಯಕವೆಂದು ಬಾಬು ಮಹಾಶಯನು ತನ್ನ ಸಂದೇಶವನ್ನು ದೇಶದ ಮೂಲೆ ಮೂಲೆಗೂ ಕೇಳಿಸಿದನು.

ಬಾಬು ಸುರೇಂದ್ರನಾಥನಿಂದ ದೇಶಕ್ಕಾದ ಹಲವು ಮೇಲ್ಮೆಗಳಲ್ಲಿ-ಸೇವೆಗಳಲ್ಲಿ ಆತನು ಹಲವು ಬಾರಿ ಇಂಗ್ಲೆಂಡಿಗೆ ಹೋಗಿ ತನ್ನ ಪ್ರತಿಭಾವಂತ ಭಾಷಣಗಳ ಮೂಲಕ ನಡೆಸಿದ ಸೇವೆಯೂ ಉಪೇಕ್ಷಿಸತಕ್ಕದ್ದಲ್ಲ. ಲೆಜಿಸ್ಲೆಟಿವ್ ಕೌನ್ಸಿಲಿನ ಸುಧಾರಣೆಯನ್ನು ಕುರಿತು ವಾದಿಸುವುದಕ್ಕಾಗಿಹೋದ ಪ್ರತಿನಿಧಿಗಳಲ್ಲಿ ಒಬ್ಬನಾಗಿ ಆತನು ಹೋಗಿದ್ದ ವಿಚಾರವನ್ನು ಕುರಿತು ಈವರೆಗೇ ಒಮ್ಮೆ ಉದಹರಿಸಿದ್ದೇವಲ್ಲವೆ? ಪುನಃ ೧೮೯೭ನೆಯ ಸಂವತ್ಸರದಲ್ಲಿ ಏರ್ಪಟ್ಟ ವೆಲ್ಬೀ ಕಮಿಷನ್ ಎಂಬ ಸಮಿತಿಯ ಮುಂದೆ ಸಾಕ್ಷ್ಯಕೊಡುವುದಕ್ಕಾಗಿಯೂ ಒಂದುವೇಳೆ ಆತನು ಇಂಗ್ಲೆಂಡಿಗೆ ಹೋಗಿದ್ದುದುಂಟು. ಹಿಂದೂದೇಶಕ್ಕೆ ಸಂಬಂಧಿಸಿದ ರಾಜಕೀಯ ವಿಚಾರಗಳಲ್ಲಿ ಆತನ ಸಾಕ್ಷ್ಯದಿಂದ ಹೊರಟಿದ್ದ ಅಮೌಲ್ಯ ವಿಷಯಗಳನ್ನು ಕಂಡು, ಆ ಕಮಿಷನಿನಲ್ಲಿದ್ದ ಸಭಾಸದರು, ಆತನ ರಾಜಕೀಯ ವಿಜ್ಞಾನದ ಪಾರದರ್ಶಿತೆಗಾಗಿ ಅದ್ಭುತಪಟ್ಟರು. ಆ ಕಮಿಷನ್ ಸಂಬಂಧದ ಸಾಕ್ಷ್ಯವು ಮುಗಿದ ತರುವಾಯ, ಸುರೇಂದ್ರನಾಥನು, ಇಂಗ್ಲೆಂಡಿನ ಅನೇಕ ಭಾಗಗಳಲ್ಲಿ ಸಂಚರಿಸಿ ಹಲವು ಸಭೆಗಳಲ್ಲಿ ಮಹತ್ವದ ಭಾಷಣಗಳನ್ನು ಮಾಡಿದನು. ಈ ಭಾಷಣಗಳಿಂದ, ಅದ್ವಿತೀಯ ವಕ್ತೃಶಿರೋಮಣಿಯೆಂದು ತಾನು ಗೌರವಪಾತ್ರನಾದುದಲ್ಲದೆ, ಅಂತಹ ವಾಗ್ಮಿಯನ್ನು ಪಡೆದ ತನ್ನ ದೇಶಮಾತೆಗೂ ಗೌರವವನ್ನು ಸಂಪಾದಿಸಿದನು. ಆತನು ಕೊನೆಯಬಾರಿ ಇಂಗ್ಲೆಂಡಿಗೆ ಹೋದುದೆಂದರೆ ಈವರೆಗೇ ಹೇಳಿರುವ ಇಂಪೀರಿಯಲ್ ಪ್ರೆಸ್ ಕಾನ್ಫರೆನ್ಸ್ ಸಂಬಂಧದಲ್ಲಿ ! ಆಗ್ಗೆ ಆತನಿಂದ ನಡೆದಿರುವ ಅಮೋಘ ಕಾರ್ಯವನ್ನೂ ಅದರಿಂದ ದೇಶಕ್ಕೆ ಉಂಟಾದ ಪ್ರಯೋಜನವನ್ನೂ ವಾಚಕ ಮಹಾಶಯರು ಈಗಾಗಲೇ ಪಠಿಸಿರುವರಾದ್ದರಿಂದ ಇಲ್ಲಿ ಪುನರುಕ್ತಿಯು ಅನಾವಶ್ಯಕವೆನ್ನಿಸುತ್ತದೆ!

ವಂಗವಿಭಜನೆಯಿಂದ ಪ್ರಾರಂಭವಾಗಿ ದೇಶದಮೇಲೆ ಬೀಸತೊಡಗಿದ ಬಿರುಗಾಳಿಯು ಒಂದು ದೃಷ್ಟಿಯಿಂದ ದೇಶಕ್ಕೂ ದೇಶೀಯರಿಗೂ ಅನಿಷ್ಟಕಾರಿಯೆಂದು ಗೋಚರವಾದರೂ, ಅದರಿಂದ ಆದ ಮೇಲ್ಮೆಯೂ ಒಂದುಂಟು. ಬಿರುಗಾಳಿಯು ಮೇಘಗಳನ್ನು ಚದುರಿಸಿ ಸುರಿಯುತ್ತಿದ್ದ ಮಳೆಯನ್ನು ಹಾರಿಸಲೂ ಬಹುದು; ಅಥವ ಬೇರೆಡೆಗಳಿಂದ ಮೇಘಗಳನ್ನು ಹೊತ್ತು ತಂದು ಕುಂಭದ್ರೋಣವನ್ನು ಸುರಿಸಲೂ ಬಹುದು. ಭಾರತದೇ

ಶದಮೇಲೆ ಈಗ ಬೀಸತೊಡಗಿದ, ಮೇಲೆ ಹೇಳಿದ ರಾಜಕೀಯ ಬಿರುಗಾಳಿಯು ಈ ಎರಡನೆಯ ಕೆಲಸ ಮಾಡಿತು. ಜನಗಳಿಗಿದ್ದ ದೇಶ ಸ್ವಾತಂತ್ರ್ಯವನ್ನು ಸೂರೆಗೊಂಡಂತೆ ಬಾಹ್ಯದೃಷ್ಟಿಗೆ ಗೋಚರವಾದರೂ ನಿಶ್ಚಯವಾಗಿ, ಸ್ವಾತಂತ್ರ್ಯದ ತಿರುಳನ್ನು ಸಂಪಾದಿಸುವ ಇಚ್ಛೆಯನ್ನು ಅವರ ಹೃದಯಗಳಲ್ಲಿ ನಾಟಿತು. ಈ ಬಿರುಗಾಳಿ ಏಳದಿದ್ದರೆ ನಮ್ಮ ಕಥಾನಾಯಕನ ವಾಗ್ವರ್ಷದ - ಬಿರುಮಳೆಯ ಸುರಿಯುವಿಕೆಗೆ ಅವಕಾಶವೇ ಇರುತ್ತಿರಲಿಲ್ಲವಲ್ಲವೆ ? ಆದುದರಿಂದ ಜನಮನದಲ್ಲಿ ದೇಶಾಭಿಮಾನದ ಪ್ರವಾಹವನ್ನು ಹರಿಸಿ, ಬಹುಕಾಲದಿಂದಲೂ ಅವರ ಹೃದಯದಲ್ಲಿ ನೆಲೆಗೊಂಡಿದ್ದ ಭೀತಿಯನ್ನೂ, ಮನಸ್ಸಿನಲ್ಲಿದ್ದ ಜಡಸ್ವಭಾವವನ್ನೂ ಕೊಚ್ಚಿದ ಬಿರುಮಳೆಯೂ, ಅದರ ಸುರಿಯುವಿಕೆಗೆ ಕಾರಣವಾದ ಬಿರುಗಾಳಿಯೂ ಭಾರತಹಿತಾಕಾಂಕ್ಷಿಯಾದ ಸುದೈವ ಮಹಿಮೆಯಿಂದಲೇ ಪ್ರಾಪ್ತವಾಗಿರಬಹುದು. ಹೀಗೆಂದು ಭಾವಿಸಿದರೆ ಇದೂ ಅತಿಶಯೋಕ್ತಿ ಎನ್ನಿಸೀತೆ?



## ಅಧ್ಯಾಯ ೫ "ಇತರ ಲೋಕಸೇವಾ ಕಾರ್ಯಗಳು"

'ಉದಾರ ಚರಿತಾನಾಂತು ವಸುಧೈವ ಕುಟುಂಬಕಂ' ಎಂಬ ಆರ್ಯೋಕ್ತಿಯು ನಮ್ಮ ಕಥಾನಾಯಕನಂತಹ ಉದಾರ ಚರಿತರ ವಿಷಯವಾಗಿಯೇ ಹೇಳಲ್ಪಟ್ಟಿರಬಹುದು. ಇಂತಹ ಮಹನೀಯರಿಗೆ, ನಾಲ್ಕುಗೋಡೆಗಳ ಮಧ್ಯದಲ್ಲಿರುವಷ್ಟು ಸಂಕುಚಿತ ಸ್ಥಳವೇ ತಮ್ಮ ಮನೆಯೆಂದಾಗಲೀ, ತಮ್ಮ ಹೆಂಡತಿ ಮಕ್ಕಳೆಂಬ ನಾಲ್ಕಾರು ಮಾನವ ಪ್ರಾಣಿಗಳಿಂದ ಕೂಡಿದುದು ಮಾತ್ರವೇ ತಮ್ಮ ಕುಟುಂಬವೆಂದಾಗಲೀ ಭಾವನೆಯಿರುವುದಿಲ್ಲ. ಅವರ ಹೃದಯವು ತಮ್ಮ ಗ್ರಾಮವನ್ನು ಮಾತ್ರವಲ್ಲ, ಆದ್ಯಂತ ಪೃಥ್ವಿಯನ್ನೇ ತಮ್ಮ ಮನೆಯೆಂದೂ, ಅದರಲ್ಲಿರುವ ಸಮಸ್ತ ಪ್ರಜೆಗಳು ಪಶುಪಕ್ಷಿ ಮೃಗಾದಿಗಳು ಮುಂತಾದುವೆಲ್ಲವನ್ನೂ ತಮ್ಮ ಕುಟುಂಬವೆಂದೂ ಭಾವಿಸಿ ಆ ಎಲ್ಲವುಗಳ ಕ್ಷೇಮಚಿಂತನೆಯನ್ನೂ ಗಮನಿಸಿ ಪ್ರಯತ್ನಿಸುವಷ್ಟು ಉದಾರವಾದುದೂ-

ವಿಶಾಲವಾದುದೂ ಆಗಿರುತ್ತದೆ. - 'ನಮ್ಮ ಹೃದಯವು ಅಷ್ಟು ವಿಶಾಲವಾದುದು, ನಮ್ಮ ಹೆಂಡಿರು ಮಕ್ಕಳನ್ನು ಮಾತ್ರವೇ ನಮ್ಮ ಕುಟುಂಬವೆಂದು ನಾವು ಭಾವಿಸಿಲ್ಲ' ಎಂದು ಅವರು ಬಾಯ್ದೆರೆದು ಹೇಳಬೇಕಾದುದಿಲ್ಲ. ಅವರ ಕೃತಿಯೇ ಅದನ್ನು ವ್ಯಕ್ತಗೊಳಿಸುತ್ತದೆ. ಹಿಂದೆ 'ಇಂಡಿಯನ್ ಅಸೋಸಿಯೇಷನ್' ಸ್ಥಾಪನೆಯ ಕಾಲದಲ್ಲಿ, ತನ್ನ ಕುಟುಂಬದಲ್ಲಿ ಮೃತನಾದ ತನ್ನ ಏಕಮಾತ್ರ ಪುತ್ರನ ಶವಸಂಸ್ಕಾರಾದಿ ಕ್ರಿಯೆಗಳನ್ನೂ ಸಹ ಮಾನಸಿಕವಾಗಿಟ್ಟು ಬೃಹತ್ಕುಟುಂಬವಾದ ರಾಷ್ಟ್ರಸೇವೆಯೇ ಪ್ರಥಮಾದರಣೀಯವಾದುದು ಎಂದು ಸಭೆಗೆ ಬಂದುದಕ್ಕೆ ನಮ್ಮ ಕಥಾನಾಯಕನ ಮನಸ್ಸಿನಲ್ಲಿ ಈ ವಸುಧೈವಕುಟುಂಬಕ ಭಾವವಿಲ್ಲದಿದ್ದರೆ ಸಾಧ್ಯವಾಗುತ್ತಿತ್ತೆ !

ಬಾಬು ಸುರೇಂದ್ರನಾಥ ಬ್ಯಾನರ್ಜಿಯು ತನ್ನ ನಿವಾಸಸ್ಥಾನವಾಗಿದ್ದ ಕಲ್ಕತ್ತಾ ನಗರರಕ್ಷಣೆಯ ವಿಷಯದಲ್ಲಿ ಸರ್ವದಾ ವಿಶೇಷ ಆಸಕ್ತಿಯನ್ನು ವಹಿಸಿ ತನ್ನ ದೇಹಸೌಕರ್ಯವನ್ನು ಸಹ ಮರೆತು ಕಷ್ಟಪಟ್ಟು ದುಡಿಯುತ್ತಿದ್ದನು. ಆತನ ಯೋಗ್ಯತೆ ಉತ್ಸಾಹ ಮುಂತಾದುವುಗಳನ್ನು ಗಮನಿಸಿ ೧೮೭೬ನೆಯ ಸಂವತ್ಸರದಲ್ಲಿ ಕಲ್ಕತ್ತೆಯ ನಾಗರಿಕರು ಆತನನ್ನು ಆ ನಗರಸಭೆಯ (*Calcutta Corporation*) ಸಭಾಸದನನ್ನಾಗಿ ಆರಿಸಿಕೊಂಡರು. ಅಂದಿನಿಂದ ಮುಂದೆ ಇಪ್ಪತ್ಮೂರು ವರ್ಷಕಾಲ ಆತನು ಆ ಸಭೆಮನೆಯಲ್ಲಿ ಗೌರವಸ್ಥಾನವನ್ನು ವಹಿಸಿದ್ದು ಕಷ್ಟನಷ್ಟಗಳನ್ನು ಲಕ್ಷ್ಯಕ್ಕೆತಾರದೆ ಆ ಮಹಾನಗರದ ಗೌರವರಕ್ಷಣೆಯಲ್ಲೂ, ನಿವಾಸಿಗಳ ಪ್ರತಿಕೂಲಗಳನ್ನು ನಿವಾರಿಸಿ ಅನುಕೂಲತೆಗಳನ್ನು ಒದಗಿಸಿಕೊಡುವ ವಿಚಾರದಲ್ಲೂ ತನ್ನ ಶಕ್ತಿ ಮೀರಿ ಸಾಹಸಪಟ್ಟು ಸರ್ವರ ಕೃತಜ್ಞತೆಗೂ ಪಾತ್ರನಾದನು. ಮುಂದೆ ೧೮೯೯ನೆಯ ಸಂವತ್ಸರದಲ್ಲಿ ಸಭೆಮನೆಯಲ್ಲಿ ಮಂಜೂರಾತಿಗೆ ತರಲ್ಪಟ್ಟ ನವೀನ ನಗರರಕ್ಷಣಾ ಮಸೂದೆ (*New Municipal Act*) ಯು ನ್ಯಾಯವಿರೋಧವಾದುದೆಂದು ಬಹು ಮತದಿಂದ ವಿರೋಧಿಸಲ್ಪಟ್ಟರೂ ಸಹ ಸರ್ಕಾರವು ಏನೋ ಒಂದು ಅಜ್ಞಾತಕಾರಣದಿಂದ ಅದನ್ನು ಮಂಜೂರ್ಮಾಡತಕ್ಕುದು ಆವಶ್ಯಕವೆಂದೆಣಿಸಿ ಹಾಗೆಯೇ ಮಾಡಿಬಿಟ್ಟುದರಿಂದ, ತಮ್ಮ ಗೌರವವನ್ನು ಮನ್ನಿಸದ ಅಂತಹ ಸಂಸ್ಥೆಯಲಿರುವುದಕ್ಕೆ ರೋಸಿ ಬಾಬು ಮಹಾಶಯನು ತನ್ನ ಸದಸ್ಯತ್ವಕ್ಕೆ ರಾಜೀನಾಮೆಯನ್ನು ಕೊಟ್ಟನು.

೧೮೯೩ನೆಯ ಸಂವತ್ಸರದಲ್ಲಿ ನಡೆದ ನ್ಯಾಯವಿಧಾಯಕ ಸಭಾಸದಸ್ಯರ ಚುನಾವಣೆಯಲ್ಲಿ ಆರಿಸಿ ಬಂದವರಲ್ಲಿ ಬಾಬು ಸುರೇಂದ್ರನಾಥನೂ ಒಬ್ಬಾತನು. ಆ ಗೌರವಸ್ಥಾನವು ಬಹು ಜವಾಬುದಾರಿಯುಳ್ಳದು. ಯಾವಾತನು ಪ್ರಜಾವರ್ಗದ ವಿಶ್ವಾಸಕ್ಕೆ ಪಾತ್ರನೋ, ಯಾರ ಅಂತರ್ಬಾಹ್ಯ ಕಾರ್ಯಭಾರದಲ್ಲಿ ಪ್ರಜೆಗಳಿಗೆ ನಂಬಿಕೆಯಿರುವುದೋ ಅಂಥವರು ಮಾತ್ರವೇ ಈ ನ್ಯಾಯವಿಧಾಯಕ ಸಭೆಮನೆಯಲ್ಲಿ ಕುಳಿತು ನ್ಯಾಯವಿಧಾಯಕ ಮಸೂದೆಯನ್ನು ತಯಾರಿಸಬೇಕು. ಸ್ವಾರ್ಥಸಾಧಕರೂ ಅಪ್ರಾಮಾಣಿಕರೂ, ಕೇವಲ ಕೀರ್ತಿಪ್ರತಿಷ್ಠೆಗಳ ಅಪೇಕ್ಷೆಗೆ ದಾಸರಾಗಿ ಈ ಸ್ಥಳದಲ್ಲಿ ಕುಳಿತರಾದರೆ, ಅವರಿಂದ ದೇಶಕ್ಕೆ ಮೇಲುಂಟಾಗುವುದಕ್ಕಿಂತಲೂ ಕೇಡಾಗುವುದೇ ಹೆಚ್ಚು. ಯಾರು ದೇಶಹಿತಸಾಧಕರು, ಎಂಥವರನ್ನು ಚುನಾಯಿಸುವುದರಿಂದ ದೇಶಕ್ಕೆ ಉಪಕಾರವಾಗದಿದ್ದರೆ ಹೋಗಲಿ - ಅಪಕಾರವಾದರೂ ಆಗದಂತಿರುವುದು ಎಂಬದನ್ನು ನಿರ್ಣಯಿಸಿಕೊಳ್ಳುವ ಕಾರ್ಯವು, ಪ್ರಜೆಗಳ ಯುಕ್ತಾಯುಕ್ತ ವಿಮರ್ಶನೆಗೆ ಒಳಪಟ್ಟಕಾರ್ಯವು. ಪ್ರಜೆಗಳು, ಯಾರು ತಮ್ಮ ಪ್ರತಿನಿಧಿಗಳಾಗಿರಲು ಅರ್ಹರು ಎಂಬುದನ್ನು ಕುರಿತು ದೀರ್ಘವಾಗಿ ಯೋಚಿಸುವಷ್ಟು ಶ್ರಮವಹಿಸದೆ - ಎರಡು ಕಾಲಿನ ಎಲ್ಲಾ ಮನುಷ್ಯರೂ ಎಲ್ಲಾ ಕೆಲಸಮಾಡಲೂ ಸಾಧ್ಯ!-ಎಂದು ಭಾವಿಸುವರಾದರೆ ಅನೇಕವೇಳೆ ಪಶ್ಚಾತ್ತಾಪ ಪಡಬೇಕಾದೀತು!-ಕಲ್ಕತ್ತಾ ನಗರವಾಸಿಗಳಿಗೆ ಬಾಬು ಸುರೇಂದ್ರನಾಥನ ಶಕ್ತಿಸಾಮರ್ಥ್ಯಗಳು, ನಿಸ್ವಾರ್ಥತೆ, ಪರೋಪಕಾರಪರಾಯಣತೆ ಮುಂತಾದುವುಗಳ ವಿಷಯದಲ್ಲಿ ವಿಶೇಷ ನಂಬಿಕೆಯಿತ್ತು. ಹಿಡಿದ ಕೆಲಸವನ್ನು ಶ್ರದ್ಧಾಪೂರ್ವಕ ಮಾಡುವಂತಹ ದೀಕ್ಷೆಯುಳ್ಳವನೆಂದು ಆತನ ವಿಚಾರದಲ್ಲಿ ಅವರಿಗೆ ಸಂಪೂರ್ಣವಿಶ್ವಾಸವಿತ್ತು. ಹೀಗಿದ್ದುದರಿಂದಲೇ ಆತನನ್ನು ೧೮೯೪-೯೫ನೆಯ ಸಂ|ಗಳಲ್ಲೂ, ಕಲ್ಕತ್ತಾನಗರ ಸಭೆಯವರೂ ಮತ್ತು ಕಲ್ಕತ್ತ ಪ್ರೆಸಿಡೆನ್ಸಿ ಡಿವಿಷನ್ನಿನ ಡಿಸ್ಟ್ರಿಕ್ಟ್‌ಬೋರ್ಡ್ ಸಭೆಯವರೂ ನ್ಯಾಯವಿಧಾಯಕ ಸಭೆಗೆ ಚುನಾಯಿಸಿದರು. ಪುನಃ ೧೯೦೦ನೆಯ ಸಂ|ದಲ್ಲಿ ಡಿಸ್ಟ್ರಿಕ್ಟ್‌ಬೋರ್ಡಿನಿಂದ ಕಳುಹಿಸಬೇಕಾದ ಸರದಿಯಿಲ್ಲದಿದ್ದರೂ, ಸರ್.ಜಾರ್ಜ್ ಉಡ್‌ಬರ್ನ್ ಸಾಹೇಬನು, ಆಗ ನ್ಯಾಯವಿಧಾಯಕ ಸಭೆಯ ಸಮಕ್ಷಮದಲ್ಲಿದ್ದ ಮುನಸಿಪಲ್ ಬಿಲ್ಲನ್ನು ಕುರಿತು ಯೋಗ್ಯರೀತಿಯಿಂದ

ಚರ್ಚಿಸಿ ಒಂದು ತೀರ್ಮಾನಕ್ಕೆ ತರುವ ಯೋಗ್ಯ ಪ್ರತಿನಿಧಿಯೊಬ್ಬನು ಬೇಕೆಂದು ಅಭಿಪ್ರಾಯಪಟ್ಟು ಡಿಸ್ಟ್ರಿಕ್ಟ್ ಬೋರ್ಡಿಗೆ ಮತ್ತೊಮ್ಮೆ ಚುನಾಯಿಸಿ ಕಳುಹಿಸುವ ವಿಶೇಷಾಧಿಕಾರವನ್ನು ಕೊಟ್ಟನು. ಆಗ ಪುನಃ ಬಾಬು ಮಹಾಶಯನೇ ಚುನಾಯಿತನಾದನು. ಈತನು ಆ ಸಭೆಯಲ್ಲಿದ್ದಾಗ ಅನೇಕ ಪ್ರಾಮುಖ್ಯ ಕೆಲಸಗಳು ನಡೆದುವು. ಅವುಗಳಲ್ಲಿ ಗಲ್ಕತ್ತರಲ್ಲಿ ಮಂಜೂರಾತಿಯನ್ನು ಪಡೆದ 'ಶ್ಯಾನಿಟರಿ ಡ್ರೈನೇಜ್ ಆಕ್ಟ್' ಎಂಬುದೊಂದು ಅತಿ ಮುಖ್ಯವಾದುದು. ಮುನಿಸಿಪಲ್ ಬಿಲ್‌ಗೆ ವಿರೋಧವಾಗಿ ಆತನು ತಂದ ಕಾರಣಗಳು ನಿಲ್ಲಲಿಲ್ಲ. 'ಇಂಪೀರಿಯಲ್ ಲೆಜಿಸ್ಲೆಟಿವ್ ಕೌನ್ಸಿಲ್'ಗೆ ವಿರೋಧವಾಗಿ ಆತನು ಎರಡುವೇಳೆ ಉಮೇದುವಾರನಾಗಿ ನಿಂತನಾದರೂ ಚುನಾವಣೆಯಲ್ಲಿ ಆರಿಸಲ್ಪಡಲಿಲ್ಲ.

ಸುರೇಂದ್ರನಾಥ ಬ್ಯಾನರ್ಜಿಯು, ಒಬ್ಬ ಮಗ ಐದು ಮಂದಿ ಹೆಣ್ಣು ಮಕ್ಕಳ ದೊಡ್ಡ ಕುಟುಂಬಿ. ಸುಧಾರಕ ವಿಚಾರಗಳಲ್ಲಿ ಆತನಿಗೆ ವಿಶೇಷ ಪಕ್ಷಪಾತವಿದ್ದುದರಿಂದ ಆತನು ತನ್ನ ಹೆಣ್ಣುಮಕ್ಕಳನ್ನೆಲ್ಲರನ್ನೂ ಉತ್ತಮ ರೀತಿಯಿಂದ ವಿದ್ಯಾವತಿಯರನ್ನಾಗಿ ಮಾಡಿದ್ದಾನೆ. ಕಲ್ಕತ್ತಾ ನಗರದಲ್ಲಿ ಆತನಿಗೆ ಸದಾ ಕೆಲಸವಿರುತ್ತಿದ್ದು, ಆ ನಗರದಲ್ಲಿ ವಾಸವಾಗಿರುವುದೇ ಆವಶ್ಯಕವಾಗಿದ್ದರೂ, ಅಲ್ಲಿಂದ ಹದಿಮೂರು ಮೈಲು ದೂರದಲ್ಲಿರುವ ಮಣಿರಾಮಪುರವೆಂಬ ಒಂದು ಗ್ರಾಮದಲ್ಲಿ ಆತನು ವಾಸವಾಗಿದ್ದನು. ಲತಾ ಪುಷ್ಪಾದಿಗಳ, ಗಿಡ ಬಳ್ಳಿಗಳ ಬೆಳೆವಣಿಗೆಯಲ್ಲಿ ಆತನಿಗೆ ವಿಶೇಷ ಅಭಿಮಾನ. ತನ್ನ ಮನೆಯ ಸುತ್ತಲೂ ಬಹುವಿಧ ಗಿಡ ಬಳ್ಳಿಗಳನ್ನು ಸೊಂಪಾಗಿ - ಸುಮನೋಹರವಾಗಿ ಬೆಳೆಯಿಸುವುದರಲ್ಲೇ ಆತನು ತನ್ನ ವಿರಾಮಕಾಲವನ್ನೆಲ್ಲ ಉಪಯೋಗಿಸುತ್ತಿದ್ದನು. ೭೫ - ೭೦ ವರ್ಷಗಳ ವೃದ್ಧನಾಗಿದ್ದಾಗಲೂ ಸಹ ಬೇಸರಗೊಳ್ಳದೆ, ನಿಯಮವನ್ನು ತಪ್ಪದೆ ನಿತ್ಯವೂ ಅಂಗಸಾಧನೆ ಮಾಡುತ್ತಿದ್ದನು.

ಬಾಬು ಮಹಾಶಯನು, ತನ್ನ ಮಧ್ಯ ವಯಸ್ಸಿನಿಂದ ಆರಂಭಿಸಿ ಅಖಂಡ ಮೂವತ್ತೈದು ನಾಲ್ವತ್ತು ವರ್ಷಕಾಲ ಲೋಕಸೇವಾ ಕಾರ್ಯ ಮಾಡಿದನು. ರಾಷ್ಟ್ರನಿರ್ಮಾಣಕ್ಕೆ ಆವಶ್ಯಕವೆನ್ನಿಸುವ ಯಾವ ವಿಷಯವೂ ಆತನ ದೃಷ್ಟಿಗೆ ಮರೆಯಾಗಿರಲಿಲ್ಲ. ಸಕಲ ವಿಷಯಗಳಲ್ಲೂ ತನಗೆ

ಯುಕ್ತವೆಂದು ತೋರಿದ ಅಭಿಪ್ರಾಯವನ್ನು ನಿರ್ಭಯವಾಗಿ ವ್ಯಕ್ತಪಡಿಸು ವಲ್ಲಿ ಆತನು ಎಂದೂ ಹಿಂದೆಗೆದುದಿಲ್ಲ. ಮಾತೃದೇಶದ ಸ್ವಾತಂತ್ರ್ಯಸಾಧನೆಗೆ ಯಾವ ಮಾರ್ಗವನ್ನನುಸರಿಸಿ ಕೆಲಸಮಾಡಬೇಕು, ದೇಶಸೇವೆಯಿಂದ ಸಾಧಿಸಬೇಕಾದ ಗೊತ್ತಾದ ಧ್ಯೇಯವೇನು ಎಂಬ ವಿಷಯದಲ್ಲಿ ಅಭಿಪ್ರಾಯ ಭೇದಗಳು ಅನೇಕವಾಗಿರಬಹುದು. ಆದರೆ ಭಾರತದೇಶದ ಭವಿಷ್ಯಚ್ಚರಿತ್ರ ನಿರ್ಮಾಣದಲ್ಲಿ ಆತನು ಮಾಡಿದ ಹಲವು ಲೋಕಸೇವಾ ಕಾರ್ಯಗಳು, ಭಾರತ ರಾಷ್ಟ್ರಸೌಧದ ತಳಹದಿಯಾಗಿದ್ದುವೆಂದು ವರ್ಣಿಸಲ್ಪಡಲು ಏನೂ ಸಂಶಯವಿಲ್ಲ.

---

## ಉ ಪ ಸಂ ಹಾ ರ

ನಮ್ಮ ಕಥಾನಾಯಕನು ಮಾತೃ ದೇಶಸೇವೆಯಲ್ಲಿ ದುಡಿಯತೊಡಗಿದ ಆ ಕಾಲದಲ್ಲಿ ನಮ್ಮ ದೇಶದಲ್ಲಿ ರಾಷ್ಟ್ರೀಯ ಭಾವನೆಯ ಪ್ರಕಾಶವೇ ಇನ್ನೂ ಉಂಟಾಗಿರಲಿಲ್ಲ. ರಾಷ್ಟ್ರಕಾರ್ಯವೆಂಬುದು ಕೇವಲ ಶೈಶವಾವಸ್ಥೆಯಲ್ಲಿದ್ದ ಆಗಿನ ದಿನಗಳಲ್ಲಿ ಆತನು ಹೇಳಿದುದಕ್ಕಿಂತಲೂ ಹೆಚ್ಚಾಗಿ, ಈಗ ರೂಢಿಯಲ್ಲಿ ಬಂದಿರುವಂತಹ ರಾಷ್ಟ್ರೀಯ ವಿಚಾರಗಳನ್ನು ಹೇಳತಕ್ಕುದು ಸಾಧ್ಯವೂ ಇರಲಿಲ್ಲ ಅಪ್ರಕೃತವೂ ಆಗಿದ್ದಿತು. ರಾಷ್ಟ್ರಕಾರ್ಯಗಳಿಗೆ ಆಗಿದ್ದ ಧ್ಯೇಯದಲ್ಲಿ - ಭಾರತೀಯರು ನಿರಂತರ ಬ್ರಿಟಿಷ್ ಸರ್ಕಾರದ ಸಹವಾಸದಲ್ಲಿ ಇರುವುದೇ ಕ್ಷೇಮಕರ; ಆಂಗ್ಲೇಯರಿಗೂ ಭಾರತದೇಶಕ್ಕೂ ಉಂಟಾಗಿರುವ ಈ ಸಂಬಂಧವು ದೈವಿಕವಾದುದು; ಭಾರತದೇಶದ ವ್ಯಾಪಾರ ಸಂಬಂಧವಾದ, ರಾಜಕೀಯ ಸಂಬಂಧವಾದ, ಭಾಷಾ ಸಂಬಂಧವಾದ ಹಲಕೆಲವು ತೊಡಕುಗಳು ಅವರ ಸಂಬಂಧದಿಂದಲೇ - ಪರಸ್ಪರರು ಸ್ನೇಹ ಪ್ರೇಮಗಳಿಂದ ಕೂಡಿ ಕೆಲಸಮಾಡುವುದರಿಂದಲೇ ನಿವಾರಣೆಯಾಗಬೇಕು, ಎಂಬ ಭಾವನೆಯಿದ್ದ ಕಾಲವದು ರಾಷ್ಟ್ರಸಭೆಯ ಧ್ಯೇಯವಾದರೂ, ಭಾರತೀಯರಿಗೆ ಸ್ವತಂತ್ರ ಪರಿಪಾಲನಾ ಸೌಕರ್ಯಬೇಕು. ಆದರೆ ಅದು ಸಾರ್ವಭೌಮ ಬ್ರಿಟಿಷ್ ಸರಕಾರದ ರಕ್ಷಣೆಗೆ ಒಳಪಟ್ಟಿರಬೇಕು ಎಂದು ಇದ್ದಿತಲ್ಲದೆ, ಈಗಿನ ಸಂಪೂರ್ಣ ಸ್ವಾತಂತ್ರ್ಯ ಧ್ಯೇಯವನ್ನು ಆಗ

ಕನಸಿನಲ್ಲೂ ಎಣಿಸುವವನಿರಲಿಲ್ಲ. ಒಂದೊಂದು ವಿಚಾರವೂ, ಹಲವು ಬಗೆಯ ಸ್ಥಿತಿಗಳನ್ನು ದಾಟಿದಲ್ಲದೆ ಒಂದು ನಿಶ್ಚಿತ ರೂಪಕ್ಕೆ ಬರಲಾರದಲ್ಲವೆ? ಹಾಗೆಯೇ ಭಾರತದೇಶೀಯ ರಾಜಕೀಯ ವಿಚಾರವಾದರೂ! ರಾಷ್ಟ್ರವಿಚಾರದಲ್ಲಿ ಯಾವ ಭಾವನೆಯೂ ಇರದ ಆಗಿನ ಕಾಲದಲ್ಲಿ ಏಕಾಏಕಿ ಸಂಪೂರ್ಣ ಸ್ವಾತಂತ್ರ್ಯ ವಿಚಾರವನ್ನು ಬೋಧಿಸುವುದೂ, ಅದರ ನಿಶ್ಚಯಸ್ವರೂಪವನ್ನು ಪ್ರಜೆಗಳು ಗ್ರಹಿಸುವುದೂ ಎರಡೂ ಅಸಂಗತ ವ್ಯಾಪಾರವೇ! ಆ ಕಾಲದಲ್ಲಿ ರಾಜಕೀಯ ವಿಚಾರವಂತಿರಲಿ. ಪ್ರಾರಂಭಕ್ಕೆ ತಾವಾರು ತಾವಿರುವುದೆಲ್ಲಿ, ತಮ್ಮ ಮಾತೃದೇಶವಾವುದು, ಅದು ಪೂರ್ವದಲ್ಲಿ ಎಂತಹ ಮಹೌನ್ನತ್ಯಸ್ಥಿತಿಯಲ್ಲಿದ್ದಿತು. ಈಗ ಹೇಗಿದೆ, ಹೀಗಿರಲು ಕಾರಣವೇನು, ಈಗ ಇರುವ ಸ್ಥಿತಿಯೆಂಥದು, ಇದಕ್ಕಿಂತಲೂ ಉತ್ತಮವಾದ ಸ್ಥಿತಿಯೊಂದು ಉಂಟೆ? ಇದ್ದರೆ ಅದನ್ನು ಸಾಧಿಸುವ ಬಗೆಯಾವುದು. ಎಂಬ ಮುಂತಾದ ಬಾಲ ಪಾಠಗಳನ್ನು ಜನಾಂಗಕ್ಕೆ ಕೊಟ್ಟು, ಶತಮಾನಗಳ ಕಾಲದಿಂದ ದೀರ್ಘನಿದ್ರೆಯಲ್ಲಿ ಬಿದ್ದಿದ್ದ ರಾಷ್ಟ್ರವನ್ನು ಎಚ್ಚರಗೊಳಿಸಿ, ಎಬ್ಬಿಸುವುದು ಆವಶ್ಯಕವಾಗಿದ್ದಿತು. ಆಗ ಆವಶ್ಯಕವೂ - ಸಾಧ್ಯವೂ ಇದ್ದ ಕಾರ್ಯವು ಅಷ್ಟೆ! ಸೂರ್ಯೋದಯಕ್ಕೆ ಪೂರ್ವದಲ್ಲಿ, ಬಹು ಹೊತ್ತಿನ ಮುಂಚೆಯೇ ಆಗುವ ಅರುಣೋದಯದಂತೆ ಸ್ವಾತಂತ್ರ್ಯ ಸೂರ್ಯೋದಯಕ್ಕೆ ಬಹು ಪೂರ್ವದಲ್ಲೇ ಆದ ದೇಶಾಭಿಮಾನದ ಉದಯವನ್ನು ಸೂಚಿಸುವ ಕೋಳಿ ಕೂಗು-ಈ ನಮ್ಮ ಕಥಾನಾಯಕನು ಆಗ ನಡೆಯಿಸಿದ ಕಾರ್ಯವು, ಎಂದು ಹೇಳ ಬಹುದು. ಕಾಲಾಧೀನನಾದ ಮನುಷ್ಯನು ಲೌಕಿಕ ಪಾರಲೌಕಿಕ ಸಕಲ ಕಾರ್ಯಗಳನ್ನೂ, ಸರ್ವಚೈತನ್ಯಸ್ವರೂಪನೂ, ಜಗನ್ನಾಟಕ ಸೂತ್ರಧಾರಿಯೂ ಆದ ಸರ್ವೇಶ್ವರನ ಕೈ ಬೊಂಬೆಯಾಗಿ, ಯಾವಕಾಲಕ್ಕೆ ಯಾವುದು ಸೂಕ್ತವೆಂದು ಆ ಸರ್ವಶಕ್ತಿಮೂರ್ತಿ ಭಗವಂತನಿಗೆ ತೋರುವುದೋ, ಹಾಗೆ - ಆತನು ನಡೆಯಿಸಿದಂತೆ ನಡೆಯುವನು, ಆಡಿಸಿದಂತೆ ಆಡುವನು.

ಇಷ್ಟು ದಿನಗಳಮೇಲೆ, ನಮ್ಮ ಕಥಾನಾಯಕನಿಂದ ಆಗ ನಡೆದ ಕಾರ್ಯವನ್ನು ಕುರಿತು ಯೋಚಿಸಿದರೆ, ಆಗ್ಗೆ ಅಷ್ಟು ಮಾತ್ರವೇ ಸಾಧ್ಯವಿತ್ತೆಂದೂ, ಕಾಲಾನುಸಾರವಾಗಿ ಬೆಳೆದು ಈಗ ಈ ಸ್ವರೂಪವನ್ನು ಹೊಂದಿರುವ ರಾಷ್ಟ್ರೀಯ ಭಾವನೆಗೆ ಅದೇ ತಳಹದಿಯಾಗಿದೆ ಎಂದೂ ಯೋಚಿಸಿದರೆ

ಅದರಲ್ಲಿ ಅಸಂಗತ ತೋರುವುದಿಲ್ಲ. ನಮ್ಮ ಕಥಾನಾಯಕನೂ ಸಹ, ತನ್ನಿಂದ ರಾಷ್ಟ್ರಸೇವೆಗಾಗಿ ನಡೆಯಬೇಕಾಗಿದ್ದ ಅಮೌಲ್ಯ ಕಾರ್ಯವ ನ್ನೊಂದನ್ನು ನಿರ್ವಂಚನೆಯಿಂದ - ಶಕ್ತಿಮೀರಿ ಅಷ್ಟು ಮಾತ್ರ ನೆರವೇರಿಸಿ ಧನ್ಯನಾದನು.

ಆತನ ಕಾಲದ, ರಾಷ್ಟ್ರೀಯ ಧ್ಯೇಯಕ್ಕೂ, ರಾಜಕೀಯ ಭಾವನೆಗ ಳಿಗೂ, ಈಗಿನ ಭಾವನೆ - ಧ್ಯೇಯಗಳಿಗೂ ಅಜಗಜಾಂತರವುಂಟು! ಆಗಿನ ಭಾವನೆಯ ವಾತಾವರಣದಲ್ಲೇ ಬೆಳೆದು ಬಂದು - ಅದನ್ನೇ ಸಾಧುಮಾರ್ಗ ವೆಂದು ತಿಳಿದು ಬೋಧಿಸುತ್ತಾ ಬಂದ ಆತನಿಗೆ ಈಗಿನ ಭಾವನೆಗಳು ಪ್ರಳ ಯಕಾರಿಗಳೆಂದು ಬೋಧವಾಗಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಸುರೇಂದ್ರ ನಾಥ ಬಾಬುವು, ವೃದ್ಧಾಪ್ಯದಲ್ಲೂ, ತನಗೆ ಸೂಕ್ತವೆಂದು ತೋರಿದ್ದ ಮಾ ರ್ಗದಲ್ಲೇ ನಡೆಯುತ್ತಾ, ಬ್ರಿಟಿಷ್ ಸರ್ಕಾರದೊಂದಿಗೆ ಸಹಕಾರದಿಂದಲೇ ಇದ್ದು, ದೇಶವು ಸಾಮ್ರಾಜ್ಯ ಸರಕಾರಕ್ಕೆ ಅಧೀನವಾದ ಸ್ವಾತಂತ್ರ್ಯಸಂ ಪಾದನೆ ಮಾಡಬೇಕೆಂದು ಪ್ರತಿಪಾದಿಸುತ್ತ, ಆಗ್ಗೆ ಆಚರಣೆಯಲ್ಲಿ ಬಂದಿದ್ದ ರಾಜಕೀಯ ಸುಧಾರಣೆಯಂತೆ ಬಂಗಾಳಾ ಸರಕಾರದಲ್ಲಿ ಮಂತ್ರಿ ಪದವಿಯ ನ್ನೂ ಸ್ವೀಕರಿಸಿದ್ದು, ಕೆಲಕಾಲ ಕೆಲಸಮಾಡಿ, ಕೊನೆಗೆ ೧೯೨೫ನೆಯ ಸಂವ ತ್ಸರದ ಆಗಸ್ಟು ೬ನೆಯ ತಾರೀಖಿನಲ್ಲಿ ಮಣಿರಾಮುಪುರದ ತನ್ನ ಸ್ವಗೃಹದಲ್ಲಿ ಈ ಪಾಂಚಭೌತಿಕ ಕಳೇಬರವನ್ನು ವಿಸರ್ಜಿಸಿ ದಿವಂಗತನಾದನು.

ನಮ್ಮ ಕಥಾನಾಯಕನ ದೇಶಾಭಿಮಾನವೂ ಉತ್ಸಾಹವೂ ಕರ್ತವ್ಯ ನಿಷ್ಠೆಯೂ ದೇಶಸೇವಾ ವಿಷಯದಲ್ಲಿದ್ದ ಶ್ರದ್ಧಾಭಕ್ತಿವಿಶ್ವಾಸಗಳೂ ಅನುಪ ಮವಾದುವು.-ಪ್ರಥಮ ದರ್ಜೆಗೆ ಸೇರಿದುವು. ಆತನ ಕರ್ತೃ ಸಾಮರ್ಥ್ಯವು ಅನುಪಮ - ಅಪ್ರತಿಮವೆನ್ನಿಸತಕ್ಕುದು. ಸರ್ವೇಶ್ವರನು ಆತನಲ್ಲಿ ಅತಿ ಶಯ ಪ್ರಮಾಣದಿಂದ ಮೂರ್ತಿಗೊಂಡಿದ್ದ ಈ ಗುಣಗಳು ಸದ್ಯಃಕಾಲದಲ್ಲಿ ಭಾರತ ಬಾಲಕರಲ್ಲೂ ಕಳೆಗೊಂಡು ಅವರೂ ಮಾತೃ ದೇಶಸೇವೆ - ಮಾತೃ ಭಾಷಾಸೇವೆಗಳಿಗಾಗಿ ತನುಮನಧನಗಳನ್ನು ತೆತ್ತು, ತ್ರಿಕರಣ ಶುದ್ಧಿಯಿಂದ ದುಡಿಯುವಂತಹ ಮನೋಭಾವವನ್ನು, ದಯಮಾಡಿ ಅನುಗ್ರಹಿಸಲಿ,

ತಥಾಸ್ತು.

॥ ಶ್ರೀ ರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಕರ್ಣಾಟಕ ಸಾಮ್ರಾಜ್ಯದ ವೈಭವಕಾಲದಲ್ಲಿ ಮಹತ್ಕಾರ್ಯಗಳನ್ನು ಮಾಡಿ, ಜಗತ್ತಿನ ಇತಿಹಾಸಕ್ಕೆ ತಮ್ಮದೂ ಒಂದು ಪುಟವನ್ನು ಸೇರಿಸಿ ಸುಪ್ರಸಿದ್ಧರಾದ ಮಹನೀಯರು ಅನೇಕರುಂಟು. ಜನಿಸಿ, ಜೀವಿಸಿ, ನಾಶವಾಗುವುದೇ ಲೋಕದ ಎಲ್ಲಾ ಸಂಸ್ಥೆ-ಸಾಮ್ರಾಜ್ಯಗಳ ಗತಿಯಾದುದರಿಂದ, ಕರ್ಣಾಟಕ ಸಾಮ್ರಾಜ್ಯವು, ತನ್ನ ಕಾಲವನ್ನು ಕಳೆದುಕೊಂಡು, ಈಗ ಅಸ್ತಮಿಸಿರುವುದೂ ಸ್ವಾಭಾವಿಕವಾಗಿಯೇ ಇದೆ. ಒಂದು ಸಂಸ್ಥೆಯಾಗಲೀ ಒಬ್ಬ ಮನುಷ್ಯನಾಗಲೀ, ಈಗ ಇರಬಹುದಾದ ದುಸ್ಥಿತಿಗಾಗಿ ತನ್ನನ್ನು ತಾನೇ ಹಳಿದುಕೊಂಡು ಎಷ್ಟು ಕಾಲ ಕುಳಿತರೂ ಅದರಿಂದ ಯಾವ ಬಗೆಯ ಪುರುಷಾರ್ಥಸಿದ್ಧಿಯೂ ಆಗಲಾರದು. ಆದರೆ ಅದಕ್ಕೆ ಬದಲಾಗಿ ತನ್ನ ಪೂರ್ವಸ್ಥಿತಿಯ ಮಹತ್ವವನ್ನು ಸ್ಮರಿಸಿಕೊಂಡು ಹೆಚ್ಚಳಪಡುವುದರಿಂದು ಇಂದಲ್ಲದಿದ್ದರೆ ನಾಳೆಯಾದರೂ ಹಿಂದಿನ ಆ ಸ್ಥಿತಿಯನ್ನು ಪಡೆದು, ಮಹತ್ಕಾರ್ಯಗಳನ್ನು ಮಾಡಿ, ತನ್ನ ಯಶಶ್ಚಂದ್ರಿಕೆಯನ್ನು ಲೋಕದಲ್ಲಿ ಬೆಳಗಿಸಬೇಕು ಎಂಬ ಆಸೆಯುದಯಿಸಲು ಅವಕಾಶವಾಗುವುದು. ಪುರಾಣಪುರುಷರ ಶೌರ್ಯ ಸಾಹಸಗಳ ಕಥನವನ್ನೂ ಅವರ ಕಾಲದಲ್ಲಿದ್ದ ತನ್ನ ಮಾತೃಭೂಮಿಯ ಮಹೌನ್ನತ್ಯಸ್ಥಿತಿಯನ್ನೂ ಕೇಳಿದುದೇ ಅಲ್ಲವೆ ಶಿವಾಜಿಯು ಅಪ್ರತಿಮ ಶೌರ್ಯಧೈರ್ಯಗಳನ್ನು ಪ್ರಕಟಿಸಿ, ದುಷ್ಟನಿಗ್ರಹ ಶಿಷ್ಟಪರಿಪಾಲನೆಯಿಂದ ಧರ್ಮಸ್ಥಾಪನೆಗಾಗಿ ಸ್ವರಾಜ್ಯವನ್ನು ಸಾಧಿಸುವಂತಹ ಉತ್ಸಾಹವನ್ನು ಗಳಿಸಲು ಅವಕಾಶವನ್ನು ಕಲ್ಪಿಸಿದುದು! ಇಂದಿನ ಕರ್ಣಾಟಕ ಬಾಲಕರಿಂದ ಏನಾದರೂ ಮಹತ್ಕಾರ್ಯವು ನಡೆಯಬೇಕೆಂಬುದು ನಮ್ಮ ಅಭಿಪ್ರಾಯವಾಗಿದ್ದರೆ, ಅವರಿಗೆ ಹಿಂದಿನ ಕರ್ಣಾಟಕ ದೇಶದ ಚರಿತ್ರೆಯನ್ನೂ ಕರ್ಣಾಟಕ ವೀರರು ಪ್ರಕಟಿಸಿದ ಶೌರ್ಯ ಸಾಹಸಗಳ ಚಿತ್ರ

ವನ್ನೂ ಒದಗಿಸಿಕೊಡುವುದೇ ಪ್ರಥಮೋಪಾಯವಾಗಿರುವುದು. ಗಿಡದ ಸುರಕ್ಷಣೆಯನ್ನು ಬಯಸುವವನು ಅದರ ಬೇರಿನ ಭದ್ರತೆಯನ್ನು ಗಮನಿಸಿ ಅದಕ್ಕೆ ಹೊಸಮಣ್ಣು ಗೊಬ್ಬರಗಳನ್ನು ಒದಗಿಸಿ ನೀರು ಹೊಯ್ದು ಪೋಷಿಸಿದರೆ ಸಾಕು. ಮುಂದಿನ ಕೆಲಸವು ನಿರ್ಬಾಧಕವಾಗಿ ನಿಶ್ಚಿಂತೆಯಿಂದ ನಡೆಯುವುದು, ಅಲ್ಲವೆ? ಹಾಗೆಯೇ ಭವಿಷ್ಯಜ್ಜನಾಂಗದ ಸಸಿಗಳಂತಿರುವ ಇಂದಿನ ಬಾಲಕಬಾಲಿಕೆಯರ ಮನಸ್ಸಿನಲ್ಲಿ ಉನ್ನತಭಾವನೆಗಳನ್ನೂ ಉನ್ನತ ಆಶಯಗಳನ್ನೂ ತುಂಬಿಸಿ, ಅವರು ಈಗಿನಿಂದಲೂ ಕನ್ನಡಿಗರಾದ ನಮ್ಮ ಕುಟುಂಬವು ನಿರ್ಗತಿಕವಾದುದಲ್ಲ-ಲೋಕವಲ್ಲಿ ಅನಾಮಧೇಯವಾಗಿ ಜೀವಿಸಿದುದಲ್ಲ ಎಂದು ಹೆಮ್ಮೆಗೊಳ್ಳುವಂತೆ, ಎದೆಯುಬ್ಬಿಸಿಕೊಂಡು - ತಲೆಯೆತ್ತಿಕೊಂಡು ನಡೆಯುವಂತೆ ಅವಕಾಶಗಳನ್ನು ಕಲ್ಪಿಸತಕ್ಕುದು ಪ್ರತಿಯೊಬ್ಬ ದೇಶಾಭಿಮಾನಿಯ ಕರ್ತವ್ಯವಾಗಿದೆ. - ಭಾಷಾಭಿಮಾನಿಯೂ ತನ್ನ ಮಾತೃಭಾಷೆಗೆ ಅದಕ್ಕಿಂತಲೂ ಹೆಚ್ಚಿನ ಸೇವೆಯೊಂದನ್ನು ಸಲ್ಲಿಸಲಾರನು.

ಶ್ರೀ ವಿದ್ಯಾರಣ್ಯ ಮುನೀಶ್ವರರು ತಮ್ಮ ಅಗಾಧ ತಪಶ್ಚರ್ಯೆಯಿಂದ ಲೋಕಕ್ಕೇ ಅಪೂರ್ವವೆನ್ನಿಸುವಂತೆ ಸುವರ್ಣ ವೃಷ್ಟಿಯನ್ನು ಪಡೆದು. ತನ್ಮೂಲಕ ಹುಕ್ಕ ಬುಕ್ಕರಿಂದ ಸ್ಥಾಪಿಸಿದ ವಿಜಯನಗರ ಸಾಮ್ರಾಜ್ಯದ ಕಾಲವೇ ಕರ್ನಾಟಕರ ಮಹದ್ವೈಭವ ಸ್ಥಿತಿಯೆಂದು ನಿರ್ವಿವಾದವಾಗಿ ಹೇಳಬಹುದಲ್ಲವೆ! ಹಾಗೆ ಸ್ಥಾಪನೆಯಾಗಿ ಬೆಳೆದು ಬಂದ ವಿಜಯನಗರ ಸಾಮ್ರಾಜ್ಯದ ಮೇಲ್ಪಂಕ್ತಿಯನ್ನು ಅನುಸರಿಸಿಯೇ ಕರ್ನಾಟಕದ ಇತರ ಭಾಗಗಳಲ್ಲೂ ಬೇರೆ ಹಲಕೆಲವು ಚಿಕ್ಕ ಚಿಕ್ಕ ರಾಜ್ಯಗಳು ಹುಟ್ಟಿ ಬೆಳೆದುವು. ಅವುಗಳಲ್ಲಿ ೧೫೦೦ರಿಂದ ೧೭೬೩ರ ವರೆಗೆ ಎಂದರೆ ಎರಡು ಶತಮಾನಗಳ ಕಾಲ ಅವಿಚ್ಛಿನ್ನವಾಗಿ ರಾಜ್ಯಭಾರಮಾಡಿದ ಬಿದರೂರು (ಬಿದನೂರು) ಸಂಸ್ಥಾನವು ಮುಖ್ಯವಾದುದು. ಆ ಸಂಸ್ಥಾನವನ್ನು ಆಳಿದ ನಾಯಕರೆಂಬ ಪ್ರಭುಗಳು, ಶೌರ್ಯವೀರ್ಯಗಳಲ್ಲಾಗಲೀ - ಧೈರ್ಯೌದಾರ್ಯಗಳಲ್ಲಾಗಲೀ ಯಾವ ಧೀರೋದಾತ್ತ ಕ್ಷತ್ರಿಯರಾಜರಿಗೂ ಕಡಮೆಯೆನ್ನಿಸಿದವರಲ್ಲ. ಅವರ ರಾಜಧಾನಿಯೂ, ಈಗಿನ ರಾಜಧಾನಿಪಟ್ಟಣಗಳಂತೆಯೇ, ಸಕಲವಿಧ ಸೌಭಾಗ್ಯಗಳಿಗೂ ನೆಲೆವೀಡಾಗಿದ್ದು-ವ್ಯಾಪಾರ ಉದ್ಯೋಗಗಳ ಮಾತೃಸ್ಥಾನಗಳಾಗಿ ಕಂಗೊಳಿಸುತ್ತಿದ್ದುವು. ಬಿದನೂರು ಸಂಸ್ಥಾನದಲ್ಲಿ ಲಕ್ಷ್ಮಿಯು

ತಾಂಡವವಾಡುತ್ತಲಿದ್ದ ಆ ಕಾಲದಲ್ಲಿ, ಮಲೆನಾಡಿನಪ್ರಜೆಗಳು ವ್ಯವಸಾಯ, ದೇಶಪಿದೇಶಗಳೊಂದಿಗೆ ವ್ಯಾಪಾರ, ಸಕಲವಿಧ ಕುಶಲ ಕಲೆಗಳು, ಪ್ರಜೋಪಯೋಗಕರವಾದ ಹಲವು ಬಗೆಯ ಉದ್ಯೋಗಗಳು ಮುಂತಾದುವನ್ನು ಅವಲಂಬಿಸಿ ಪೋರ್ಚುಗೀಸರು, ಇಂಗ್ಲೀಷರು ಮುಂತಾದ ಪರದೇಶೀ ವರ್ತಕರನ್ನೂ ತಮ್ಮೆಡೆಗೆ ಆಕರ್ಷಿಸುತ್ತಿದ್ದರು. ಧರ್ಮಮಾರ್ಗೈಕ ತತ್ಪರರಾದ ಆಗಿನ ರಾಜರು, ಪಕ್ಷಪಾತವಿಲ್ಲದೆ ತಮ್ಮ ಆಳ್ವಿಕೆಗೊಳಪಟ್ಟ ಪ್ರಜೆ ಪರಿವಾರಗಳನ್ನು ಮಕ್ಕಳಂತೆ ತಿಳಿದು ಕಾಪಾಡುತ್ತಾ, ಪ್ರಜೆಗಳಲ್ಲಿ ಅಸಂತುಷ್ಟಿ, ಪರಸ್ಪರ ದ್ವೇಷಾಸೂಯೆಗಳು, ವರ್ಣಸಾಂಕರ್ಯ ಮುಂತಾದುವು ಉಂಟಾಗಲು ಲೇಶಮಾತ್ರವೂ ಅವಕಾಶವುಂಟಾಗದಂತೆ ದರ್ಪದಿಂದ ರಾಜ್ಯವಾಳಿ ಕೀರ್ತಿಶೇಷರಾದರು. ಬಿದನೂರು ಸಂಸ್ಥಾನವನ್ನು ಆಳಿದ ಒಟ್ಟು ಹದಿನೇಳು ಮಂದಿ ರಾಜವರೇಣ್ಯರಲ್ಲಿ, ನಮ್ಮ ಪ್ರಕೃತ ಕಥಾನಾಯಕನಾದ ಶಿವಪ್ಪನಾಯಕನು ಸರ್ವಶ್ರೇಷ್ಠನು, ಸುಪ್ರಸಿದ್ಧನು, ಧೀರೋದಾರ ಚರಿತ್ರನು. ಆತನ ಈ ಚರಿತ್ರೆಯನ್ನೂ ಕನ್ನಡ ಬಾಲಕ ಬಾಲಿಕೆಯರೂ, ಮಹಾಜನರೂ ಓದಬೇಕು. ಕನ್ನಡಿಗರ ಮಹತ್ಸೌಭಾಗ್ಯದ ಆ ಸ್ಥಿತಿಗಾಗಿ ಹೆಚ್ಚಳಪಡಬೇಕು. ಮುಂದೆ ಪುನಃ ಹಾಗಾಗಲೆಂದು - ಅಂತಹ ಸೌಭಾಗ್ಯದ ಕಾಲವೊಂದು ಪ್ರಾಪ್ತಿಸಲೆಂದು ಹಾರೈಸಬೇಕು. ಈ ಮಹತ್ವದ ಉದ್ದೇಶವನ್ನು ಮನಸ್ಸಿನಲ್ಲಿಟ್ಟು ಯಥಾನುಶಕ್ತಿ ಮಾತೃಭಾಷಾ ಸೇವೆಯಲ್ಲಿ ತೊಡಗಿ ಶ್ರಮಿಸುತ್ತಿರುವ 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಗೆ ಸ್ವಹಸ್ತ ಪರಹಸ್ತ ಯೋಗ್ಯ ಪ್ರೋತ್ಸಾಹಗಳನ್ನೊದಗಿಸಿ ರಕ್ಷಿಸಬೇಕು. ಇದೇ ನಮ್ಮ ಪ್ರಾರ್ಥನೆ.

ಬೆಂಗಳೂರು
ತಾ. ೧೬-೧೨-೩೧

ಇತಿ ಸುಜನವಿಧೇಯ
**ಯಂ. ರಾಮರಾವ್**



# ಶಿವಪ್ರಭುವಿನ ರಾಜ್ಯ

ಪ್ರಜೆಗಳುಸಿರ್ವ ಬಿನ್ನಪವನಾಲಿಸಿ ಯೊಳ್ಗಿರೆಕೊಳ್ಪುರಂಗಳಂ
ಸೃಜಿಯಿಸಿ ಮೇಣವರ್ಗೆ ಕರಮೂಲಧನಂಗಳನಿತ್ತು ಬಿತ್ತುಮಂ
ನಿಜಮೆನಲಿತ್ತು ಗೋಪ್ಪಬದನಿತ್ತಿಳೆಯಂ ಮಿಗೆಬೀಳಲೀಯದಾ
ದ್ವಿಜಸುರಪಾದಪಂ ಶಿವನೃಪಂ ಮಿಗೆ ಗೈಮೆಗೆ ತಂದನಳ್ತಿಯಿಂ ।

ಕಡುಗಿ ದುರಾಸೆಯಿಂ ಪ್ರಜೆಗಳಂ ನೆರೆನೋಯಿಸದಾನ್ಯಪಾರ್ಥಿವಂ
ಬಿಡದೆ ತದೀಯಸೌಖ್ಯ ಸುಪದಾರ್ಥಗಳಂ ಲವಮಾತ್ರಮಾಮೊಡಂ
ಪೊಡವಿಯನೈದೆ ಪಾಳ್ಗೆಡಹಲೀಯದೆ ಬಲ್ಪಿಡಿದಂತೆ ಝುಂಕೆಯಿಂ
ನಡೆಯಿಪನಿಂತು ನಾಡಿನಧಿಕಾರವನೇಳ್ಗೆಗೆ ತಂದನುರ್ವಿಯಂ ।

ಪುಸಿ ಠಕ್ಕುತೌಳಿಚೌರ್ಯಂ
ಪಿಸುಣಾನ್ಯಾಯಂ ವಿರೋಧಮಪಹೃತಿ ಭಯಮು
ಬ್ಬಸ ಮೋಸ ಪಾದರಂಗಳ
ಪೆಸರುಸಿರಲ್ಕಿಲ್ಲಮೆನಿಸಿ ಪೊರೆದಂ ಧರೆಯಂ ।

ದುಷ್ಟಜನರ್ಕಳ ಶಿಕ್ಷಿಸಿ
ಶಿಷ್ಟರನುರೆ ಪೊರೆದು ಸಂತತಂ ಶಿವಪೂಜಾ
ನಿಷ್ಠನೆಂದೆನಿಸಿ ಲೋಗರ
ರಿಷ್ಟಗಳಂ ತವಿಸಿ ಪೊಡವಿಯಂ ಪಾಲಿಸಿದಂ ॥

'ಕೆಳದಿನೃಪವಿಜಯಂ'



|| ಶ್ರೀರಾಮಸಹಾಯಂ ||

## ಬಿದನೂರು ಸಂಸ್ಥಾನಾಧಿಪತಿ-ಸುಪ್ರಸಿದ್ಧ

# ಶಿವಪ್ಪನಾಯಕ

---

**ಅಧ್ಯಾಯ ೧** **"ವಂಶಪರಿಚಯ"**

ಶ್ರೀರಾಮಸೇತುವಿನಿಂದ ಹಿಮಾಚಲದವರೆಗೂ, ಕಾಥ್ಯವಾಡದಿಂದ ಕಾಮರೂಪದೇಶ (ಅಸ್ಸಾಮಿನ) ದವರೆಗೂ ವಿಸ್ತರಿಸಿರುವ ನಮ್ಮ ಮಾತೃಭೂಮಿ-ಭಾರತದೇಶವೆಲ್ಲವೂ ಪುರಾಣಕಾಲದಿಂದೀಚೆಗೆ ಎಂದೂ ಒಬ್ಬನೇ ರಾಜನ ಆಳ್ವಿಕೆಗೊಳಪಟ್ಟಿದ್ದಂತೆ ಕಂಡುಬರುತ್ತಲಿಲ್ಲ. ದೇಶದ ವಿವಿಧ ಭಾಗಗಳು ಬೇರೆ ಬೇರೆ ರಾಜರ, ನವಾಬರ ಅಥವ ಪಾಳೆಯಗಾರರ ಸ್ವಾಧೀನದಲ್ಲಿದ್ದು ಆಯಾ ದೇಶಾಚಾರ ನಡೆನುಡಿಗಳನ್ನು ರಕ್ಷಿಸಿಕೊಂಡು, ಪಾರಂಪರ್ಯವಾಗಿ ನಡೆದು ಬಂದುವು. ಭಾರತದೇಶಕ್ಕೆ ಮುಹಮ್ಮದೀಯರ ಪ್ರವೇಶವಾಗುವವರೆಗೂ ಎಂದರೆ ಈಗಿಗೆ ಹೆಚ್ಚುಕಡಮೆ ೯೦೦-೧೦೦೦ ವರ್ಷಗಳಿಗೆ ಪೂರ್ವದಲ್ಲಿ ದೇಶವೆಲ್ಲವೂ ಅನೇಕ ಬೇರೆ ಬೇರೆ ರಾಜಮನೆತನಗಳಿಂದ ಆಳಲ್ಪಡುತ್ತಿದ್ದರೂ, ಒಟ್ಟಿನಲ್ಲಿ ಎಲ್ಲರೂ ಹಿಂದೂ ಬುಡಕಟ್ಟಿಗೇ ಸೇರಿದವರಾಗಿ, ಹಿಂದೂ ಸಂಸ್ಕೃತಿಯನ್ನೇ ಕಾಪಾಡಿಕೊಂಡು ಬಂದರು. ಮುಹಮ್ಮದೀಯರ ಆಧಿಪತ್ಯವು ಪ್ರಬಲಿಸಿದಮೇಲೆ, ಅನೇಕ ಹಿಂದೂ ರಾಜಮನೆತನಗಳು ಅವರಿಂದ ಪರಾಜಯಹೊಂದಿ ನಾಮಾವಶೇಷವಾದುವು. ರಾಜ್ಯಗಳು ಪರಾಕ್ರಾಂತವಾದುವು. ಅವರ ಧಾಳಿಯಿಂದ ಪುರಾತನವಾದ ಹಿಂದೂ ಸಂಸ್ಕೃತಿಗೆ ವಿಶೇಷ ಧಕ್ಕೆ ಬಡಿಯಿತು. ಈಚೆಗೆ. ಮುನ್ನೂರು ವರ್ಷಗಳ ಪೂರ್ವದಲ್ಲಿ, ತಕ್ಕಡಿಹಿಡಿದು, ವ್ಯಾಪಾರವನ್ನೇ ಮುಖ್ಯವೃತ್ತಿಯನ್ನಾಗಿ-ಮುಖ್ಯಾವಲಂಬನವನ್ನಾಗಿ ಕೈಕೊಂಡು ಬಹುದೂರದಿಂದ ನಮ್ಮ ದೇಶಕ್ಕೆ ಬಂದು

ಇಲ್ಲಿಯ ನಿಷ್ಕಪಟಿಗಳೂ, ಸಾಧುಹೃದಯರೂ ಪರಹಿತಚಿಂತಕರೂ ಆದ ಜನರ ಸಾಧುತ್ವ ನಿಷ್ಕಪಟತ್ವಗಳನ್ನು ತಮ್ಮ ಲಾಭ ಸಂಪಾದನೆಗಾಗಿ ದುರುಪಯೋಗಪಡಿಸಿಕೊಂಡು, ಸಾಮ ದಾನ ಭೇದ ದಂಡವೆಂಬೀ ನಾಲ್ಕು ಉಪಾಯಗಳನ್ನೂ ಸಮಯವರಿತು ಪ್ರಯೋಗಿಸುತ್ತಾ ಕ್ರಮಕ್ರಮವಾಗಿ ಈ ವಿಸ್ತಾರವಾದ ದೇಶದ ವಿವಿಧ ಭಾಗಗಳನ್ನೂ ಆಕ್ರಮಿಸಿರುವ ಪಾಶ್ಚಾತ್ಯರ, ಮುಖ್ಯವಾಗಿ ಇಂಗ್ಲೀಷರ ಸಂಬಂಧದಿಂದಲಂತೂ, ನಮ್ಮ ನಾಗರಿಕತೆಯು ಬಹು ಕಿರುಕುಳಕ್ಕೆ ಒಳಪಟ್ಟು ಜೀವಿಸಬೇಕಾಯಿತು. ಕೇವಲ ನಾಗರಿಕತೆ ಮಾತ್ರವಲ್ಲ ನಮ್ಮ ಸನಾತನ ಧರ್ಮಗೃಹವೂ ಸಹ ರಾಜಾಶ್ರಯವು ತಪ್ಪಿ ಶಿಥಿಲವಾಗತೊಡಗಿತು. ಮಾತ್ರವಲ್ಲ, ಕೇವಲ ಲಾಭೋದ್ದೇಶದಿಂದಲೇ ವ್ಯಾಪಾರವೃತ್ತಿಯನ್ನು ಅವಲಂಬಿಸಿ ರಾಜಕೀಯ ಬೆಂಬಲದಿಂದ ಅದನ್ನು ಮುಂದಕ್ಕೊತ್ತಿಸುತ್ತಾ ನಡೆವ ಆಂಗ್ಲೇಯ ವಾಣಿಜ್ಯ ಸಂಘಗಳವರ ಪರಿಶ್ರಮವಂತೂ ನಮ್ಮ ದೇಶದ ವ್ಯಾಪಾರವನ್ನು ಮೂಲೆಗೊತ್ತಿಸಿತು. ಪರದೇಶದ ಯಂತ್ರ ಸಾಮಗ್ರಿಯ ಸಹಾಯದಿಂದ ಅಪಾರವಾಗಿ ತಯಾರಾಗಿ, ಥಳಥಳನೆಂದು ಹೊಳೆದು ನೇತ್ರಾನಂದಕರವಾಗಿ ರಂಜಿಸುತ್ತಿರುವ ವಿವಿಧ ಪದಾರ್ಥ ಸಮೂಹವು, ನಮ್ಮಲ್ಲಿಯ ವಿವಿಧ ಕಲಾಕುಶಲತೆಗಳನ್ನೂ ನೂರಾರು ಸಹಸ್ರಾರು ಕೈಕೆಲಸಗಳನ್ನೂ ನಿರ್ನಾಮವಾಗಿಸಿತು. ದೇಶೀಯ ನಿವಾಸಿಗಳಾದ ನಮಗೂ ನಮನ್ನಾಳುವ ರಾಜರಿಗೂ ಯಾವ ವಿಧವಾದ ಧಾರ್ಮಿಕ ಸಂಬಂಧ ಬಾಂಧವ್ಯಗಳೂ ಇಲ್ಲವಾದುದರಿಂದ, ನಮ್ಮ ಧಾರ್ಮಿಕ ಸಂಸ್ಥೆಗಳೆಲ್ಲವೂ ಕಳೆಗುಂದಿ, ತಕ್ಕ ಪೋಷಣೆಯಿಲ್ಲದೆ ಕ್ಷಯಿಸತೊಡಗಿದುವು. ಇನ್ನು ಧಾರ್ಮಿಕ ವಿಚಾರವನ್ನೇ ತಳಹದಿಯನ್ನಾಗಿ ಕೈಕೊಂಡು ಜೀವಿಸಿದ್ದ ನಮ್ಮ ಸಾಮಾಜಿಕ ಜೀವನವಂತೂ ಕುಲಗೆಟ್ಟುಹೋಯಿತೆಂದು ಹೇಳಬೇಕಾದುದೇ ಇಲ್ಲ. ಆಯಾ ಪ್ರಾಂತಗಳಲ್ಲಿ ಅನಾದಿಕಾಲದಿಂದಲೂ ವ್ಯವಹಾರದಲ್ಲಿದ್ದು ಬಂದ ಆಚಾರ ವ್ಯವಹಾರಗಳು, ರಾಜಕೀಯವಾದುದರಿಂದ ಪ್ರಬಲವೂ, ಉಪಜೀವನಕ್ಕೆ ಮುಖ್ಯ ಸಾಧನವೂ ಆದ ಆಂಗ್ಲೇಯ ಭಾಷಾಭ್ಯಾಸದ ಸೊಬಗಿನಿಂದ ಸ್ಥಾನಭ್ರಷ್ಟತೆಯನ್ನು ಹೊಂದಿ, ನಮ್ಮಿಂದ ದೂರವಾಗತೊಡಗಿದುವು. ಮಾತೃಭಾಷೆಯಲ್ಲಿ ವಾಚನ ಸಂಭಾಷಣೆಗಳು ನಮಗೆ ಅಸಹ್ಯವೆನ್ನಿಸತೊಡಗಿದುವು. ಹೀಗೆ ಒಂದಲ್ಲ ಎರಡಲ್ಲ ನೂರಾರು ಬಗೆ

ಯಿಂದ ನಮ್ಮ ಅವನತಿಯು ಪ್ರಾರಂಭವಾಗಿ ಬೆಳೆದು ಬರಲು ಪ್ರಧಮಕಾರಣವು, ಸ್ವಧರ್ಮಿಗಳಾದ ದೇಶೀಯರಾಜರು ಸ್ವತಂತ್ರವಾಗಿ ಆಯಾ ದೇಶಗಳನ್ನು ಆಳಿಕೊಂಡಿರಲು ಅವಕಾಶ ತಪ್ಪಿದುದೇ! ಹೀಗೆ ನಮ್ಮ ಧಾರ್ಮಿಕ ನೈತಿಕ, ಸಾಮಾಜಿಕ, ರಾಜಕೀಯ ಮುಂತಾದ ಸಕಲವಿಧ ಅವನತಿಗಳೂ ಏಕಕಾಲದಲ್ಲಿ ಒದಗಿದರೂ ಸಹ ಭಾರತೀಯ ಪುರಾತನ ಸಂಸ್ಕೃತಿಯು ಗ್ರೀಸ್, ರೋಮ್ ಮುಂತಾದ ಕೆಲಕೆಲವು ಪಾಶ್ಚಾತ್ಯ ಸಂಸ್ಕೃತಿಗಳಂತೆ ನಿರ್ನಾಮವಾಗದೆ ಇನ್ನೂ ಜೀವಂತ ಉಳಿದಿರುವುದಕ್ಕೆ, ಅದರ ದುರ್ದಮನೀಯವಾದ, ತೇಜಸ್ವಿಯಾದ ಅಂತಶ್ಶಕ್ತಿಯ ಪ್ರಭಾವವೇ ಕಾರಣವೆಂದರೆ ಅದು ಅತಿಶಯೋಕ್ತಿಯಲ್ಲ! ಕಾಲಕರ್ಮಸಂಯೋಗದಿಂದ ಕಳೆಗುಂದಿರುವ ಈ ಸಂಸ್ಕೃತಿಯು ಪುನಃ ತಲೆಯೆತ್ತಿ ಬೆಳೆದು ತನ್ನ ಪೂರ್ವದ ಮಹೋನ್ನತ್ಯಸ್ಥಿತಿಗೇರಿ, ತನ್ನ ಅಪೂರ್ವ ತೇಜಸ್ಸಿನಿಂದ ಲೋಕದ ಹಲವು ಜನಾಂಗಗಳಲ್ಲಿ ಮೇಟಿಯಾದುದು ಎನ್ನಿಸಬೇಕಾಗಿದ್ದರೆ, ದೇಶವು ಪರಾಧೀನತೆಯ ಸಂಕಲೆಗಳಿಂದ ಬಂಧಿತವಾಗಿರುವವರೆಗೂ ಸಾಧ್ಯವಾಗದು ಎಂದು ನಮ್ಮ ಮಾತೃಭೂಮಿಯು, ಪರರಾಜರ ಆಳ್ವಿಕೆಯ ನಿರ್ಬಂಧದಿಂದ ನಿರ್ಮುಕ್ತವಾಗಿ ಸತಂತ್ರವಾಗುವುದೋ, ಎಂದಿಗೆ ಪುನಃ ದೇಶಪುತ್ರರೇ ರಾಜ್ಯಪಾಲನೆಯ ಸೂತ್ರಗಳನ್ನು ಕೈಯಲ್ಲಿ ಹಿಡಿದು ಆಧಿಪತ್ಯಮಾಡತೊಡಗುವರೋ ಅಂದಿನಿಂದ ದೇಶದಲ್ಲಿ ಸಕಲವಿಧ ಸೌಭಾಗ್ಯಗಳೂ ಪುನಃ ಆವಿರ್ಭವಿಸುವುವು. ಧರ್ಮ ಅರ್ಥಕಾಮ ಮೋಕ್ಷವೆಂಬೀ ನಾಲ್ಕು ಪುರುಷಾರ್ಥಗಳ ಸಂಪಾದನೆಗೂ ಈ ರಾಜಕೀಯ ಸ್ವಾತಂತ್ರ್ಯವೇ ತಳಹದಿಯು. ನಮ್ಮ ಪೂರ್ವಿಕರು ರಾಜಕೀಯ ಸ್ವಾತಂತ್ರ್ಯದ ವಾತಾವರಣದಲ್ಲಿ ಜನಿಸಿ ಜೀವಿಸಿದ್ದವರಾದುದರಿಂದಲೇ ಅವರು ಮನುಷ್ಯರು - ಮನುಷ್ಯೋತ್ತಮರು -ಭೂದೇವತೆಗಳು ಎನ್ನಿಸಿಕೊಳ್ಳಲು ಅರ್ಹರಾಗಿದ್ದರು - ಅನ್ವರ್ಥನಾಮಧೇಯರಾಗಿದ್ದರು. ಇಂದು ನಾವು, ಎರಡು ಕಾಲು ಎರಡು ಕಣ್ಣುಗಳವೆಯಾದುದರಿಂದ ಮಾತ್ರ ಮನುಷ್ಯರೆಂದು ಕರೆಯಲ್ಪಡಬೇಕಾದ್ದಲ್ಲದೆ. ನಿಷ್ಕಪಟ ಮನೋಭಾವನೆಯಿಂದ ಹೃದಯಶೋಧನೆ ಮಾಡಿಕೊಂಡು ನಮ್ಮಲ್ಲಿ ಎಷ್ಟುಮಟ್ಟಿನ ಮನುಷ್ಯತ್ವವಿದೆಯೆಂದು ವಿಚಾರಮಾಡಿಕೊಂಡರೆ, ಸ್ಥಿತಿಯು ಬಹು ಶೋಚನೀಯವೆನ್ನಿಸೀತು. ಸತ್ಯ, ಶೌಚ, ಇಂದ್ರಿಯನಿಗ್ರಹ, ಧಾರ್ಮಿಕಾಚಾರ ವಿಚಾ

ರಗಳು, ತ್ಯಾಗ, ಪರೋಪಕಾರ, ಸಾತ್ವಿಕತೆ, ಭೂತದಯೆ, ಭಗವದ್ಭಕ್ತಿ ಮುಂತಾದ ಮಾನುಷತ್ವಕ್ಕೆ ಅತ್ಯಾವಶ್ಯಕವೆನ್ನಿಸುವ ಗುಣಗಳಲ್ಲಿ ಎಷ್ಟು ಅಂಶವು ನಮ್ಮ ನಿತ್ಯ ಜೀವನದಲ್ಲಿ ಪ್ರಕಟವಾಗುತ್ತಲಿದೆ ? 'ತರೋಣ ಬರೋಣ ತಿಂಥ್ಯಾಕೋಣ-ಮಲಗೋಣ ಮತ್ತೇಳೋಣ' ಇಷ್ಟಲ್ಲದೆ ನಮ್ಮ ಜೀವಿತೋದ್ದೇಶವು ಎಷ್ಟು ಹೆಜ್ಜೆ ಮುಂದರಿದಿದೆ ? ಛೆ, ಇಂತಹ ಹತಜೀವನವನ್ನು ಜೀವನವೆನ್ನಬಹುದೆ ? ನಮ್ಮಲ್ಲಿ ಉನ್ನತಭಾವನೆ ಉನ್ನತಆಶಯಗಳು ಮೂಡಿ, ಮನುಷ್ಯತ್ವವು ರೂಪುಗೊಂಡು, ನಾವೂ ಕೇವಲ ಮನುಷ್ಯರೂಪೀ ಮೃಗಗಳಲ್ಲ-ನಿಶ್ಚಯವಾಗಿ ಮನುಷ್ಯರು ಎಂಬ ಸಾರ್ಥಕನಾಮವನ್ನು ಹೊಂದಬೇಕಾಗಿದ್ದರೆ, ಮಹಾಮಹಿಮರಾದ ನಮ್ಮ ಪೂರ್ವಿಕರಂತೆ ಧೈರ್ಯಸಾಹಸ ಪರಾಕ್ರಮ, ಸತ್ಯಶಾಂತತೆ ಇಂದ್ರಿಯನಿಗ್ರಹ, ಭೂತದಯೆ ಪರೋಪಕಾರ ದೈವಭಕ್ತಿ ಮುಂತಾದ ದೈವಿಕ ಗುಣಗಳ ಉಪಾಸನೆಯಿಂದ ಪರಿಶುದ್ಧರಾಗಬೇಕು. ಉತ್ತಮರಾಗಬೇಕು. ಈ ಭಾಗದಲ್ಲಿ ಅವ್ಯಕ್ತಗಳಾದ ಅಂತಹ ಗುಣಗಳನ್ನು, ವ್ಯಕ್ತರೂಪದಿಂದ ಪ್ರದರ್ಶಿಸಿದ ಮಹಾಪುರುಷರು ನಮಗೆ ಆದರ್ಶಮೂರ್ತಿಗಳಾಗಿದ್ದು, ನಮ್ಮ ಉದ್ಧಾರಕ್ಕೆ ಕಾರಣರಾಗಬಲ್ಲರು. ಅಂತಹ ಆದರ್ಶಮೂರ್ತಿಗಳ ಜೀವಿತಗಳನ್ನು ಒದಗಿಸುವುದೇ ಗ್ರಂಥಮಾಲೆಯ ಜೀವಿತೋದ್ದೇಶವು ! ಹೀಗಿರುವಲ್ಲಿ ಅದನ್ನು ಆದರಿಸಿ ಪ್ರೋತ್ಸಾಹಿಸಿ, ಪೋಷಿಸಿ, ಅದರ ಸೇವೆಯನ್ನು ಚಿರಸ್ಥಾಯಿಯನ್ನಾಗಿಸುವುದು ಕನ್ನಡಿಗರ ಕರ್ತವ್ಯವಲ್ಲವೆ ?

ಕರ್ಣಾಟಕದೇಶವು ಮಹೌನ್ನತ್ಯ ಸ್ಥಿತಿಯಲ್ಲಿದ್ದಾಗ, ಆದರ ಆಳ್ವಿಕೆಯ ಮುಖ್ಯ ಸೂತ್ರಗಳನ್ನು ಹಿಡಿದು, ದೇಶದಲ್ಲಿ ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಳಿಂದ ಧರ್ಮವನ್ನು ರಕ್ಷಿಸಿಕೊಂಡು ಬಂದ ರಾಜವರೇಣ್ಯನೊಬ್ಬನ ಚರಿತ್ರವನ್ನು ಈ ಮುಂದಿನ ಪುಟಗಳಲ್ಲಿ ಕೊಡಲೆಳೆಸಿದ್ದೇವೆ! ಪಾಠಕ ಮಹಾಶಯರು ಸಾವಧಾನದಿಂದ ಮುಂದರಿಸಬೇಕು.

ಮೈಸೂರು ಸಂಸ್ಥಾನದ ಪಶ್ಚಿಮೋತ್ತರ ಪಾರ್ಶ್ವದಲ್ಲಿ ವ್ಯಾಪಿಸಿರುವ ಸಹ್ಯಾದ್ರಿಯಲ್ಲಿ ಜನ್ಮಗೊಂಡು ಸುಪ್ರಸಿದ್ಧವಾದ ತುಂಗಭದ್ರಾನದಿಗೆ ಉಪನದಿಯಾಗಿ ಪ್ರವಹಿಸುತ್ತಿರುವ ವರದಾನದಿಗೆ ಸಮೀಪದಲ್ಲಿ ಕೆಳದಿ ಎಂಬ

ಗ್ರಾಮವೊಂದಿದೆ. ಅದು ಈಗ ಹಾಳುಬಿದ್ದಿದೆಯಾದರೂ ಹಿಂದೆ ಒಂದು ಕಾಲದಲ್ಲಿ ಅದೊಂದು ಹೆಸರಾದ ಕರ್ಣಾಟಕರಾಜ್ಯದ ರಾಜಧಾನಿಯಾಗಿ ದ್ದಿತು. ಈ ಕೆಳದಿಗ್ರಾಮದ ಪಕ್ಕದಲ್ಲೇ ಇದ್ದ ಹಳ್ಳೀಬಯಲು ಎಂ ಬೊಂದು ಚಿಕ್ಕ ಗ್ರಾಮದಲ್ಲಿ ಬಸವಪ್ಪನೆಂಬ ಗೌಡನು ವಾಸವಾಗಿದ್ದನು. ಈತನು ಲಿಂಗವಂತ ಮತಸ್ಥನಾಗಿ ಪರಶಿವಭಕ್ತನೂ, ಸತ್ಯಶೌಚಾಚಾರ ಸಂಪನ್ನನೂ ಆಗಿ, ಲಿಂಗವಂತರಿಗೆ ಅತಿ ಮುಖ್ಯಗಳೆನ್ನಿಸಿದ ಮತ ತತ್ವಗಳ ನ್ನೆಲ್ಲಾ ಚೆನ್ನಾಗಿ ತಿಳಿದು ಮನನ ಮಾಡಿಕೊಂಡು, ಅನುಭವಶಾಲಿಯಾಗಿ ದ್ದನು. ಶ್ರೀ ಗುರುಲಿಂಗಜಂಗಮಸೇವಾತತ್ಪರನಾದ ಈತನನ್ನು ಆ ಪ್ರಾಂತದ ಸಕಲ ಲಿಂಗವಂತ ಮತಸ್ಥರೂ ವಿಶೇಷ ಭಕ್ತಿ ಗೌರವಗಳಿಂದ ಮನ್ನಿಸುತ್ತಿದ್ದರು. ಈತನಿಗೆ ಬಸಮ್ಮನೆಂಬೊಬ್ಬ ಪತ್ನಿಯು ಅನುರೂ ಪಳೂ ಅನುಕೂಲಳೂ, ಸಕಲ ಗೃಹಕಾರ್ಯಗಳಲ್ಲೂ ದೇವ ಅತಿಥಿ ಗುರು ಸೇವಾದಿಗಳಲ್ಲೂ ಆತನಿಗೆ ಸಹಾಯಕಳೂ ಆಗಿದ್ದು ಆತನ ಮನಮೆಚ್ಚಿಸಿ ದಳು. ಸಕಲ ಸದ್ಗುಣ ಶಿರೋಮಣಿಯೂ ಪತಿವ್ರತಾತಿಲಕವೂ ಆದ ತನ್ನಾಪತ್ನಿಯೊಂದಿಗೆ ಬೆರೆದು ದಾಂಪತ್ಯ ಧರ್ಮವನ್ನು ಸಾಗಿಸಿದ್ದ ಆ ಬಸ ವಪ್ಪನಿಗೆ ಕಾಲಕ್ರಮದಲ್ಲಿ ಇಬ್ಬರು ಮಕ್ಕಳು ಜನಿಸಿದರು. ಅವರಿಗೆ ಭದ್ರಪ್ಪ ಚೌಡಪ್ಪ ಎಂಬ ಹೆಸರುಗಳನ್ನಳವಡಿಸಿ, ತಾಯಿತಂದೆಗಳಿಬ್ಬರೂ ತಮ್ಮಾಪುತ್ರರ ಬಾಲಲೀಲಾ ವಿನೋದಗಳಿಂದ ಅಮಿತ ಸಂತೋಷಾಂತಃ ಕರಣರಾಗಿ ಕೆಲಕಾಲವನ್ನು ಕಳೆದರು. ಆರೋಗದೃಢಕಾಯರೂ, ಸದಾ ಚಾರಸಂಪನ್ನರೂ ಪ್ರೌಢವಯಸ್ಕರೂ ಆದ ಆ ದಂಪತಿಗಳ ಉದರ ಸಂಭೂ ತರಾದ ಆ ಮಕ್ಕಳಿಬ್ಬರೂ, ದೃಢಗಾತ್ರರೂ, ನಿರೋಗಿಗಳೂ, ತೇಜಸ್ವಿ ಗಳೂ, ಆಗಿದ್ದು ನೋಡುವವರ ಕಣ್ಮನಗಳಿಗೆ ಆನಂದವನ್ನುಂಟುಮಾ ಡುತ್ತಾ ಬೆಳೆಯುತ್ತಿದ್ದರು. ಬಸವಪ್ಪನು ತೇಜಸ್ವಿಗಳಾದ ತನ್ನಾಮಕ್ಕ ಳಿಗೆ, ವಿದ್ಯಾಬುದ್ಧಿಗಳಲ್ಲೂ, ಕುಲಾಚಾರ ಸಂಪ್ರದಾಯಗಳಲ್ಲೂ, ತಕ್ಕಂತೆ ಶಿಕ್ಷೆಯನ್ನಿತ್ತು, ತನ್ನ ವಂಶಕೀರ್ತಿಯು ಧರೆಯಲ್ಲಿ ಚಿರಕಾಲ ಮೆರೆಯುವಂತೆ ಸಿದ್ಧಗೊಳಿಸಬೇಕೆಂದು ಆಸೆಗೊಂಡಿದ್ದನು. ಆದರೆ ಕ್ರೂರವಿಧಿಯು, ಮುಂದೆ ಕೆಲವು ದಿನಗಳಲ್ಲೇ ಆತನನ್ನು ಇಹಜೀವಿತದಿಂದ ಮುಕ್ತನನ್ನಾಗಿ ಮಾಡಿತು.

ಪತಿಯು ಮೃತನಾದ ತರುವಾಯ ಬಸಮ್ಮನು ಅಪ್ರಬುದ್ಧರಾದ ತನ್ನಮಕ್ಕಳನ್ನಿಟ್ಟುಕೊಂಡು, ಗೃಹಕೃತ್ಯದಲ್ಲಿ ಅತ್ಯಂತ ಬುದ್ಧಿಶಾಲಿನಿಯಾದುದರಿಂದ ಪಿತ್ರಾರ್ಜಿತವಾಗಿ ಬಂದ ವ್ಯವಸಾಯ, ವ್ಯಾಪಾರ ಮುಂತಾದ ವೃತ್ತಿಗಳನ್ನೇ ಅವಲಂಬಿಸಿ, ಚಿಕ್ಕವರಾದ ತನ್ನ ಮಕ್ಕಳನ್ನೂ ಅದರಲ್ಲೇ ನಿಯೋಜಿಸಿ ಬಾಳ್ವೆಮಾಡಿಕೊಂಡಿದ್ದಳು. ಬಸವಪ್ಪನ ಕಾಲದಿಂದಲೂ, ಗೌರವಸ್ಥರೂ ಅನುಕೂಲಸ್ಥರೂ ಆಗಿದ್ದ ಆ ಮನೆತನದೊಂದಿಗೆ ಸಂಬಂಧಮಾಡಲು ಯಾರೂ ಹಿಂಜರಿಯುವಂತಿರಲಿಲ್ಲವಾದುದರಿಂದ ಭದ್ರಪ್ಪ ಚೌಡಪ್ಪ ಎಂಬೀ ಅಣ್ಣತಮ್ಮಂದಿರು ಪ್ರಾಯಪ್ರಬುದ್ಧರಾದ ಸಂದರ್ಭದಲ್ಲಿ ಅವರಿಗೆ ಸತ್ಕುಲಗಳಲ್ಲೇ ಅನುರೂಪ-ವಯಸ್ಕರಾದ ಕನ್ಯಾಮಣಿಯರು ದೊರೆತು ವಿವಾಹ ಮಹೋತ್ಸವಗಳೂ ನೆರವೇರಿದುವು ಬಸಮ್ಮನು ಮಕ್ಕಳು-ಸೊಸೆಯರಿಂದ ತುಂಬಿದ ಆ ಮನೆಯು ಯಜಮಾನಿತಿಯಾಗಿ, ಪತಿಮರಣದ ವ್ಯಸನವನ್ನು ಸ್ವಲ್ಪಸ್ವಲ್ಪವಾಗಿ ಮರೆಯುತ್ತಾ ಕಾಲಯಾಪನೆ ಮಾಡಿಕೊಂಡಿದ್ದಳು.

ಲೋಕದಲ್ಲಿ ದೊಡ್ಡದೊಡ್ಡ ಮನೆತನಗಳಾಗಲೀ, ರಾಜ್ಯಗಳಾಗಲೀ, ಸ್ಥಾಪನೆಯಾದ ಸಂದರ್ಭಗಳಲ್ಲಿ ಲೋಕಕ್ಕೆ ವಿಚಿತ್ರವೆನ್ನಿಸುವ,- ಅಮಾನುಷವೆಂದು ತೋರುವ ಕೆಲಕೆಲವು ಸಂಗತಿಗಳು ನಡೆದಂತೆ, ಪುರಾಣಗಳಲ್ಲಿ ಮಾತ್ರವಲ್ಲ-ಚರಿತ್ರೆಯಲ್ಲೂ ಉಲ್ಲೇಖಗಳು ಬಂದಿವೆ. ಇಕ್ಕೇರಿಸಂಸ್ಥಾನ (-ಕೆಳದಿ ಸಂಸ್ಥಾನ)ದ ಮೂಲಪುರುಷರಾದ ಇವರ ಚರಿತ್ರೆಗೆ ಸಂಬಂಧಪಟ್ಟಂತೆಯೂ ನಡೆದುದೆಂದು ಹೇಳುವ ಒಂದು ಅಮಾನುಷ ಸಂಗತಿಯ ಉಲ್ಲೇಖವು ದೊರೆಯುತ್ತದೆ. ಅದನ್ನು ಇಲ್ಲಿ ಕೊಡಲೆಳಸುತ್ತೇವೆ.

ಒಂದು ದಿನ ರಾತ್ರಿ ಚೌಡಪ್ಪನು ಮಲಗಿ ನಿದ್ರಿಸುತ್ತಿದ್ದಾಗ ಆತನ ಕನಸಿನಲ್ಲಿ ಒಬ್ಬ ಮುಪ್ಪಿನ ಜಂಗಮನು ಬಂದು - 'ಮಗೂ ಇಲ್ಲಿಗೆ ಸಮೀಪವಾಗಿರುವ ಶೀಗೇಹಳ್ಳಿಗೆ ಸೇರಿದ ಒಂದು ಕಾಡಿನಲ್ಲಿ ದಟ್ಟವಾದ ಒಂದು ಪೊದೆಯಿದೆ. ಅದರ ಮಧ್ಯದಲ್ಲಿ ರಾಮೇಶ್ವರನೆಂಬ ಒಂದು ಲಿಂಗವು ಉದ್ಭವಿಸಿದೆ. ನಿಮ್ಮ ಮನೆಯ ಕಪಿಲವರ್ಣದ ಗೋವು ಸ್ವಯಂಪ್ರೇರಿತವಾಗಿ ದಿನವೂ ಅಲ್ಲಿಗೆ ಹೋಗಿ, ಆ ಲಿಂಗವನ್ನು ಹಾಲಿನಿಂದ ಅಭಿಷೇಕಿಸಿಬರುತ್ತಿದೆ. ನೀನು ಆ ಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿ ಸೇವಿಸುತ್ತಾ

ಬಂದೆಯಾದರೆ ನಿನಗೆ ಮೇಲುಂಟಾಗುವುದು' ಎಂದು ಹೇಳಿದಂತೆ ಆಯಿತಂತೆ! ಒಡನೆ ಎಚ್ಚತ್ತ ಚೌಡಪ್ಪನು ಈ ಆಶ್ಚರ್ಯಕರ ವಾರ್ತೆಯನ್ನು ತನ್ನ ತಾಯಿಯೊಂದಿಗೂ ಅಣ್ಣನೊಂದಿಗೂ ಹೇಳಲಾಗಿ ಅವರು ಅತ್ಯಂತ ಸಮಾಧಾನಪಟ್ಟು ಪರಮೇಶ್ವರನ ದಯೆಯಿಂದ ಆ ಸ್ವಪ್ನವು ನಿಶ್ಚಯವಾಗಲೆಂದು ಹರಸಿದರು. ಮಾರನೆಯದಿನ ಅವರು, ಪಶುಪಾಲಕರಿಂದ ಆ ಕಪಿಲವರ್ಣದ ಗೋವು ಹೋಗುತ್ತಿದ್ದ ಸ್ಥಳವನ್ನು ಗೊತ್ತುಹಚ್ಚಿಸಿ ಅಲ್ಲಿಗೆ ಹೋಗಿ ನೋಡಲು, ಅಲ್ಲಿದ್ದ ರಾಮೇಶ್ವರಸ್ವಾಮಿಯ ಮಹಾಲಿಂಗವು ದೃಷ್ಟಿಗೋಚರವಾಗಿ ಅವರಿಗೆ ಪರಮಾನಂದವನ್ನುಂಟುಮಾಡಿತು. ಒಡನೆ ಭದ್ರಪ್ಪ ಚೌಡಪ್ಪರಿಬ್ಬರೂ ಜನಗಳ ಸಹಾಯದಿಂದ ಆ ಪೊದೆಯನ್ನು ಕತ್ತರಿಸಿ ಆ ಸ್ಥಳವನ್ನು ಶುಚಿಗೊಳಿಸಿ, ಅಲ್ಲಿ ಚಿಕ್ಕದಾದ ಒಂದು ಮಂಟಪವನ್ನು ನಿರ್ಮಿಸಿ, ಸ್ವಾಮಿಯ ಪೂಜೆಗೆ ಸಕಲ ಅನುಕೂಲತೆಗಳನ್ನೂ ಸಿದ್ಧಗೊಳಿಸಿ, ದಿನವೂ ಶ್ರದ್ಧಾಭಕ್ತಿಗಳಿಂದ ಪೂಜಿಸಿ ಸೇವಿಸುತ್ತಾ ಬಂದರು.

ಸಾಮಾನ್ಯ ರೈತರಾಗಿ ಜೀವಿಸಿದ್ದ ಇವರಿಗೆ ರಾಜತ್ವ ಪ್ರಾಪ್ತವಾಗಲು ಆವಶ್ಯಕವೆನ್ನಿಸುವ ಅಪರಿಮಿತ ಐಶ್ವರ್ಯವು ಲಭಿಸಿದ ವಿಷಯದಲ್ಲಿ ಹೇಳಲ್ಪಡುವ ವಿಚಾರವು ಇದಕ್ಕಿಂತಲೂ ಆಶ್ಚರ್ಯಕರವಾಗಿದೆ. ಚೌಡಪ್ಪನು ಒಂದಾನೊಂದು ದಿನ ತಮ್ಮ ಜಮೀನುಗಳ ಬೇಸಾಯ ಮುಂತಾದ ಕೆಲಸ ಕಾರ್ಯಗಳ ಮೇಲ್ವಿಚಾರಣೆಯನ್ನು ನೋಡಿಕೊಂಡು ಬರಲು ಹೋಗಿದ್ದು, ಅಲ್ಲಿ ಬಿಸಲತಾಪವು ವಿಶೇಷವಾಗಿದ್ದುದರಿಂದ ಆಯಾಸಪಟ್ಟು, ಅಲ್ಲೇ ಒಂದು ಮರದ ನೆಳಲಿನಲ್ಲಿ ಮಲಗಿಕೊಂಡನು. ಸ್ವಲ್ಪ ಹೊತ್ತಿನಲ್ಲೇ ಒಂದು ನಾಗರಹಾವು ಎಲ್ಲಿಂದಲೋ ಬಂದು ಅವನ ತಲೆಯಮೇಲೆ ಹೆಡೆಯನ್ನು ಬಿಚ್ಚಿಕೊಂಡು ಆಡತೊಡಗಿತಂತೆ! ಬಹಳ ಹೊತ್ತಾದರೂ ಮಗನು ಮನೆಗೆ ಬಾರದಿದ್ದುದರಿಂದ ವಿಚಾರಪಟ್ಟು ಮಗನನ್ನು ಹುಡುಕುತ್ತಾ ಗದ್ದೆಗಳ ಮಾರ್ಗವಾಗಿ ಬಂದ ಬಸಮ್ಮನು, ತನ್ನ ಮಗ ಚೌಡಪ್ಪನು ಮರದ ನೆಳಲಿನಲ್ಲಿ ಮಲಗಿದ್ದುದನ್ನೂ, ಅವನ ತಲೆಯಮೇಲೆ ಸರ್ಪವು ಹೆಡೆಯಾಡಿಸುತ್ತಾ ಇದ್ದುದನ್ನೂ ಕಂಡು ಗಾಬರಿಗೊಂಡಳಾದರೂ, ತಾನು ಸಪ್ಪಳುಮಾಡಿದರೆ ಎಲ್ಲಿ ಅದು ತನ್ನ ಮಗನನ್ನು ಕಚ್ಚಿಬಿಡುವುದೋ ಎಂಬ ಭಯದಿಂದ, ದೇವರು ಮಾಡಿಸಿದಂತಾಗಲೆಂದುಕೊಂಡು, ನಡುಗುತ್ತಾ ನಿಂತುಕೊಂಡಳು.

ಹಾವು ಹಾಗೆ ಸ್ವಲ್ಪ ಹೊತ್ತು ಆಡಿಬಿಟ್ಟು ಹೊರಟುಹೋಗಲು, ಬಸವ್ವನು ಒಡನೆ ತನ್ನ ಮಗನನ್ನು ಎಬ್ಬಿಸಿ ನಡೆದ ಸಂಗತಿಯನ್ನು ತಿಳಿಸಿ, ಅಲ್ಲೇ ಹೋಗುತ್ತಿದ್ದ ಆ ಹಾವನ್ನು ತೋರಿಸಿದಳು. ಆ ಹಾವು ಅವರಿಗೆ ಕಾಣು ವಂತೆಯೇ ಅಲ್ಲಲ್ಲಿ ಹೆಡೆಯಾಡಿಸುತ್ತಿದ್ದು ಸ್ವಲ್ಪ ದೂರಹೋಗಿ ಒಂದು ಸ್ಥ ಳದಲ್ಲಿ ಹೆಡೆಯನ್ನು ನೆಲಕ್ಕೆ ಬಡಿದು, ತರುವಾಯ ಕಣ್ಣಿಗೆ ಕಾಣಿಸದೆ ಎಲ್ಲೋ ಹೋಗಿಬಿಟ್ಟಿತು. ತಾಯಿಮಕ್ಕಳಿಬ್ಬರೂ ಆಶ್ಚರ್ಯಮಗ್ನರಾಗಿ ಆ ಸ್ಥಳವನ್ನು ಗುರ್ತುಮಾಡಿಕೊಂಡು ಮನೆಗೆ ಬಂದು, ತರುವಾಯ ಒಂ ದು ಒಳ್ಳೆಯ ಲಗ್ನದಲ್ಲಿ ಆಪ್ತರೊಂದಿಗೆ ಅಲ್ಲಿಗೆ ಹೋಗಿ ಆ ಸ್ಥಳದಲ್ಲಿ ಅಗೆ ಯಿಸಲು, ದೊಡ್ಡದೊಂದು ಕಡಾಯಿಯ ತುಂಬ ಬಂಗಾರದ ನಾಣ್ಯಗಳೂ, ಅದರಮೇಲೆ ನಾಗರಮುರಿಯೆಂಬೊಂದು ಹೆಸರಿನ ಕತ್ತಿಯೂ ಇದ್ದುದನ್ನು ಕಂಡು ಯೋಗ್ಯಬಲಿ ಮುಂತಾದುವನ್ನಿತ್ತು ಪೂಜಿಸಿ ಆ ದ್ರವ್ಯವನ್ನು ಪಡೆ ದುಕೊಂಡು ಮನೆಗೆ ಹಿಂದಿರುಗಿದರು. ತರುವಾಯ ಅವರು ತಮ್ಮ ಆಗಿನ ಸ್ಥಿತಿಗೆ ತಕ್ಕಂತಹ ಒಂದು ಮನೆಯನ್ನು ಕಟ್ಟಿಸಿಕೊಂಡು, ಕೆಲಕಾಲ ಸುಖ ವಾಗಿ ವಾಸಿಸಿದರು.

ನಮ್ಮ ಕಥಾನಾಯಕನ ವಂಶವು ಹೀಗೆ ಅಮಾನುಷವೆಂದು ತೋರ ಬಹುದಾದ ಸಂದರ್ಭಗಳಿಂದ ಪ್ರಾರಂಭಕ್ಕೆ ಪ್ರಸಿದ್ಧವಾಗಿ, ಮುಂದೆ ಹೇಗೆ ಬೆಳೆದು ಕಳೆಗೊಂಡಿತೆಂದು ನೋಡೋಣ.—

---

## ಅಧ್ಯಾಯ ೨ "ವಂಶಾಭಿವೃದ್ಧಿ"

ದೈವಯೋಗದಿಂದ ಲಭಿಸಿದ ಅಪಾರನಿಧಿಯ ಪ್ರಭಾವದಿಂದ ಭದ್ರ ಪ್ಪ ಚೌಡಪ್ಪನೆಂಬ ಆ ಇಬ್ಬರು ಅಣ್ಣತಮ್ಮಂದಿರೂ, ಮಹಾ ತೇಜಸ್ವಿಗ ಳಾಗಿ ತಮ್ಮ ಪಿತ್ರಾರ್ಜಿತವಾದ ಹೊಲ ಮನೆಗಳನ್ನು ರೂಢಿಸಿಕೊಂಡುದ ಲ್ಲದೆ, ಸಮೀಪದ ಹಲ ಕೆಲವು ಗ್ರಾಮಗಳನ್ನೂ ಒಂದೊಂದನ್ನಾಗಿ ಸ್ವಾಧೀ ನಕ್ಕೆ ತೆಗೆದುಕೊಂಡು ಜನಗಳಲ್ಲಿ ಮುಖಂಡರಾಗುತ್ತಾ ಬಂದರು. ಕೆಳದಿಯ

ಶ್ರೀ ರಾಮೇಶ್ವರಸ್ವಾಮಿಗೆ ಒಂದು ದೇವಸ್ಥಾನವನ್ನು ಕಟ್ಟಿಸಿ, ವಿಧ್ಯುಕ್ತವಾದ ಪೂಜಾಪುರಸ್ಕಾರಗಳಿಗೆ ತಕ್ಕ ಏರ್ಪಾಡು ಮಾಡಿದರು. ಈ ಸೋದರರು ಹೀಗೆ ದಿನ ದಿನಕ್ಕೆ ಪ್ರಬಲಿಸುತ್ತಿದ್ದ ವಿಚಾರವು, ಆಗ ವಿಜಯನಗರ ಸಿಂಹಾಸನಾಧೀಶ್ವರನಾಗಿದ್ದ ಶ್ರೀ ಕೃಷ್ಣದೇವರಾಯನ ಗಮನಕ್ಕೆ ಬರಲು, ರಾಜನೀತಿವಿಚಕ್ಷಣನಾದ ಆ ರಾಜವರೇಣ್ಯನು, ರಾಯಸವನ್ನು ಬರೆಯಿಸಿ, ಆ ಅಣ್ಣತಮ್ಮಂದಿರನ್ನು ತನ್ನ ಸಮ್ಮುಖಕ್ಕೆ ಕರೆಯಿಸಿಕೊಂಡು ಅವರಿಗೆ ದೇವತಾನುಗ್ರಹವಾದ ಪರಿಯನ್ನೂ, ನಿಧಿಯು ದೊರೆತ ವೃತ್ತಾಂತವನ್ನೂ ಕೇಳಿ ಸಂತೋಷಪಟ್ಟು, ತೇಜಸ್ವಿಗಳಾದ ಅವರೊಂದಿಗೆ ಮಿತ್ರತ್ವವನ್ನು ಬೆಳೆಯಿಸಿ ತನ್ಮೂಲಕ ರಾಜಕಾರ್ಯಕ್ಕಾಗಿ ಅವರನ್ನು ಉಪಯೋಗಿಸಿಕೊಳ್ಳಬೇಕೆಂದು ಯೋಚಿಸಿದನು. ಮತ್ತು ಆ ಸೋದರರನ್ನು ಉಚಿತ ವಚನಗಳಿಂದ ಆದರಿಸಿ, ಛತ್ರ, ಚಾಮರ, ಪಲ್ಲಕ್ಕಿ, ಬಗೆ ಬಗೆಯ ವಸ್ತ್ರಾಭರಣಗಳ ಉಡುಗೊರೆ ಮುಂತಾದುವನ್ನಿತ್ತು ಗೌರವಿಸಿ ಕೆಲದಿನಗಳವರೆಗೆ ತನ್ನ ರಾಜಧಾನಿಯಲ್ಲೇ ಇರಿಸಿಕೊಂಡಿದ್ದನು. ಅವರು ಅಲ್ಲಿದ್ದ ಸಂದರ್ಭದಲ್ಲೇ ಚಕ್ರವರ್ತಿಗೆ ವಿರೋಧಿಗಳಾದ ಕೆಲವಂದಿ ತುಂಟರನ್ನು ಜಯಿಸಿ ಪಾದಾಕ್ರಾಂತರನ್ನಾಗಿಸುವ ಕಾರ್ಯವೂ ಈ ಸೋದರರಿಂದ ನಡೆದುದು ಗುಣಗ್ರಹಣಶೀಲನಾದ ಕೃಷ್ಣದೇವರಾಯನಿಗೆ ಅಪರಿಮಿತಾನಂದವನ್ನುಂಟುಮಾಡಿತು. ಆಗಲಾ ರಾಜಶೇಖರನು, ಈ ಅಣ್ಣತಮ್ಮಂದಿರನ್ನು ಗೌರವದಿಂದ ರಾಜಸಭೆಗೆ ಕರೆಯಿಸಿಕೊಂಡು, ಚಂದ್ರಗುತ್ತಿ ಕೆಳದಿ ಇಕ್ಕೇರಿ ಮುಂತಾದ ಎಂಟು ಮಾಗಣಿಗಳನ್ನು ವಂಶಪಾರಂಪರ್ಯವಾಗಿ ಅನುಭವಿಸಲು ಅವರಿಗೆ ಮಾನ್ಯವಾಗಿ ಕೊಟ್ಟು, ಆನೆ ಕುದುರೆ ಚಿನ್ನದಪಾಲಕಿ ಬಂಗಾರದ ಚೌರಿ ಮುಂತಾದ ವಿಶೇಷ ಬಹುಮಾನಗಳನ್ನು 'ಕೆಳದಿ ಮೂಲಸ್ಥಾನದ ಮನ್ನೆಯ ಚೌಡಪ್ಪನಾಯಕ'ನೆಂಬ ಪ್ರಖ್ಯಾತವಾದ ಬಿರುದನ್ನೂ ದಯಪಾಲಿಸಿ ಬೀಳ್ಕೊಟ್ಟನು. ಹೀಗೆ ಚಕ್ರವರ್ತಿಯಿಂದ ಗೌರವಿಸಲ್ಪಟ್ಟು ಗ್ರಾಮವನ್ನು ಸೇರಿದ ತರುವಾಯ ಚೌಡಪ್ಪನಿಗೆ (ಕ್ರಿ. ಶ. ೧೪೯೯-೧೫೦೦) ಶಾ. ಶ. ೧೪೨೨ನೆಯ ಸಿದ್ಧಾರ್ಥಿ ಸಂ. ಮಾಘ. ಶು. ೩ರಲ್ಲಿ ಕೆಳದಿಯಲ್ಲಿ ಪಟ್ಟಾಭಿಷೇಕ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ದೊರೆಯಾದ ಚೌಡಪ್ಪನು ತನ್ನ ಅಭಿವೃದ್ಧಿಗೆಲ್ಲ ಮೂಲಕಾರಣವಾದ ಶ್ರೀ ರಾಮ ಲಿಂಗೇ

ಶ್ವರನನ್ನು ಮರೆಯದೆ, ಆ ದೇವಸ್ಥಾನವನ್ನು ವಿಸ್ತಾರವಾಗಿ ಕಟ್ಟಿಸಿ, ನಿತ್ಯೋತ್ಸವ, ಮಾಸೋತ್ಸವ - ರಥೋತ್ಸವಾದಿಗಳಿಗೆ ತಕ್ಕ ಏರ್ಪಾಡುಗಳನ್ನು ಮಾಡಿ, ತನ್ನ ಎಂಟು ಮಾಗಣಿಗಳಲ್ಲಿ ಪ್ರಜಾಸೌಖ್ಯಕ್ಕೆ ಕೊರತೆಯುಂಟಾಗದಂತೆ ಸಕಲ ವಿಧದಿಂದಲೂ ಜಾಗರೂಕನಾಗಿದ್ದು ಸತ್ಪ್ರಭುವೆನ್ನಿಸಿಕೊಂಡನು.

ಈ ಇಬ್ಬರು ಸೋದರರಲ್ಲಿ ಚೌಡಪ್ಪನಿಗೆ ಮಾತ್ರವೇ ಸದಾಶಿವನಾಯಕನೆಂಬ ಒಬ್ಬ ಪುತ್ರನುದಯಿಸಿದನು. ಚೌಡಪ್ಪನು ಮಗನಿಗೆ ತಕ್ಕ ವಿದ್ಯಾಬುದ್ಧಿಗಳನ್ನು ಕಲಿಸಿ, ಅವನು ಪ್ರಬುದ್ಧಾವಸ್ಥೆಗೆ ಬರಲು ವೀರಮ್ಮಾಜಿ-ಭದ್ರಮ್ಮಾಜಿ ಎಂಬಿಬ್ಬರು ಕನ್ಯೆಯರನ್ನು ಆತನಿಗೆ ಮದುವೆಮಾಡಿಸಿದನು. ಮುಂದೆ ಕೆಲವು ದಿನಗಳಮೇಲೆ, ತನ್ನ ಆಧಿಪತ್ಯಕ್ಕೆ ಸೇರಿದ ಇಕ್ಕೇರಿ ಗ್ರಾಮದ ಬಳಿ ಸಂಚಾರ ಹೋಗುತ್ತಿದ್ದಾಗ ಅಲ್ಲಿ ಒಂದು ಮೊಲವು ಬೇಟೆನಾಯಿಯನ್ನು ಬೆನ್ನಟ್ಟಿ ಹೋದ ವಿಚಿತ್ರ ಪರಿಸ್ಥಿತಿಯನ್ನು ಕಂಡು ಚೌಡಪ್ಪನು ತನ್ನ ಜೊತೆಯಲ್ಲಿದ್ದ ತನ್ನ ಮಗ ಸದಾಶಿವನಿಗೆ,- ಹೀಗೆ ದುರ್ಬಲವಾದ ಒಂದು ಮೃಗವು ಪ್ರಬಲವಾದ ಮೃಗವನ್ನು ಎದುರಿಸುವುದು ಆ ಸ್ಥಳವು ವೀರಭೂಮಿಯೆಂಬುದನ್ನೂ ಅಲ್ಲಿ ವಾಸಿಸುವ ಜನರು, ಪರಾಕ್ರಮಶಾಲಿಗಳೂ ಧೈರ್ಯ ಸಾಹಸಸಂಪನ್ನರೂ ಆಗುವರೆಂಬುದನ್ನೂ ಸೂಚಿಸುವುದೆಂದು ಹೇಳಿ, ಮುಂದೊಂದು ಶುಭಲಗ್ನದಲ್ಲಿ ಆ ಸ್ಥಳದಲ್ಲಿ ರಾಜಧಾನಿಯ ನಿರ್ಮಾಣಕ್ಕೆ ಪ್ರಾರಂಭಿಸಿ, ದಿವ್ಯವಾದೊಂದು ರಾಜನಗರಿಯನ್ನು ಕಟ್ಟಿಸಿದನು. ಹೀಗೆ ಚೌಡಪ್ಪನಾಯಕನು ತನ್ನ ಆಳ್ವಿಕೆಯ ಹನ್ನೆರಡನೆಯ ವರ್ಷವಾದ ಪ್ರಜೋತ್ಪತ್ತಿ ಸಂ. ಮಾಘ ಶು. ೫ ಯಲ್ಲಿ (ಕ್ರಿ. ಶ. ೧೫೧೨) ಸಕುಟುಂಬ ಪರಿವಾರನಾಗಿ ಇಕ್ಕೇರಿ ರಾಜಧಾನಿಯ ನೂತನ ಅರಮನೆಯನ್ನು ಪ್ರವೇಶಿಸಿ ಮಹೋತ್ಸವಗಳನ್ನು ನಡೆಯಿಸಿದನು. ನೂತನವಾದೊಂದು ರಾಜ್ಯವನ್ನೇ ಪ್ರತಿಷ್ಠಿಸಿದ ಈ ಧೀರೋದಾತ್ತನಾಯಕನು ತನ್ನಾ ನೂತನ ರಾಜಧಾನಿಯಲ್ಲಿ ಮುಂದೆ ಬಹು ಸ್ವಲ್ಪ ದಿನಗಳು ಮಾತ್ರ ಆಳಿಕೊಂಡಿದ್ದು ೧೫೧೩ ರಲ್ಲಿ ದೈವಾಧೀನನಾದನು. ಈತನ ತರುವಾಯ ಮಗನಾದ ಸದಾಶಿವನಾಯಕನಿಗೆ ಶ್ರೀಮುಖ ಸಂ. ಶ್ರಾವಣ ಶು. ೩ ರಲ್ಲಿ ಇಕ್ಕೇರಿ ಅರಮನೆಯಲ್ಲಿ ಪಟ್ಟಾಭಿಷೇಕವಾಯಿತು. ಈತನೂ ವಿಜ

ಯನಗರದ ಸಾರ್ವಭೌಮ ಕೃಷ್ಣದೇವರಾಯನಿಗೆ ಅಚ್ಚುಮೆಚ್ಚಾಗಿದ್ದು ಆತನ ಅಪ್ಪಣೆಯನ್ನನುಸರಿಸಿ ಕಲ್ಯಾಣದುರ್ಗ ಕಲುಬುರಿಗೆ ಮುಂತಾದ, ಅನೇಕ ಸ್ಥಳಗಳನ್ನು ಆತನ ಆಧಿಪತ್ಯಕ್ಕೆ ಒಳಪಡಿಸಿ, ಆತನಿಂದ ಇಮ್ಮಡಿ ಸದಾಶಿವ, ಕೋಟೆ ಕೋಲಾಹಲ ಮುಂತಾದ ಬಿರುದುಗಳನ್ನು ಪಡೆದು ಪ್ರಸಿದ್ಧನಾದನು.

ಈತನಿಗೆ ದೊಡ್ಡ ಸಂಕಣ್ಣನಾಯಕ, ಚಿಕ್ಕ ಸಂಕಣ್ಣನಾಯಕ ಎಂಬಿಬ್ಬರು ಪರಾಕ್ರಮಿಗಳಾದ ಮಕ್ಕಳಾದರು. ಇವರ ಕಾಲದಲ್ಲಿ ವಿಜಯನಗರದಲ್ಲಿ ರಾಮರಾಜನು ಆಧಿಪತ್ಯ ಮಾಡುತ್ತಿದ್ದನು. ಇಕ್ಕೇರಿಯ ನಾಯಕರು ಒಡೆಯರ ಕಾಲದಲ್ಲಿ ಹೇಗೋ ಈಗಲೂ ಹಾಗೆಯೇ ವಿಜಯನಗರ ಸಾಮ್ರಾಜ್ಯಕ್ಕೆ ವಿಧೇಯರೂ ಸ್ನೇಹಿತರೂ ಆಗಿದ್ದು, ದುಷ್ಟನಿಗ್ರಹದಲ್ಲಿ ಸದಾ ಅವರಿಗೆ ಬೆಂಬಲರಾಗಿದ್ದು ಅವರಿಂದ ಮನ್ನಣೆಪಡೆಯುತ್ತಿದ್ದರು. ದೊಡ್ಡ ಸಂಕಣ್ಣನ ಮಕ್ಕಳಾದ ರಾಮರಾಜ ಮತ್ತು ವೆಂಕಟಪ್ಪನಾಯಕ ಎಂಬಿಬ್ಬರು ಪುತ್ರರು ಜನಿಸಿದಾಗ ರಾಮರಾಜನು ಅವರ ಪೋಷಣೆಗೆಂಬ ಗೌರವಕ್ಕಾಗಿ ಮಾಸೂರು ಮಾಲೂರು ಹೊಳೆಹೊನ್ನೂರು ಸೀಮೆಗಳನ್ನು ಕೊಟ್ಟನು. ದೊಡ್ಡ ಸಂಕಣ್ಣನು ಚಕ್ರವರ್ತಿಯ ಆಜ್ಞಾನುಸಾರ ಗೋವೆಯ ಕೋಟೆಯನ್ನು ಹಿಡಿದುದಕ್ಕಾಗಿ ಮಾಳೇನಹಳ್ಳಿ ಎಂಬೊಂದು ಹೋಬಳಿಯನ್ನು ಮಾನ್ಯವಾಗಿ ಕೊಟ್ಟು ಭುಜಕೀರ್ತಿ ಎಂಬ ಬಿರುದನ್ನಿತ್ತು ಗೌರವಿಸಿದನು. ಕೆಲವು ದಿವಸಗಳ ತರುವಾಯ ದೊಡ್ಡ ಸಂಕಣ್ಣನು, ರಾಜ್ಯಭಾರವನ್ನು ತನ್ನ ತಮ್ಮನಾದ ಚಿಕ್ಕ ಸಂಕಣ್ಣನಿಗೆ ವಹಿಸಿ ತಾನು ಜಂಗಮವೇಷಧಾರಣೆ ಮಾಡಿ, ತೀರ್ಥಕ್ಷೇತ್ರಗಳ ಯಾತ್ರೆಗಾಗಿ ಪ್ರಯಾಣಮಾಡಿದನು. ದಕ್ಷಿಣದೇಶದ ಶಿವಗಂಗಾ, ಚಿದಂಬರ, ಕುಂಭಕೋಣ, ರಾಮೇಶ್ವರಾದಿಗಳನ್ನು ನೋಡಿಕೊಂಡು, ಉತ್ತರದೇಶಕ್ಕೂ ಹೋಗಿ ಬರಬೇಕೆಂದು ಇಚ್ಛಿಸಿ ಯುಕ್ತ ಪರಿವಾರದೊಂದಿಗೆ ಪ್ರಯಾಣಮಾಡಿದನು. ಡಿಲ್ಲಿಯಲ್ಲಿ ಅಂಕುಶಖಾನನೆಂಬೊಬ್ಬ ಶೂರನೊಂದಿಗೆ ಚಕ್ರವರ್ತಿಯ ಸಮ್ಮುಖದಲ್ಲಿ ಮಲ್ಲಯುದ್ಧವು ಒದಗಲು, ಸಂಕಣ್ಣನು, ತನ್ನ ಕರ ಚಮತ್ಕೃತಿಯಿಂದ ಆಯುಧ ಪ್ರಯೋಗಮಾಡಿ, ತನ್ನ ಎದುರಾಳಿಯನ್ನು ಕೊಂದು ಪ್ರಭುವನ್ನು ಮೆಚ್ಚಿಸಿ, ಆತನಿಂದ ಉಂಬಳಿಗಳನ್ನು ಪಡೆದು ಆಗ್ರಾ, ಪ್ರಯಾಗ ಮುಂ

ತಾದ ಸ್ಥಳಗಳಲ್ಲಿ ಜಂಗಮರ ಉಪಯೋಗಕ್ಕಾಗಿ ಮಠಗಳನ್ನೂ ಕಾಶೀ ಕ್ಷೇತ್ರದಲ್ಲಿ ದಶಾಶ್ವಮೇಧ ಘಾಟಿನ ಸಮೀಪದಲ್ಲಿ ಜಂಗಮ ಘಾಟಿಯನ್ನೂ ಕಟ್ಟಿಸಿ, ಹರಿದ್ವಾರ ಕಾಶ್ಮೀರ ಮುಂತಾದ ದೂರಸ್ಥಳಗಳನ್ನೂ ಸಂದರ್ಶಿಸಿ ತರುವಾಯ ಸ್ವದೇಶಕ್ಕೆ ಹಿಂದಿರುಗಿ ಕಾಳಯುಕ್ತಿ ಸಂ, ಆಶ್ವಯುಜ ಶು. ೪ ರಲ್ಲಿ (೧೫೪೬–೧೫೭೦) ಸ್ವರ್ಗಸ್ಥನಾದನು.

ಈತನ ತರುವಾಯ ಚಿಕ್ಕ ಸಂಕಣ್ಣನಿಗೆ ಪಟ್ಟವಾಯಿತು. ಈತನೂ ತಮ್ಮಣ್ಣನಂತೆಯೇ ಪರಾಕ್ರಮಿಯಾಗಿದ್ದು ಹನ್ನೆರಡು ವರ್ಷಕಾಲ ರಾಜ್ಯ ಭಾರಮಾಡಿದನು. ಇಕ್ಕೇರಿಯಲ್ಲಿ ಈತನು ಆಳುತ್ತಲಿದ್ದ ಕಾಲದಲ್ಲೇ ಅತ್ತ ಸುಪ್ರಸಿದ್ಧ ವಿಜಯನಗರದ ರಾಜೇಶ್ವರರಿಗೆ ಬಹಮನೀ ಅರಸರೊಂದಿಗೆ ತಾಳೀಕೋಟಿ ಎಂಬ ಸ್ಥಳದಲ್ಲಿ ಭಯಂಕರ ಸಂಗ್ರಾಮವು ಪ್ರಾಪ್ತವಾಗಿ, ಆ ಪುರಾತನ ರಾಜ್ಯವು ನಾಮಾವಶೇಷವಾದುದು (೧೫೬೫). ಅಲ್ಲಿಯ ರಾಜ್ಯ ಧ್ವಂಸವಾದ ತರುವಾಯ, ರಾಮರಾಜನ ಅರಮನೆಯಲ್ಲಿ ಕೋಶಾಧ್ಯಕ್ಷನಾಗಿದ್ದ ಚಿನ್ನ ಭಂಡಾರದ ನಾರ್ಣಪ್ಪಯ್ಯನೆಂಬಾತನು, ಅಲ್ಲಿಂದ ಬಂದು ಚಿಕ್ಕ ಸಂಕಣ್ಣನಾಯಕನ ಆಶ್ರಯದಲ್ಲಿ ನಿಂತನು. ನಾಯಕನೂ ಆತನ ವಿದ್ಯಾಬುದ್ಧಿಗಳನ್ನೂ, ವ್ಯವಹಾರ ಚಾತುರ್ಯವನ್ನೂ, ಘನತೆಗಾಂಭೀರ್ಯಗಳನ್ನೂ ಕಂಡು ಸಂತೋಷಿಸಿ, ಆತನಿಗೆ ತನ್ನ ಕೋಶಾಧ್ಯಕ್ಷತೆ ಅಥವ ಮಂತ್ರಿತ್ವ ಅಧಿಕಾರವನ್ನು ಕೊಟ್ಟು ಆತನ ಸಹಾಯದಿಂದ ರಾಜ್ಯಭಾರವನ್ನು ನಡೆಯಿಸುತ್ತಾ ಸುಖವಾಗಿದ್ದನು.

ದೊಡ್ಡ ಸಂಕಣ್ಣನಾಯಕನು ವಿರಕ್ತನಾಗಿ ಯಾತ್ರೆ ಹೊರಟಾಗ್ಗೆ ಅವನ ಮಕ್ಕಳು ಇನ್ನೂ ಚಿಕ್ಕ ವಯಸ್ಕರೂ ಅನನುಭವಿಗಳೂ ಆಗಿದ್ದುದರಿಂದ ತಮ್ಮನಾದ ಚಿಕ್ಕ ಸಂಕಣ್ಣನೇ ರಾಜ್ಯಾಧಿಪತ್ಯವನ್ನು ವಹಿಸಿಕೊಂಡಿದ್ದನಲ್ಲವೆ! ನ್ಯಾಯವಾದ ಹಕ್ಕುದಾರರಾದ ತಮಗಲ್ಲದೆ ರಾಜ್ಯವು ಚಿಕ್ಕಪ್ಪನಿಗೆ ಲಭ್ಯವಾದ ವಿಷಯದಲ್ಲಿ ಈಗ ಪ್ರಬುದ್ಧರಾಗಿದ್ದ ಆ ಪುತ್ರರು ಆತನ ಮೇಲೆ ಮತ್ಸರಿಸತೊಡಗಿದರು. ಹೀಗಾಗಿ ಆತನು ೧೨ ವರ್ಷಕಾಲ ರಾಜ್ಯಭಾರವಾಡಿದನೆಂಬ ವೇಳೆಗೆ ದೊಡ್ಡ ಸಂಕಣ್ಣನ ಹಿರಿಯಮಗನಾದ ರಾಮರಾಜನಾಯಕನೆಂಬಾತನು ಅವನನ್ನು ಪ್ರಮೋದೂತ ಸಂ. ಕಾರ್ತೀಕ ಶು. ೪

(೧೫೭೧) ರಲ್ಲಿ ಕೊಲೆಮಾಡಿಸಿ ತಾನು ಇಕ್ಕೇರಿ ಸಂಸ್ಥಾನದ ಸಿಂಹಾಸನ ವನ್ನೇರಿದನು.

ಜ್ಞಾತಿಮತ್ಸರದಿಂದ ತನ್ನ ಚಿಕ್ಕಪ್ಪನನ್ನು ಕೊಲೆಮಾಡಿ ರಾಜ್ಯವಾಳ ತೊಡಗಿದ ಆ ದುರುಳನ ರಾಜ್ಯಭಾರದಲ್ಲಿ ಎಂತಹ ಮಹತ್ಕಾರ್ಯವು ನಡೆ ದಿದ್ದೀತು? ಆ ನೀಚನೂ ಹೇಗೋ ಹನ್ನೆರಡು ವರ್ಷಕಾಲ ಸಿಂಹಾಸನಾ ರೂಢನಾಗಿದ್ದು ೧೫೮೩ನೆಯ ಸಂವತ್ಸರದಲ್ಲಿ ಮೃತನಾದನು. ಈತನ ತರು ವಾಯ ಇವನ ತಮ್ಮ ವೆಂಕಟಪ್ಪನಾಯಕನಿಗೆ ಪಟ್ಟವಾಯಿತು. ಈತನ ಕಾಲದಲ್ಲಿ ಇಕ್ಕೇರಿ ಸಂಸ್ಥಾನವು ಬಹುಮಟ್ಟಿಗೆ ವಿಸ್ತರಿಸಿತು. ಪರಾಕ್ರಮಿ ಯೂ ನ್ಯಾಯಪಕ್ಷಪಾತಿಯೂ ಆದ ಈ ದೊರೆಯು ಮಂಡಗದ್ದೆ, ಎಡೆಹಳ್ಳಿ, ಹಾರನಹಳ್ಳಿ, ಹೊನ್ನೂರು ಮುಂತಾದ ಹಲವು ಸ್ಥಳಗಳನ್ನು ಜಯಿಸಿ, ಆಯಾಸ್ಥಳಗಳಲ್ಲಿ ಬಲವಾದ ಕೋಟೆಕೊತ್ತಲುಗಳನ್ನು ಕಟ್ಟಿಸಿ, ತನ್ನ ಸೈನ್ಯಗಳನ್ನಿಟ್ಟು, ಪ್ರಜೆಗಳ ಧನಮಾನ ಪ್ರಾಣರಕ್ಷಣೆಗಳ ಬಗ್ಗೆ ತಕ್ಕ ಏ ರ್ಪಾಟುಮಾಡಿದನು. ಈಗಿನ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿರುವ ಕಾರ್ಕಳ, ಮೂಲ್ಕಿ, ಕೊಡೆಯಾಳ, ಮೂಡಬಿದರೆ, ಉಳ್ಳಾಲ, ಮಂಜೇಶ್ವರ, ಕ್ಯಾಸರ ಗೋಡು ಮುಂತಾದ ಅನೇಕಾನೇಕ ಸ್ಥಳಗಳನ್ನು ಜಯಿಸಿ, ಅಲ್ಲೆಲ್ಲಾ ಬಲ ವಾದ ಕೋಟೆಗಳನ್ನು ಕಟ್ಟಿಸಿ, ಶೂರರಾದ ಸೈನಿಕರನ್ನಿಟ್ಟು ಸುರಕ್ಷಿತಗೊಳಿ ಸಿದನು. ಕ್ರಿ. ಶ. ೧೬೦೦ರಲ್ಲಿ ಕವಲೆಯ ದುರ್ಗವೆಂಬ ಸ್ಥಳವನ್ನು ಹಿಡಿದು, ಅಲ್ಲೊಂದು ದುರ್ಗವನ್ನೂ ಅದರೊಳಗೆ ಒಂದು ಭವ್ಯವಾದ ಅರಮನೆಯ ನ್ನೂ ಹೊರಗಡೆ ಕಲ್ಯಾಣಮಹಲೆಂಬ ಒಂದು ದೊಡ್ಡ ಅರಮನೆಯನ್ನೂ ಅಗ್ರಹಾರವನ್ನೂ ಕಟ್ಟಿಸಿದನು. ಹೀಗೆ ಕೆಲಕಾಲ ರಾಜ್ಯಭಾರಮಾಡಿದ ಮೇಲೆ ದೊರೆಗೆ ವೈರಾಗ್ಯವುಂಟಾಗಲು, ರಾಜ್ಯವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸದೆ, ಸದಾ ಪುರಾಣ ಪುಣ್ಯಕಥಾಶ್ರವಣ ಮುಂತಾದುವುಗಳಲ್ಲಿ ಕಾಲ ಯಾಪನೆಮಾಡತೊಡಗಿದನು. ವಿದ್ವಾಂಸರಿಗೂ ಕವಿಗಳಿಗೂ ರಾಜಾಶ್ರಯ ವು ದೊರೆಯತೊಡಗಿತು. ಈತನ ಕಾಲದಲ್ಲಿ ಅನೇಕ ಛತ್ರ ಸಾಲುಮರ ತಟಾಕಾದಿಗಳ ನಿರ್ಮಾಣವೂ, ಶಿವಗೀತೆ, ಶಿವಾಷ್ಟಪದಿ ಎಂಬ ಧಾರ್ಮಿಕ ಕವಿತೆಗಳ ರಚನೆಯೂ, ಮಾನಪ್ರಿಯವೆಂಬ ಅಶ್ವಶಾಸ್ತ್ರ ರಚನೆಯೂ ಈ ರಾಜನ ಪ್ರೋತ್ಸಾಹದಿಂದ ನಡೆದುವು. ಧಾರ್ಮಿಕನಾದ ಈತನ ಆಳ್ವಿಕೆ

ಯಲ್ಲಿ ಶೃಂಗೇರೀ ಮಠ, ಬಾಳೇಹಳ್ಳಿ ಮಠ, ಅಲ್ಲದೆ ಅನೇಕ ಜಂಗಮ ಮ ಠಗಳು ಮುಂತಾದುವುಗಳಿಗೂ ವಿಶೇಷ ಪ್ರೋತ್ಸಾಹ ದೊರೆತು, ಹಲವು ಧರ್ಮಸಂಸ್ಥೆಗಳು ಪುನರುಜ್ಜೀವಿತವಾದುವು. ಹೀಗೆ ಬಹು ಖ್ಯಾತಿವಂತ ನಾಗಿ ನಾಲ್ವತ್ತೇಳು ವರ್ಷಕಾಲ ರಾಜ್ಯಭಾರ ಮಾಡಿ, ಹಿರೀ ವೆಂಕಟಪ್ಪ ನಾಯಕನು ಕ್ರಿ. ಶ. ೧೬೩೦ನೆಯ ಸಂ|ದಲ್ಲಿ ಕೀರ್ತಿಶೇಷನಾದನು. ಈತನ ಆಳ್ವಿಕೆಯಲ್ಲಿ ಇಕ್ಕೇರಿ ರಾಜ್ಯದ ಅನೇಕ ಭಾಗಗಳು ಪಶ್ಚಿಮ ಸಮುದ್ರ ತೀರದವರೆಗೂ ವ್ಯಾಪಿಸಿದ್ದುವು.

ಹಿರೀ ವೆಂಕಟಪ್ಪನಾಯಕನು ಕಾಲವಾದಮೇಲೆ ಇಕ್ಕೇರಿಯಲ್ಲಿ ಆತ ನಮಗ ಭದ್ರಪ್ಪನಾಯಕನ ಎರಡನೆಯ ಮಗ ವೀರ ಭದ್ರನಾಯಕನಿಗೆ ಕ್ರಿ ಶ. ೧೬೩೦ನೆಯ ಸಂ|ದಲ್ಲಿ ಪಟ್ಟಾಭಿಷೇಕವಾಯಿತು. ಈತನೂ ತನ್ನ ತಾತನಂತೆಯೇ ಪ್ರಜಾರಂಜಕನಾಗಿ ಎಂಟು ವರ್ಷಕಾಲ ಇಕ್ಕೇರೀ ರಾಜ ಧಾನಿಯಲ್ಲೇ ಆಧಿಪತ್ಯಮಾಡಿಕೊಂಡಿದ್ದು, ತರುವಾಯ ಕೆಲಕಾಲ ತೀರ್ಥ ರಾಜಪುರ (ತೀರ್ಥಹಳ್ಳಿ)ದಲ್ಲಿ ವಾಸವಾಗಿದ್ದನು ಆ ಸ್ಥಳದ ಪ್ರಕೃತಿ ಸೌಂದರ್ಯಕ್ಕೆ ಮೆಚ್ಚಿ ಬಹುದಿನಗಳವರೆಗೆ ರಾಜಧಾನಿಯನ್ನು ಬಿಟ್ಟು ಅಲ್ಲೇ ನಿಂತುಬಿಟ್ಟುದರಿಂದ ಅತ್ತ ಇಕ್ಕೇರಿಯಲ್ಲಿದ್ದ ಕೆಲವುಂದಿ ಅಧಿಕಾ ರಿಗಳು ರಾಜದ್ರೋಹವನ್ನು ಚಿಂತಿಸಿ, ಸೆರೆಮನೆಯಲ್ಲಿದ್ದ ಕೂಲಿಪಾತಕಿ ರಾ ಮರಾಜನ ಮಗ ವೀರ ಒಡೆಯನನ್ನು ಸಿಂಹಾಸನದಮೇಲೆ ಕೂರಿಸಬೇಕೆಂ ದು ಪಿತೂರಿ ನಡೆಸಿದರು ಈ ಸಂಗತಿಯನ್ನು ತಿಳಿದ ವೀರ ಭದ್ರನಾಯಕ ನು ಅವರಿಗೆ ಅನುಕೂಲರಾಗಿದ್ದವರನ್ನು ಬೇರೆ ಬೇರೆ ಸ್ಥಳ ಕಾಲಗಳಲ್ಲಿ ಜಯಿಸಿ, ಸೋದೆ, ಬಿಳಿಗಿ ಎಂಬೆರಡು ಸೀಮೆಗಳನ್ನು ಸ್ವಾಧೀನಪಡಿಸಿಕೊಂ ಡನು. ಆ ಸ್ಥಳಗಳ ಪಾಳೆಯಗಾರರು ವಿಜಾಪುರದ ಅರಸನ (ನವಾಬನ) ಬಳಿಗೆ ಹೋಗಿ, ಇಕ್ಕೇರಿ ಪ್ರಭುತ್ವದವರಮೇಲೆ ಹಲವು ಚಾಡಿಕ್ಷುದ್ರಗಳ ನ್ನು ಹೇಳಿ, ತಮ್ಮ ಶತ್ರುವನ್ನು ಶಿಕ್ಷಿಸಿ ಕಾಪಾಡಬೇಕೆಂದು ಬೇಡಿದರು. ನವಾಬನು ಇಷ್ಟುಮಾತ್ರ ಸಂದು ದೊರೆತುದೇ ಸಾಕೆಂದು ಇಕ್ಕೇರೀ ರಾ ಜ್ಯದ ಮೇಲೆ ಯುದ್ಧಕ್ಕೆ ಹೊರಡಲು ಸಿದ್ಧನಾದನು.

ಅಷ್ಟರಲ್ಲಿ ವೀರ ಭದ್ರನಾಯಕನು ಈ ವೃತ್ತಾಂತವನ್ನು ತಿಳಿದು ಪ್ರ ಬಲ ಶತ್ರುವನ್ನು ಉಪಾಯದಿಂದ ಜಯಿಸಬೇಕೆಂದುಕೊಂಡು, ರಾಯಭಾರಿ

ಯನ್ನು ಕಳುಹಿಸಿ, ತಾನು ಆ ಸೀಮೆಗಳನ್ನು ಜಯಿಸಬೇಕಾಗಿ ಬಂದ ಸಂದರ್ಭವನ್ನು, ಉಚಿತ ವಚನಗಳಿಂದ ಅರಿಕೆ ಮಾಡಿಸಿದನು. ಆ ಸಂಗತಿಯನ್ನು ಕೇಳಿದ ನವಾಬನು, ಆ ರಾಯಭಾರವನ್ನು ವಹಿಸಿಹೋದ ಶಂಕರನಾರಾಯಣಯ್ಯನೆಂಬ ನಿಯೋಗಿಗೆ ವಿಶೇಷವಾಗಿ ಮರ್ಯಾದೆ ಮಾಡಿ, ಪರಜಾ ಎಂಬ ಬಿರುದು ಕೊಟ್ಟು, ಇಕ್ಕೇರಿಯ ಒಡೆಯನಿಗೆ, ಹಸರು ಪತ್ರಿಗೆ, ನಿಷಾನಿ ಮುಂತಾದುವನ್ನು ಕೊಟ್ಟು ಬಹುಮಾನ ಮಾಡಿದ್ದಲ್ಲದೆ, ಸೋದೆ ಮತ್ತು ಬಿಳಿಗಿ ಸೀಮೆಗಳನ್ನು ಅವರಿಗೆ ಕೊಟ್ಟುಬಿಡಬೇಕೆಂದೂ ಹೇಳಿ ಕಳುಹಿಸಿದನು. ವೀರಭದ್ರನಾಯಕನು, ನವಾಬನ ಆದೇಶದಂತೆಯೇ ಆಯಾ ಸೀಮೆಗಳನ್ನು ಅವರವರಿಗೆ ವಹಿಸಿಕೊಟ್ಟು ಅವರೊಂದಿಗೆ ಮುಂದೆ ಸ್ನೇಹದಿಂದಲೇ ವರ್ತಿಸತೊಡಗಿದನು.

ಮೇಲ್ಕಂಡಂತೆ ಸ್ನೇಹಭಾವವೇರ್ಪಟ್ಟಿದ್ದರೂ, ನವಾಬನ ಮೈತ್ರಿಯು ಬಹುಕಾಲ ಸುರಕ್ಷಿತವಾಗಿ ನಡೆದುಬರಲಿಲ್ಲ. ಇಕ್ಕೇರಿ ಅರಸರ ಪ್ರಾಬಲ್ಯವನ್ನು ಸಹಿಸದೆ ಅಸೂಯೆಗೊಂಡಿದ್ದ ಇತರ ಹಲವು ಮಂದಿ ಪಾಳಯಗಾರರು ಒಳಸಂಚು ನಡೆಸಿ, ಪುನಃ ಬಿಜಾಪುರದ ನವಾಬರಲ್ಲಿ ದೂರಿಕೊಳ್ಳಲು ಈ ಬಾರಿ ಆತನು ರಣದುಲ್ಲಾಖಾನನೆಂಬ ಸೇನಾಪತಿಯೊಂದಿಗೆ, ಇಕ್ಕೇರೀ ರಾಜಧಾನಿಯ ಮೇಲೆ ದೊಡ್ಡದೊಂದು ಸೇನೆಯನ್ನೇ ಕಳುಹಿಸಿದನು. ವೀರಭದ್ರನಾಯಕನು ಆ ಪರಿಸ್ಥಿತಿಯನ್ನು ಕಂಡು ರಾಜಧಾನಿಯನ್ನು ಬಿಟ್ಟು, ಭುವನಗಿರಿದುರ್ಗಕ್ಕೆ ಹೊರಟುಹೋದನು. ಶತ್ರುಸೇನೆಯು ಅಲ್ಲಿಗೂ ಬೆನ್ನಟ್ಟಿ ಹೋಗಲು, ಹಿಂದಿನಂತೆಯೇ, ರಾಯಭಾರಿಯನ್ನು ಕಳುಹಿಸಿ ಸ್ನೇಹವನ್ನಪೇಕ್ಷಿಸಿದನು. ರಾಯಭಾರಿಯ ವಾಕ್ಚಾತುರ್ಯದಿಂದ ಸೇನಾಪತಿಯು ಸುಮುಖನಾಗಿ ಮುತ್ತಿಗೆಯನ್ನೆತ್ತಿ ಹೊರಟುಹೋದನು.

ವೈರಾಗ್ಯಪರಚಿತ್ತವೃತ್ತಿಯ ರಾಜನಿಗೆ, ರಾಜ್ಯವಿಚಾರ ಚಿಂತೆಯೆಂಬುದು ಬಹು ತಾಪದಾಯಕವಾಗಿರುವುದು ಸ್ವಾಭಾವಿಕವಷ್ಟೆ! ವೀರಭದ್ರನಾಯಕನು ವೈರಾಗ್ಯ ವಿಚಾರಗಳನ್ನು [illegible] ಮನಸ್ಕತೆಯುಳ್ಳವನಾಗಿದ್ದುದರಿಂದ ಮೇಲೆಮೇಲೆ ರಾಜಕೀಯವಾಗಿ ಬಂದೊದಗುತ್ತಿದ್ದ ಈ ಬಗೆಯ ಹಲವು ವಿಚಾರಗಳು ಆತನ ಮನಸ್ಸಿಗೆ ವಿಶೇಷ ಅಶಾಂತತೆಯನ್ನುಂಟುಮಾಡುತ್ತಿದ್ದುವು. ಆದುದರಿಂದ ಶಾಂತಿಪ್ರಿಯನಾದ

ಆ ನಾಯಕನು, ಅಧಿಕಾರಿಗಳ ದುರಭಿಸಂಧಿಗಳಿಂದ ರಾಜದ್ರೋಹ, ಅಶಾಂತತೆ, ಮೋಸಕಾಪಟ್ಯಾದಿಗಳಿಗೆ ನೆಲೆವೀಡಾಗಿದ್ದ ಇಕ್ಕೇರಿಯನ್ನು ಬಿಟ್ಟು, ತನ್ನ ಕೊನೆಗಾಲವನ್ನು ಬಿದನೂರಲ್ಲಿ ಕಳೆಯಲು ನಿಶ್ಚಯಿಸಿ ಅಲ್ಲಿ ನಿಂತನು. ಅದೇ ಸ್ಥಳದಲ್ಲೇ ರಾಜನಿಗೆ ಶಾ. ಶ. ೧೫೭೦ (೧೬೪೬) ರಲ್ಲಿ ಮೃತ್ಯುವೊದಗಿತು.— ಈತನ ರಾಣಿಯು ಪತಿವ್ರತಾಶಿರೋಮಣಿಯಾದುದರಿಂದ ಈತನ ತರುವಾಯ ಅಸಹನೆಯುತವರೂರಾಗಿದ್ದ ಆ ರಾಜ್ಯದಲ್ಲಿ ಜೀವಿಸಿರಲು ಇಚ್ಛಿಸದೆ ಸಹಗಮನ ಮಾಡಲು ನಿಶ್ಚಯಿಸಿದಳು. ಆದರೆ ಶಿವಾಚಾರ ಮತಸ್ಥರಾದ ಇವರಿಗೆ ದಹನಕ್ರಿಯೆಯಿಲ್ಲವಾದುದರಿಂದ ದೊರೆಯ ಶವವನ್ನು ಹೂಳಿದ ಗುಂಡಿಯಲ್ಲೇ ತನ್ನನ್ನೂ ಜೀವಸಹಿತವಾಗಿಯೇ ಹೂಳಬೇಕೆಂದು ಇಚ್ಛಿಸಿ, ಹಾಗೆಯೇ ತನ್ನ ಇಚ್ಛೆಯನ್ನು ನೆರವೇರಿಸಿಕೊಂಡಳು. ರಾಜಪುತ್ರರಮಣಿಯರು ಪುರಾಣಕಾಲದಿಂದಲೂ, ತಮ್ಮ ಪತಿಗಳ ಮೃತಶರೀರದೊಂದಿಗೆ ಅಗ್ನಿಪ್ರವೇಶಮಾಡಿ, ಸಹಗಮನ ಮಾಡುತ್ತಿದ್ದ ವಿಚಾರವು ಚಿರಪರಿಚಿತವಾದುದು. ಆದರೆ ಈ ರಾಣಿಯು ಮಾಡಿದ ಸಹಗಮನವು ವಿಚಿತ್ರತರವಾದುದು. ಪತಿಯೇ ಪರದೈವವೆಂದು ಭಾವಿಸಿದ್ದ ಅಂದಿನ ಭಾರತನಾರೀಮಣಿಯರ ಈ ಬಗೆಯ ಕೃತಿಗಳು ಇಂದಿನ ನವನಾಗರೀಕಕಾಲದ ಸ್ತ್ರೀಯರಿಗೆ ಏನೆಂದು ಅರ್ಥವಾಗುವುವೋ! ಈ ಪರಿಯ ಸತ್ಯಶೀಲರೂ, ಧರ್ಮನಿಷ್ಠರೂ ಯಾವ ವಂಶದಲ್ಲಿ ಉದ್ಭವಿಸುವರೋ ಆ ವಂಶವೇ ನಿರ್ಮಲಯಶಸ್ಸನ್ನು ಪಡೆದು ಲೋಕದಲ್ಲಿ ಅಭಿವೃದ್ಧಿಯಾಗುವುದು.

---

## ಅಧ್ಯಾಯ ೩ "ರಾಜ್ಯಪ್ರಾಪ್ತಿ"

ವೀರಭದ್ರನಾಯಕನ ಮರಣದಿಂದ, ಅಪುತ್ರವಂತನಾದ ಅವನ ರಾಜ್ಯವು ಯಾರಿಗೆ ಸೇರತಕ್ಕುದೆಂದು ರಾಜಬಂಧುಗಳಲ್ಲಿ ಈವರೆಗೇ ಚರ್ಚೆಯು ಹುಟ್ಟಿ ಬೆಳೆಯುತ್ತಲಿತ್ತು. ವೀರಭದ್ರನಾಯಕನ ಸೋದರತ್ತೆಯ ಮಗ ಸದಾಶಿವನಾಯಕನೆಂಬುವನು ರಾಜ್ಯಕ್ಕೆ ತನ್ನ ಬಾಧ್ಯತೆಯುಂಟೆಂದು

ಪ್ರಯತ್ನಿಸಲಾರಂಭಿಸಿದನು. ಆದರೆ, ವೀರಭದ್ರನಾಯಕನಿಗೆ ತನ್ನ ಪ್ರಪಿತಾಮಹನಾದ ದೊಡ್ಡ ಸಂಕಣ್ಣನಾಯಕನ ತಮ್ಮ ಚಿಕ್ಕ ಸಂಕಣ್ಣನಾಯಕನ ಪೌತ್ರ ಶಿವಪ್ಪನಾಯಕನೆಂಬಾತನಮೇಲೆ ವಿಶೇಷ ಅಭಿಮಾನವಿತ್ತು. ಶಿವಪ್ಪನಾಯಕನು ಧೊರೆಗೆ ವಾವೆಯಲ್ಲಿ ಚಿಕ್ಕಪ್ಪನಾಗಿದ್ದರೂ, ಆತನ ಮುಖದಮೇಲೆ ಎತ್ತಿ ಕಾಣುತ್ತಿದ್ದ ತೇಜಸ್ವಿತೆ, ಶೌರ್ಯ ಧೈರ್ಯಾದಿಗಳು, ಚಟುವಟಿಕೆ, ರಾಜಕಾರಣಪಟುತ್ವ ಮುಂತಾದ ಗುಣಗಳಿಗಾಗಿ ಲುಬ್ಧನಾಗಿ ವೀರಭದ್ರನಾಯಕನು ಆ ರಾಜಕುಮಾರನನ್ನು ಪ್ರೀತಿ ವಿಶ್ವಾಸಗಳಿಂದ ಕಾಣುತ್ತಾ, ವಿಶೇಷ ಅತ್ಯುಹಾಸದಿಂದ ಆತನಿಗೆ ವಿವಾಹ ಪ್ರಸ್ತುತಾದಿ ಶುಭಕಾರ್ಯಗಳನ್ನು ನಡೆಯಿಸಿ, ಸಕಲ ರಾಜಕಾರ್ಯಗಳಲ್ಲೂ ಆತನನ್ನೇ ಮುಂದಾಳಾಗಿ ಬಿಡುತ್ತಲಿದ್ದನು. ಶಕ್ತನಾದ ಶಿವಪ್ಪನಾಯಕನಮೇಲೆ ರಾಜನಿಗೆ ಅಭಿಮಾನವಿದ್ದುದು, ಸರ್ವಾಧಿಕಾರವನ್ನೂ ತಾವೇ ಅಪಹರಿಸಬೇಕೆಂದು ಹೊಂಚಿಕೊಂಡಿದ್ದ ಕೆಲವುಂದಿ ಸ್ವಾರ್ಥಸಾಧಕರಾದ ಅಧಿಕಾರಿಗಳಿಗೆ ಹೊಟ್ಟೆಯುರಿಯನ್ನುಂಟುಮಾಡಿತು. ಕೇವಲ ವೈರಾಗ್ಯಪರಚಿತ್ತವೃತ್ತಿಯುಳ್ಳವನಾಗಿರುವ ರಾಜನ ಪ್ರೀತಿಪಾತ್ರನಾದ ಈ ಶಿವಪ್ಪನಾಯಕ ಮತ್ತು ಅವನ ತಮ್ಮ ವೆಂಕಟಪ್ಪನಾಯಕ ಈ ಇಬ್ಬರನ್ನು ತೊಲಗಿಸಿಬಿಟ್ಟರೆ, ರಾಜ್ಯದಲ್ಲಿ ತಮ್ಮ ಕಾರ್ಯಭಾರವನ್ನೇ ನಿರಂಕುಶವಾಗಿ ನಡೆಯಿಸಬಹುದೆಂದು, ಸೇನೆ ದಿವಾನ ಪುಟ್ಟಣ್ಣ, ರಾಮಕೃಷ್ಣಪ್ಪ, ಮತ್ತು ಕಾಸಿ ವೀರಯ್ಯ ಎಂಬೀ ಮೂವರು ಅಧಿಕಾರಿಗಳು ಅಗಾಧ ಪ್ರಯತ್ನಗಳನ್ನು ನಡೆಯಿಸಿದರು. ಪುಟ್ಟಣ್ಣನು, ಆಗ ಇಕ್ಕೇರಿಯಲ್ಲಿದ್ದ ವಿಜಾಪುರದ ನವಾಬನ ವಕೀಲನಾದ ಜನ್ನೋಪಂತನೆಂಬಾತನನ್ನು ಲಂಚದ ಮೂಲಕ ವಶಪಡಿಸಿಕೊಂಡು ಶಿವಪ್ಪನಾಯಕನನ್ನು ಹಿಡಿದು ನಿರ್ಬಂಧಿಸುವ ವಿಚಾರವನ್ನು ಆತನು ಮಾನಸಿಕಮಾಡುವಂತೆ ಸಿದ್ಧಪಡಿಸಿಕೊಂಡನು. ಶಿವಪ್ಪನಾಯಕನನ್ನು ಹುಡುಕಿಸುವ ಕಾರ್ಯವು ಬಹು ತ್ವರ್ಯವಾಗಿ ಸಾಗತೊಡಗಿತು. ವಿಚಾರವು ಹೇಗೋ ಶಿವಪ್ಪನಾಯಕನ ಆಪ್ತರಾಗಿದ್ದ ಜನರಿಗೆ ತಿಳಿದು, ಅವರು ಆತನನ್ನೂ, ತಮ್ಮ ವೆಂಕಟಪ್ಪನಾಯಕನನ್ನೂ, ಸುಂಕದ ಸೇನಬೋವ ಕೋನಪ್ಪನ ಮನೆಯ ನೆಲಮಾಳಿಗೆಯಲ್ಲಿ ಬಚ್ಚಿಟ್ಟು, ಶಿವಪ್ಪನಾಯಕನು ಊರಲ್ಲಿಲ್ಲವೆಂಬ ವಾರ್ತೆಯನ್ನು ಹುಟ್ಟಿಸಿದರು. ಶಿವಪ್ಪನಾಯಕನು ತಮ್ಮ

ಬಲೆಗೆ ಬೀಳದೆ ಬದುಕಿದನೆಂಬ ಸಂಗತಿಯು ಆತನ ದ್ರೋಹಿಗಳಿಗೆ ಅತಿಶಯ ನಿರುತ್ಸಾಹಕರವಾಯಿತು. ಆ ಘಾತುಕರು, ತಮ್ಮ ಪ್ರಯತ್ನವು ಹೀಗೆ ಭಗ್ನವಾಗಲು, ಅತ್ತ ಸದಾಶಿವನಾಯಕನನ್ನೇ ವಧಿಸಲು ಪ್ರಯತ್ನವನ್ನು ನಡೆಸಿದರಂತೆ!

ಮುಂದೆ ರಾಜಪೀಠವನ್ನೇರಲು ಸರ್ವವಿಧಗಳಿಂದಲೂ ಶಕ್ತನಾದ ತನ್ನ ಪ್ರೀತಿಪಾತ್ರ ಶಿವಪ್ಪನಾಯಕನಮೇಲೆ ನಡೆದಿದ್ದ ಕ್ಷುದ್ರ ರಾಜಕಾರ್ಯದ ಸಮಸ್ತ ವೃತ್ತಾಂತವು ಯುಕ್ತಕಾಲದಲ್ಲೇ ರಾಜನ ತಿಳಿವಳಿಕೆಗೆ ಬಂದಿತು. ಒಡನೆ ಬುದ್ಧಿಶಾಲಿಯಾದ ಆತನು, ವಿರೋಧಿಗಳೆಂದು ತೋರಿದ ಆ ಪ್ರಬಲ ಅಧಿಕಾರಿಗಳನ್ನು ಹಿಡಿಸಿ ಬಹಿರಂಗವಾಗಿ ನಿಗ್ರಹಿಸಿದ ಪಕ್ಷದಲ್ಲಿ ರಾಜ್ಯದ ಬಿಗಿ ಕೆಟ್ಟುಹೋಗಬಹುದೆಂದು ಬಹುದೂರ ಯೋಚಿಸಿ, ಶಿವಪ್ಪನಾಯಕನನ್ನು ಕರೆಯಿಸಿಕೊಂಡು, ಆತನಿಗೆ ಚಂದಾವರ ಪ್ರಾಂತದ ಅಧಿಕಾರವನ್ನು ಕೊಟ್ಟು, ಯುಕ್ತಪರಿವಾರದೊಂದಿಗೆ ಕಳುಹಿಸಿಬಿಟ್ಟನು. ಇದರಿಂದ ಶಿವಪ್ಪನಾಯಕನ ಪ್ರಾಣವು ಸುರಕ್ಷಿತವಾದುದಲ್ಲದೆ, ಅಧಿಕಾರಿಗಳಿಗೂ ಒಡನೆ ಪ್ರತಿಭಟಿಸಲು ಅವಕಾಶವಾಗಲಿಲ್ಲ. ಹೀಗೆ ಕೆಲದಿನಗಳವರೆಗೆ ನಡೆದು ಬಂತು.

ಈ ಮಧ್ಯೆ ವೀರಭದ್ರನಾಯಕನ ಕುಟುಂಬದಲ್ಲಿ ಒಂದು ಸಂಕಟವೊದಗಿತು. ನಾಯಕನ ಹಿರಿಯ ಹೆಂಡತಿ ವೀರಮ್ಮಾಜಿಯು ಕಾಲಧರ್ಮ ಹೊಂದಿದಳು. ಇದರಿಂದ ಸ್ವಾಭಾವಿಕವಾಗಿಯೇ ವಿರಕ್ತ ಚಿತ್ತವೃತ್ತಿಯ ವೀರಭದ್ರನಾಯಕನು ಸಂಸಾರ ವಿಷಯದಲ್ಲಿ ವಿಶೇಷ ವೈರಾಗ್ಯವನ್ನೂ, ರಾಜ್ಯ ವಿಚಾರದಲ್ಲಿ ಅಧಿಕವಾದ ಬೇಸರವನ್ನೂ ಹೊಂದಿ, ತನ್ನ ಚಿಕ್ಕ ಹೆಂಡತಿಯನ್ನು ಜೊತೆಗೆ ಕರೆದುಕೊಂಡು ಒಂದೆಡೆ ನಿಲ್ಲಲು ಮನಸ್ಸಿಗೆ ಸಮಾಧಾನವಿಲ್ಲದೆ, ಊರೂರು ಸುತ್ತತೊಡಗಿದನು. ರಾಜ್ಯವು ಯಜಮಾನನಿಲ್ಲದ ಮನೆಯಂತೆಯೂ ಗುರುವಿಲ್ಲದ ಮಠವಂತೆಯೂ ಶೋಭಾಹೀನವಾಯಿತು. ರಾಜ್ಯದ ಬಿಗಿ ತಪ್ಪಿತು. ಇದನ್ನು ಕಂಡು, ರಾಜನ ಆಪ್ತರೂ ರಾಜ್ಯದ ಕ್ಷೇಮಚಿಂತಕರೂ ಪ್ರಜಾಮುಖಂಡರೂ ಆಗಿದ್ದ ಮರುವಪ್ಪ, ಸಿದ್ದಪ್ಪ ಎಂಬಿಬ್ಬರು ದೊಡ್ಡ ಮನುಷ್ಯರು ರಾಜನನ್ನು ಸಂದರ್ಶಿಸಿ ದೇಶಸ್ಥಿತಿಯನ್ನೂ, ಪ್ರಜಾಕ್ಷೇಮ ಚಿಂತನೆಯ ಆವಶ್ಯಕತೆಯನ್ನೂ, ಸ್ಪಷ್ಟೋಕ್ತಿಗ

ಳಿಂದ ವಿಜ್ಞಾಪಿಸಿದರು. ಬುದ್ಧಿವಂತನೂ ದೂರಾಲೋಚನಾಪರನೂ ಆದ ವೀರಭದ್ರನಾಯಕನು ಅವರ ಮಾತಿನ ಸತ್ಯತೆಯನ್ನು ಕಂಡು, ಒಡನೆ ಚಂದಾವರದಲ್ಲಿದ್ದ ಶಿವಪ್ಪನಾಯಕನನ್ನು ಕರೆಯ ಕಳುಹಿಸಿ ಬಿದನೂರಿನಲ್ಲಿ ನಿಂತು ರಾಜ್ಯಾಧಿಕಾರವನ್ನು ನಡೆಯಿಸೆಂದು ಕಟ್ಟಮಾಡಿದನು. ಶಿವಪ್ಪನು ರಾಜಾಜ್ಞೆಯನ್ನು ಶಿರಸಾವಹಿಸಿ, ರಾಜಕಾರ್ಯ ಸೂತ್ರಗಳನ್ನು ಕೈಗೆ ತೆಗೆದುಕೊಂಡು ವಜ್ರ ಮುಷ್ಟಿಯಿಂದ ಕಾರ್ಯಭಾರಗಳನ್ನು ನಡೆಯಿಸಲಾರಂಭಿಸಲು, ಸ್ವಾರ್ಥಸಾಧಕರಾದ ಮೇಲ್ಪಂಡ ಪುಟ್ಟಣ್ಣ, ರಾಮಕೃಷ್ಣಯ್ಯ, ವೀರಯ್ಯ ಮುಂತಾದವರಿಗೆ ಉಸುರು ಕಟ್ಟಿದಂತಾಯಿತು

ತಮ್ಮ ಇಚ್ಛೆಗೆ ವಿರೋಧವಾಗಿ, ತಮಗೆ ಶತ್ರುವೂ, ರಾಜ್ಯಭಾರದಲ್ಲಿ ಸ್ವತಃ ಶಕ್ತನೂ ಆದ ಶಿವಪ್ಪನಾಯಕನೇ ಸರ್ವಾಧಿಕಾರಿಯಾಗಿ ರಾಜಧಾನಿಯಲ್ಲಿ ಬಂದು ನಿಂತುದು, ಅವರ ಸಕಲವಿಧ ಕೆಲಸಕಾರ್ಯಗಳಿಗೂ ದೊಡ್ಡ ಪ್ರತಿಬಂಧಕವಾಯಿತು. ಒಡನೆ ಆ ನೀಚರು, ರಾಜನ ಅಭಿಮಾನಕ್ಕೆ ಪಾತ್ರರಾಗಿದ್ದ ಮುಖಂಡರಾದ ಪರುವಪ್ಪ, ಸಿದ್ದಪ್ಪ ಎಂಬೀ ಇಬ್ಬರನ್ನು ತಮ್ಮ ವಂಚಕ ವಾಗ್ಜಾಲದಿಂದ ಸ್ವಾಧೀನಗೊಳಿಸಿಕೊಂಡು, ತನ್ಮೂಲಕ ಶಿವಪ್ಪನಾಯಕನನ್ನು ನಿಗ್ರಹಿಸಬೇಕೆಂದು ಸಮಯ ಕಾಯತೊಡಗಿದರು. ಒಂದುದಿನ ಶಿವಪ್ಪನಾಯಕನು ತನ್ನ ತಮ್ಮನಾದ ವೆಂಕಟಪ್ಪನಾಯಕನೊಂದಿಗೆ, ತಮ್ಮ ಚಿಕ್ಕರಮನೆಯಿಂದ ರಾಜನು ವಾಸವಾಗಿದ್ದ ದೊಡ್ಡ ಅರಮನೆಗೆ ಹೋಗುತ್ತಿರಲು, ಮೇಲ್ಕಂಡ ಆ ದುಷ್ಟರು, ಅವರನ್ನು ಒಂದು ಇಕ್ಕಟ್ಟಾದ ಸ್ಥಳದಲ್ಲಿ ಸಂಧಿಸಿ ಸಮೀಪದಲ್ಲೇ ಇದ್ದ- ಹಿಂದಿನ ಕಾಗದ ಪತ್ರಗಳನ್ನು ಇಟ್ಟಿದ್ದ ಕಡತದ ಚಾವಡಿ ಎಂಬ ಕೊಠಡಿಯಲ್ಲಿ ಅವರನ್ನು ಕೂರಿಸಿ, ಅದರ ಬಾಗಿಲುಗಳನ್ನೆಲ್ಲ ಮುಚ್ಚಿಸಿ ಸೆರೆಗೊಳಿಸಿದರು. ಆಗ ಆ ಅಣ್ಣತಮ್ಮಂದಿರಿಬ್ಬರೂ ಶೂರರಾದರೂ ಅಕಸ್ಮಾತ್ತಾಗಿ ತಮಗೆ ಪ್ರಾಪ್ತವಾದ ಆ ಬಂಧನಕ್ಕಾಗಿ ಅಪ್ರತಿಭರಾಗಿ, ಒಡನೆ ಧೈರ್ಯಗೊಂಡು, ಆ ರಾತ್ರಿಯೆಲ್ಲಾ ನಿದ್ರೆ ಮಾಡದೆ ಕೊಠಡಿಯ ಒಳಕದಗಳನ್ನೆಲ್ಲ ಮುಚ್ಚಿಕೊಂಡು ಮುಂದೇನಾಗಲಿರುವುದೋ ನೋಡೋಣವೆಂದು ಕುಳಿತಿದ್ದು, ಮುಂಝಾಮದ ಹೊತ್ತಿನಲ್ಲಿ ಬಾಗಿಲು ತೆಗೆದುಕೊಂಡು ಪಾರಾಗಬೇಕೆಂದು ಹೊರಹೊರಟರು. ಆಗ ಅವರನ್ನು ತಡೆದ ಕಾವಲುಗಾರರು ಆ ಶೂರ ರಾಜಕುಮಾ

ರರ ಕೈ ಕತ್ತಿಗೆ ತುತ್ತಾಗಿ ಪ್ರಾಣಬಿಡಬೇಕಾಯಿತು. ಒಡನೆ ಕೋಟೆಯ ಬಾಗಿಲನ್ನು ತೆಗೆಯಿಸಿಕೊಂಡು ಹೊರಬಿದ್ದ ಶಿವಪ್ಪನಾಯಕನು ನಯಭಯದ ಬಣ್ಣದ ಮಾತುಗಳಿಂದ ತಮ್ಮನ್ನು ಮೋಸಗೊಳಿಸಿದ್ದ ಪರುವಪ್ಪ ಸಿದ್ದಪ್ಪ ಎಂಬಾ ಮುಖಂಡರನ್ನು ಹಿಡಿಸಿ ನಿಗ್ರಹಿಸಿ ಎಂದಿನಂತೆ ರಾಜ್ಯಭಾರ ಮಾಡಿ ಕೊಂಡಿದ್ದನು.

ವೀರ ಭದ್ರನಾಯಕನು ಮೃತನಾದ ತರುವಾಯ ರಾಜ್ಯಕ್ಕೆ ವಾರಸು ದಾರರಾರೆಂದು ಎದ್ದ ಗೊಂದಲದಲ್ಲಿ ನಮ್ಮ ಕಥಾನಾಯಕನು ಜಯಶಾಲಿ ಯಾಗಿ ಉಳಿಯಲು, ಆತನಿಗೆ, ಶಾ. ಶ. ೧೫೬೮ ನೆಯ ಪಾರ್ಥಿವ ಸಂ. ಮಾ ರ್ಗಶಿರ ಶುದ್ಧ ದ್ವಾದಶಿ (ಕ್ರಿ ಶ ೧೬೪೫) ಯ ಶುಭದಿನದಲ್ಲಿ ಬಿದನೂರಿ ನಲ್ಲಿ ಪಟ್ಟಾಭಿಷೇಕ ಮಹೋತ್ಸವವು ಅತ್ಯಂತ ವಿಜೃಂಭಣೆಯಿಂದ ನೆರೆವೇ ರಿತು. ಶಿವಪ್ಪನಾಯಕನು ವಿಸ್ತಾರವಾದ ಆ ರಾಜ್ಯಕ್ಕೆ ಪ್ರಭುವಾಗಿ ಪಟ್ಟಾ ಭಿಷಿಕ್ತನಾದನಾದರೂ, ರಾಜ್ಯಪದವಿಯೇನು ಆತನಿಗೆ ಪುಷ್ಪಶಯ್ಯೆಯಾಗಿರ ಲಿಲ್ಲ. ನೂತನವಾಗಿ ಸ್ಥಾಪಿತವಾಗಿ ದಿನದಿನಕ್ಕೆ ಅಭಿವೃದ್ಧಿಗೆ ಬರುತ್ತಿದ್ದ ಆ ರಾಜ್ಯದ ಮೇಲೆ ದ್ವೇಷಾಗ್ನಿಯನ್ನು ಕಾರುತ್ತಾ ಸಮಯ ದೊರೆತರೆ ಸಿಕ್ಕಷ್ಟು ರಾಜ್ಯಭಾಗವನ್ನು ಕಬಳಿಸಲು ಬಾಯಿ ತೆರೆದುಕೊಂಡು ಕುಳಿತಿದ್ದ ಸುತ್ತುಮುತ್ತಿನ ರಾಜರೂ, ಹೆಗ್ಗಡೆಗಳೂ ಎಲ್ಲೆಲ್ಲೂ ತುಂಬಿದ್ದರು. ವಿಜಾ ಪುರದ ತುರಷ್ಕ ಪ್ರಭುಗಳಂತೂ, ನಿಷ್ಕಾರಣವಾಗಿ ಕೀಟಲೆ ತೆಗೆದು ಜಗಳಕ್ಕಾ ರಂಭಿಸಿ ಸಿಕ್ಕಲ್ಲಿ ಜನಗಳನ್ನು ಕೊಂದು ಅವರ ಸರ್ವಸ್ವವನ್ನೂ ಅಪಹರಿಸಲು ಸದಾ ಹೊಂಚಿ ಕಾದಿದ್ದರು. ಇನ್ನು ರಾಜ ಬಂಧುಗಳ ವರ್ಗವಂತೂ ಸದಾ ದ್ವೇಷಾಸೂಯೆಗಳನ್ನೇ ಉಚ್ಛ್ವಾಸನಿಶ್ವಾಸಗಳನ್ನಾಗಿಟ್ಟುಕೊಂಡು ಪ್ರಭುಸ್ಥಾನದಲ್ಲಿದ್ದವರ ಮೇಲೆ ಉರಿದು ಬೀಳುತ್ತಿದ್ದರು. ಹಿಂದಿನ ದೊರೆ ಗಳ ಕಾಲದಲ್ಲಿ ವಿವಿಧ ಕಾರಣಗಳಿಂದ ಪ್ರಸಿದ್ಧಿಗೆ ಬಂದು ಅಧಿಕಾರದ ರುಚಿ ಯನ್ನು ಸವಿದಿದ್ದ ದುಷ್ಟ ಅಧಿಕಾರಿಗಳು ನಾನಾ ಬಗೆಯ ಕುಮಂತ್ರಗಳಿಂದ ಕ್ಷುದ್ರಾನ್ವೇಷಣಮಾಡಲು ಸದಾ ಪ್ರಯತ್ನಿಸುತ್ತಿದ್ದರು. ಈ ಮಧ್ಯೆ ರಾ ಜ್ಯಭಾರದ – ಪ್ರಜಾಕ್ಷೇಮ ಪಾಲನೆಯ ನಿತ್ಯವ್ಯವಹಾರದ ಚಿಂತೆ- ಈ ಬಗೆ ಯ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಧೈರ್ಯದಿಂದ ಎಲ್ಲವನ್ನೂ ನಿಗ್ರಹಿಸಿ ಕೊಂಡು ಉಳಿವ ಸಾಮರ್ಥ್ಯವು ಯಾವನಿಗುಂಟೋ ಅವನೇ ರಾಜ್ಯಲಕ್ಷ್ಮಿ

ಯ ಭೋಗಾನುಭವಕ್ಕೆ ಯೋಗ್ಯನಾಗುವನು. ಶಿವಪ್ಪನಾಯಕನು ಸ್ವಯಂ ಧೀರನು. ಹಿಂದಿನ ರಾಜನ ಕಾಲದಿಂದಲೂ, ಈ ಬಗೆಯ ಸಕಲ ಕಷ್ಟ ನಷ್ಟಗಳಲ್ಲೂ, ಬಿದ್ದೆದ್ದು ಅನುಭವಪಟ್ಟವನೂ ಆಗಿದ್ದುದರಿಂದ ರಾಜವಂಶ ದಲ್ಲಿ ಆತನಲ್ಲದೆ ಮತ್ತಾರೂ ಸಿಂಹಾಸನಕ್ಕೆ ಅರ್ಹರಾದವರು ಇರಲೇ ಇಲ್ಲ. ಆದರೆ ಅವನಿಗೆ ಶತ್ರುಗಳು ಇರಲಿಲ್ಲವೆಂದಲ್ಲ. ಆದರೂ, ಬಹು ದಿನಗಳಿಂ ದಲೂ ಆತನಿಗೆ ದೇಶದ ಒಳಭಾಗ ಹೊರಭಾಗಗಳಲ್ಲಿ ನಡೆದ ಹಲವು ಯುದ್ಧಗಳಲ್ಲಿ ಪ್ರಾಪ್ತವಾದ ಜಯಗಳು ಆತನ ವಿಷಯದಲ್ಲಿ ಶತ್ರುಗಳಿಗೆ ಭಯೋತ್ಪಾದಕಗಳಾಗಿದ್ದುವು. ಹೀಗೆ ಆಗ ಇದ್ದ ರಾಜ್ಯದ ಸ್ಥಿತಿಗತಿ ಗಳನ್ನು ಯೋಚಿಸಿದಲ್ಲಿ, ಪ್ರಾಪ್ತವಾಗುವ ಕಷ್ಟನಷ್ಟಗಳಿಗೆಲ್ಲ ಎದೆಗೊಟ್ಟು ನಿಂತು, ದೃಢಮುಷ್ಟಿಯಿಂದ ರಾಜ್ಯಭಾರಮಾಡಬಲ್ಲ ಧೀರನು ಅವನೊ ಬ್ಬನೇ ಎಂದು ನಿಸ್ಸಂದೇಹವಾಗಿ ಹೇಳುವಂತಿತ್ತು. ಅಂತೆಯೇ, ರಾಜ್ಯ ಲಕ್ಷ್ಮಿಯೂ ಆತನಿಗೇ ಮಾಲಿಕೆಯನ್ನು ಹಾಕಿದಳು. ಶಿವಪ್ಪನಾಯಕನು ಇಂತು ಅಪೂರ್ವ ರಾಜತೇಜದಿಂದ ವಿರಾಜಮಾನನಾದನು.

ಶಿವಪ್ಪನಾಯಕನಿಗೆ ಪಟ್ಟವಾಗುವುದಕ್ಕೆ ಮುಂಚಿತವಾಗಿಯೇ ವಿವಾ ಹವಾಗಿತ್ತು. ವೀರಭದ್ರನಾಯಕನು ಸತ್ಕುಲಪ್ರಸೂತರಾದ ಗಂಗಮ್ಮಾಜಿ ನಾಗಮ್ಮಾಜಿ (ಶಾಂತಮ್ಮಾಜಿ) ಎಂಬಿಬ್ಬರು ಕನ್ಯೆಯರನ್ನು ತಂದು ಆತ ನಿಗೆ ಅತ್ಯಂತ ವಿಜೃಂಭಣೆಯಿಂದ ಲಗ್ನಮಾಡಿದ್ದನು. ಪಟ್ಟವಾದಮೇಲೆ ಆತನು ನಂಬಿಯಣ್ಣಸೆಟ್ಟಿ ಎಂಬಾತನ ಸೊಸೆಯ ತಂಗಿ ಭದ್ರಮ್ಮಾಜಿ ಎಂಬಾಕೆಯನ್ನೂ ಬಾದಾಮಿ ಲಿಂಗಪ್ಪಸೆಟ್ಟರ ಕುಮಾರಿ ಬಸಮ್ಮಾಜಿ ಎಂ ಬಾಕೆಯನ್ನೂ, ನಾಗಾಜಮ್ಮಾಜಿ ಎಂಬಾಕೆಯನ್ನೂ ವಿವಾಹವಾದನು. ಇದರಲ್ಲಿ ಹಿರಿಯ ಹೆಂಡತಿ ಲಿಂಗಮ್ಮಾಜಿಯ ಗರ್ಭದಲ್ಲಿ ಸಿದ್ದಮ್ಮಾಜಿ ಎಂಬ ಕನ್ಯೆಯೂ ದ್ವಿತೀಯಪತ್ನಿ ಶಾಂತಮ್ಮಾಜಿಯ ಗರ್ಭದಲ್ಲಿ ಭದ್ರಪ್ಪನಾಯಕ ನೆಂಬ ಮಗನೂ ನಾಲ್ಕನೆಯ ಪತ್ನಿ ಬಸಮ್ಮಾಜಿಯ ಉದರದಲ್ಲಿ ಸೋಮಶೇಖರನೆಂಬ ಪುತ್ರನೂ ಮೂರನೆಯ ಪತ್ನಿ ಭದ್ರಮ್ಮಾಜಿಯ ಗರ್ಭ ದಲ್ಲಿ ಬಸವಲಿಂಗಮ್ಮಾಜಿ ಎಂಬ ಕುಮಾರಿಯೂ ಉದಯಿಸಿದರು. ನಾಗಾ ಜಮ್ಮಾಜಿ ಎಂಬ ಪತ್ನಿಯಲ್ಲಿ ಸಂತಾನೋದಯವಾಗಲಿಲ್ಲವೆಂದು ತಿಳಿಯಬ ರುತ್ತೆ. ತನ್ನ ತಂದೆಯಾದ ಸಿದ್ದಪ್ಪನಾಯಕನು ಸಾಕ್ಷಾತ್ತಾಗಿ ರಾಜ

ಗದ್ದುಗೆಯನ್ನೇರದಿದ್ದರೂ, ಪಿತಾಮಹನಾದ ಚಿಕ್ಕ ಸಂಕಣ್ಣನಾಯಕನ ಪಾರಂಪರ್ಯದ ಸಂಬಂಧದಿಂದ ಪ್ರಾಪ್ತವಾದ ರಾಜಪೀಠದಲ್ಲಿ ಮಂಡಿಸಿ, ಶಿವಪ್ಪನಾಯಕನು, ಪತ್ನಿಯರು ಪುತ್ರರು ಸೊಸೆಯರು ಮೊಮ್ಮಕ್ಕಳು, ಆಪ್ತೇಷ್ಟರು ಇಚ್ಛಾನುವರ್ತಿಗಳಾದ ಬಂಧು ಬಾಂಧವರು ವಿಧೇಯರಾದ ಪ್ರಜಾಪರಿವಾರಗಳವರು, ದಿನದಿನಕ್ಕೆ ಹೆಚ್ಚುತ್ತಿದ್ದ ಅಧಿಕಾರ ಪದವಿಗಳು, ಅಮಿತೈಶ್ವರ್ಯ, ದಿವ್ಯಾರೋಗ್ಯಭಾಗ್ಯ ಮುಂತಾದ ಸಕಲ ವೈಭವಗಳಿಂದಲೂ ಕೂಡಿ, ಜನ್ಮಾಂತರಕೃತ ಸುಕೃತ ವಿಶೇಷದಿಂದಲೋ ಎಂಬಂತೆ-ಯೋಗಭ್ರಷ್ಟನಾಗಿ ಜನಿಸಿದ ಮಹಾ ಯೋಗಿಯೋ ಎಂಬಂತೆ ಸಕಲ ಲೌಕಿಕ ಸುಖಾನುಭವಗಳನ್ನೂ ಹೊಂದಿ ರಾಜ್ಯಭಾರ ಮಾಡಿಕೊಂಡಿದ್ದನು.

---

## ಅಧ್ಯಾಯ ೪ "ರಾಜ್ಯಭಾರಕ್ರಮ"

ಶಿವಪ್ಪನಾಯಕನು ಪ್ರವೇಶಮಾಡಿದಂದಿನಿಂದ ಬಿದನೂರಿನ ಪ್ರಭಾವವು ದಿನದಿನಕ್ಕೆ ಅಭಿವೃದ್ಧಿಯಾಗತೊಡಗಿತು. ಬಿದನೂರು-ಬಿದರೂರು ಎಂದೂ ಕರೆಯಲ್ಪಟ್ಟಿದೆ. ಬಿದಿರ-ಊರು ಎಂಬರ್ಥದ ಬಿದರೂರನ್ನು ನಾಯಕನು ಪ್ರಾಜ್ಞಸಮ್ಮತಿಯಿಂದ ವೇಣುಪುರವೆಂದು ಕರೆದು ಅದನ್ನು ಸಕಲ ವಿಧಗಳಿಂದಲೂ ರಾಜಧಾನಿಗೆ ಯೋಗ್ಯವಾದ ನಗರವನ್ನಾಗಿಮಾಡಲು ಸಂಕಲ್ಪಿಸಿದನು. ವಿಸ್ತಾರವಾದ ರಾಜಬೀದಿಗಳು, ಒಂದೇ ಸಾಲಾಗಿ ಕಟ್ಟಲ್ಪಟ್ಟ ನಾಗರಿಕರ ದಿವ್ಯಸೌಧಗಳು, ವಿಶೇಷವಾದ ವ್ಯಾಪಾರ ಉದ್ಯೋಗಗಳಿಗೆ ಆಕರವಾಗಿರುವಂತೆ ವಿರಚಿತವಾದ ಅಂಗಡಿಮುಂಗಟ್ಟುಗಳು, ನಗರದ ಮುಖ್ಯಮುಖ್ಯ ಭಾಗಗಳಲ್ಲಿ ನಾಗರಿಕರ ವಿಶ್ರಾಂತಿಗಾಗಿ ಉಪವನ-ವಿರಾಮಸ್ಥಳಗಳು ಮುಂತಾದುವುಗಳನ್ನು ನಿರ್ಮಿಸಿ ನಗರದ ಅಂದವನ್ನು ಹೆಚ್ಚಿಸಿದನು. ನಗರ ನಿವಾಸಿಗಳ ವರ್ಣಾಶ್ರಮಾಚಾರಗಳಿಗೆ ವಿರೋಧವಿಲ್ಲದಂತೆ ಆಯಾ ಪಂಗಡದವರು ವಾಸಿಸಲು ಪ್ರತ್ಯೇಕ ಪ್ರತ್ಯೇಕವಾದ ಬೀದಿಗಳೂ ಅಗ್ರಹಾರಗಳೂ ಹಟ್ಟಿಗಳೂ ವಿಂಗಡಿಸಲ್ಪಟ್ಟು ರಚನೆಯಾ

ದುವು. ಜಲವಸತಿಗೆ ತಾಪತ್ರಯವಾಗದಂತೆ ಕೆರೆ, ಕೊಳ, ಭಾವಿ, ಕಾರಂಜಿ, ಕಾಲುವೆಗಳು ನಿರ್ಮಿಸಲ್ಪಟ್ಟುವು. ಅಲ್ಲದೆ ಚಿತ್ರಕಾರರು, ಶಿಲ್ಪಿಗಳು, ಕಂಚುಗಾರರು, ಕುಂಬಾರರು, ಅಕ್ಕಸಾಲಿಗರು, ಗಾಣಿಗರು, ಉಪ್ಪಾರ ಸಾಯಿಂದ ಬಡಗಿ ಚರ್ಮಕಾರ ಮುಂತಾದ ವಿವಿಧ ಜಾತಿ ಕುಲಕಸಬುದಾರರಿಗೂ-ಕೈಕೆಲಸಗಾರರಿಗೂ ಅನುಕೂಲವಾದ ಸ್ಥಳಗಳಲ್ಲಿ ನಿವಾಸಗಳನ್ನೇರ್ಪಡಿಸಿಕೊಟ್ಟನು. ಸಕಲ ಬಗೆಯ ವ್ಯಾಪಾರ ಉದ್ಯೋಗ ಕೈಕೆಲಸಗಳೂ ನೂತನಾವೇಶದಿಂದಲೋ ಎಂಬಂತೆ ವಿಶೇಷ ರೀತಿಯಿಂದ ಜರುಗಲಾರಂಭಿಸಿದುವು. ಶೈವರು ವೈಷ್ಣವರು ಮುಂತಾದ ಕಾರಣಗಳಿಂದ ತನ್ನ ಪ್ರಜೆಗಳಲ್ಲಿ ಪರಸ್ಪರ ದ್ವೇಷಾಸೂಯೆಗಳಿಗೆ ಅವಕಾಶವುಂಟಾಗದಂತೆ ನಾಯಕನು ಬಹು ಜಾಗರೂಕತೆಯಿಂದ ಆವಶ್ಯಕವಾದ ವೇಳೆಗಳಲ್ಲಿ ಅತಿ ನಿಷ್ಠುರಭಾವದಿಂದಲೂ ವರ್ತಿಸಿ, ಅತ್ಯಾಚಾರಗಳುಂಟಾಗದಂತೆ ಗಮನಿಸುತ್ತಿದ್ದನು. ತನ್ನ ರಾಜ್ಯದಲ್ಲಿಲ್ಲದಿದ್ದ ಕೈಕೆಲಸಗಾರರನ್ನು ಅಕ್ಕಪಕ್ಕದ ಕೊಂಕಣ, ಮಲೆಯಾಳ, ತಮಿಳುನಾಡು ಮುಂತಾದ ಪ್ರಾಂತಗಳಿಂದ ಬರಿಸಿ ಆಯಾ ವ್ಯಕ್ತಿಗಳು ಅಭಿವೃದ್ಧಿಗೊಳ್ಳಲು ತಕ್ಕ ಸೌಕರ್ಯಗಳನ್ನು ಕಲ್ಪಿಸಿ ಕೊಟ್ಟನು. ವರ್ಣಸಾಂಕರ್ಯವು, ಧರ್ಮಪತನಕ್ಕೂ ಧರ್ಮಪತನವು ರಾಜ್ಯವಿನಾಶಕ್ಕೂ ಕಾರಣವಾಗುವುದೆಂಬುದನ್ನು ಚೆನ್ನಾಗಿ ಅರಿತಿದ್ದ ಆ ಧರ್ಮಪ್ರಭುವು, ತನ್ನ ಪ್ರಜಾವರ್ಗದಲ್ಲಿ ವರ್ಣಸಾಂಕರ್ಯಾದಿ ದೋಷಗಳು ಲೇಶಮಾತ್ರವೂ ನಡೆಯಲು ಅವಕಾಶವಿಲ್ಲದಂತೆ ಬಹು ಜಾಗರೂಕನಾಗಿದ್ದನು. ರಾಜನು ಧರ್ಮಮಾರ್ಗ ತತ್ಪರನಾಗಿದ್ದಾನೆಂದು ತಿಳಿದರೆ ಅಧಿಕಾರಿವರ್ಗವೂ-ಪ್ರಜಾವರ್ಗವೂ ಭಯಭಕ್ತಿಯುತರಾಗಿ ಆತನನ್ನೇ ಅನುಸರಿಸಿ ತಾವೂ ಧರ್ಮಮಾರ್ಗವನ್ನು ತಪ್ಪದೆ ನಡೆಯುವುದು ಸ್ವಾಭಾವಿಕವಾದ್ದರಿಂದ, ಆತನ ರಾಜ್ಯದಲ್ಲಿ ಪ್ರಜೆಗಳು ಆಸ್ತಿಕರಾಗಿ ಧರ್ಮಭೀತರಾಗಿ ಸತ್ಯಸಂಧರಾಗಿ ನಡೆಯುತ್ತಿದ್ದರು. ದೇಶದಲ್ಲಿ ಕಳ್ಳಕಾಕರ ಭಯವು ತಪ್ಪಿತು. ಲಂಚ ರುಷುವತ್ತುಗಳು ಮಾಯವಾದುವು, ಮೋಸಕಾಪಟ್ಯಗಳು ಕಾಣವಾದುವು. ಪ್ರಜೆಗಳಲ್ಲಿ ಸುಖಸಂತೋಷಗಳು ದಿನದಿನಕ್ಕೆ ಹೆಚ್ಚಿ, ರಾಜ್ಯವು ಸರ್ವ ವಿಧದಲ್ಲೂ ಕಳೆಗೊಂಡು ಅಭಿವೃದ್ಧಿಗೊಳ್ಳತೊಡಗಿತು.

ಚಿಕ್ಕಸಂಕಣ್ಣನಾಯಕನ ಕಾಲದಲ್ಲಿ ಪ್ರಧಾನಿಯ ಅಧಿಕಾರದಲ್ಲಿ ನಿಯಮಿತರಾದ ಚಿನ್ನಭಂಡಾರದ ನಾರ್ಣಪ್ಪಯ್ಯನವರ ವಂಶೀಕರೂ ಇಕ್ಕೇರಿ ಸಂಸ್ಥಾನೀಕರ ವಂಶೀಕರಂತೆಯೇ ಸಂಸ್ಥಾನದ ಪ್ರಧಾನಿಪದವಿಯನ್ನೂ ವಂಶಪಾರಂಪರ್ಯವಾಗಿಯೇ ಅನುಭವಿಸುತ್ತಾ ಬಂದರು. ಶಿವಪ್ಪನಾಯಕನ ಕಾಲದಲ್ಲಿ ಈ ಮೂಲಪುರುಷರಿಂದ ನಾಲ್ಕನೆಯ ತಲೆಯವರಾದ ಚಿನ್ನಭಂಡಾರದ ರಾಮಕೃಷ್ಣಪ್ಪನೆಂಬುವರು ಪ್ರಧಾನಿಯ ಉದ್ಯೋಗದಲ್ಲಿದ್ದರು. ಶಿವಪ್ಪನಾಯಕನು, ಮಹಾಮೇಧಾವಿಗಳೂ ವ್ಯವಹಾರ ಚತುರರೂ ಸ್ವಾಮಿಭಕ್ತರೂ ನಂಬಿಗಸ್ತರೂ ಆದ ಈ ಮಹಾಪ್ರಧಾನರೂ ಮತ್ತು ತಮ್ಮನಾದ ವೆಂಕಟಪ್ಪನಾಯಕನೂ ಸಹಾ ಎರಡು ಭುಜಗಳಂತಿದ್ದು ಸಹಾಯಕರಾಗಿರಲು, ಹಲವು ವಿಘ್ನಪರಂಪರೆಗಳನ್ನೂ ಲಕ್ಷ್ಯವಿಲ್ಲದೆ ದಾಟಿ ರಾಜ್ಯಭಾರವನ್ನು ಅವಲೀಲೆಯಿಂದ ವಹಿಸಿ ನಿರ್ವಹಿಸತೊಡಗಿದನು.

ಶಿವಪ್ಪನಾಯಕನಿಗೆ ಪಟ್ಟವಾದ ಪ್ರಾರಂಭದ ಎರಡು ವರ್ಷಕಾಲ ರಾಜಧಾನಿಯ ನಿರ್ಮಾಣ, ಒಟ್ಟು ರಾಜ್ಯದ ಆಳ್ವಿಕೆಯ ಪುನರ್ವ್ಯವಸ್ಥೆ ಮೊದಲಾದ ಕಾರ್ಯಗಳಿಗಾಗಿ ಕಳೆದ ವೇಳೆಗೆ ಸಂಸ್ಥಾನದ ಅಕ್ಕಪಕ್ಕದ ಶತ್ರುಗಳು ಕೆಲವರು ಪ್ರಬಲಿಸತೊಡಗಿದರು. ಶಿವಪ್ಪನಾಯಕನು ಆ ಸುಳಿವನ್ನು ತಿಳಿದು ಒಂದು ಕ್ಷಣವೂ ಸಾವಕಾಶಮಾಡದೆ ತನ್ನ ಸೈನ್ಯವನ್ನು ಹೊರಡಿಸಿ, ಐಗೂರು ಪಾಳಯಪಟ್ಟನ್ನು ಮುತ್ತಿ, ಅಲ್ಲಿಯ ಪಾಳಯಗಾರನ ಗರ್ವಭಂಗಮಾಡಿ ಆ ಪ್ರಾಂತವನ್ನು ಸ್ವಾಧೀನಪಡಿಸಿಕೊಂಡನು. ಶಿವಪ್ಪನಾಯಕನು ಹೊರದೇಶದ ದಿಗ್ವಿಜಯಕ್ಕಾಗಿ ಹೊರಡಲು ಒಂದು ಕಾರಣವೂ ಈ ಸಂದರ್ಭದಲ್ಲಿ ಒದಗಿತು. ೧೫೬೫ರಲ್ಲಿ ನಡೆದ ತಾಳೀಕೋಟೆಯ ಭಯಂಕರ ರಣರಂಗದಲ್ಲಿ ರಾಮರಾಜನು ಮೃತನಾದ ತರುವಾಯ ವಿಜಯನಗರ ಸಂಸ್ಥಾನವು ನಾಶವಾಗಿ ಆ ವಂಶೀಕರು ದಿಕ್ಕುಪಾಲಾಗಿ ಹೋದರಷ್ಟೆ! ಆ ವಂಶದಲ್ಲಿ ಅಳಿಯ ರಾಮರಾಜನ ಮರಿಮಗನಾದ ಶ್ರೀರಂಗರಾಜನೆಂಬಾತನು ೧೬೩೯-೧೬೪೦ನೆಯ ಸಂವತ್ಸರದ ಸುಮಾರಿನಲ್ಲಿ ಚಂದ್ರಗಿರಿಯಲ್ಲಿ ಆಳುತ್ತಾ ಇದ್ದನು. ಈತನೇ ಮದರಾಸು ನಗರವಿರುವ ಸ್ಥಳವನ್ನು ಆಗ ಕಂಪೆನಿಯ ವರ್ತಕರಿಗೆ ಮಾರಿದುದು. ಆರು ವರ್ಷಗಳ ತರುವಾಯ ಎಂದರೆ, ೧೬೪೬ನೆಯ ಸಂ।ದಲ್ಲಿ ಗೋಲಕೊಂಡದ ಮಹಮ್ಮದ್‌ಷಾಹಿ ನವಾ

ಬನು ಚಂದ್ರಗಿರಿಗೆ ಮುತ್ತಿಗೆ ಹಾಕಿ, ಅದನ್ನೂ ವೇಲೂರು ಮುಂತಾದ ಪ್ರಾಂತವನ್ನೂ ಆಕ್ರಮಿಸಿಕೊಂಡು ಶ್ರೀ ರ ಂ ಗ ರಾ ಜ ನ ನ್ನು ಅಲ್ಲಿಂದ ಅಟ್ಟಿದನು.

ವಿಧಿವಿಲಾಸವು ವಿಚಿತ್ರವಾದುದು. ಯಾವ ವಿಜಯನಗರದ ಪ್ರೌಢ ಸಂಸ್ಥಾನೀಕರ ಆಶ್ರಯಹೊಂದಿ ಪ್ರಾರಂಭಕ್ಕೆ ಇಕ್ಕೇರೀ ಸಂಸ್ಥಾನೀಕರು ತಮ್ಮ ರಾಜ್ಯವನ್ನು ಕಟ್ಟಲು ಆರಂಭಿಸಿದ್ದರೋ, ಆ ವಿಜಯನಗರದ ಅರಸುಗಳು ಒಂದು ನೂರು ವರ್ಷಗಳು ಕಳೆಯುವುದರೊಳಗಾಗಿಯೇ ತಮ್ಮ ಆಶ್ರಿತರ ಮರೆಬಿದ್ದು ಬದುಕಬೇಕಾದ ಕಾಲ ಒದಗಿತು. ಶ್ರೀರಂಗರಾಜನು ಸುತ್ತುಮುತ್ತ ಎಲ್ಲೂ ತನ್ನನ್ನು ಕೈ ಹಿಡಿದು ರಕ್ಷಿಸಬಲ್ಲ ಶಕ್ತರನ್ನು ಕಾಣದೆ, ಆಗ ಶಿವಪ್ಪನಾಯಕನ ಪ್ರಭುತ್ವದಲ್ಲಿ ತಲೆಯೆತ್ತಿ ಪ್ರಖ್ಯಾತಿಗೊಳ್ಳ ತೊಡಗಿದ್ದ ಬಿದನೂರು ರಾಜ್ಯದ ಆಶ್ರಯಹೊಂದಿ ಕಾಲಕ್ಷೇಪ ಮಾಡಬಹುದೆಂದು ಎಣಿಸಿದನು. ನಾಯಕನು ತನ್ನನ್ನೇ ನಂಬಿ ಬಂದ ಚಕ್ರವರ್ತಿ ವಂಶೀಕನ ಮನವಿಯನ್ನು ಲಾಲಿಸಿ, ರಾಜ್ಯದಲ್ಲಿ ತಮ್ಮನಾದ ವೆಂಕಟಪ್ಪನಾಯಕನನ್ನು ನಿಲ್ಲಿಸಿ ತಾನು ಸೈನ್ಯದೊಂದಿಗೆ ಹೊರಟು, ತುರುಷ್ಕರಿಗೆ ಸ್ವಾಧೀನವಾಗಿದ್ದ ವೇಲೂರು ಕೋಟೆಯನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಂಡನು. ಈ ಸಂಗತಿಯನ್ನು ಕೇಳಿದ ಶ್ರೀರಂಗರಾಯನು ಪರಮಸಂತೋಷಪಟ್ಟು, ವೇಲೂರಿಗೆ ಬಂದು ನಾಯಕನಿಗೆ ಅನೇಕ ವಸ್ತ್ರಾಭರಣಗಳು, ವಿಶೇಷ ಬೆಲೆಬಾಳುವ ನೀಲದ ಮಣಿ ಮುತ್ತು ಮುತ್ತಿನಮಣಿ ಹಾಕಿದ ಚೌಕುಳಿಯನ್ನೂ, ಶಂಖಚಕ್ರಾದಿಗಳು ಸತ್ತಿಗೆ ಮುಂತಾದ ರಾಜಯೋಗ್ಯ ವಸ್ತುಗಳನ್ನೂ ಬಹುಮಾನವಾಗಿ ಕೊಟ್ಟು, ಆತನ ಶೌರ್ಯಸಾಹಸಗಳನ್ನು ಹೊಗಳಿ ಆದರಿಸಿದನು. ಶಿವಪ್ಪನಾಯಕನು ಸಂತುಷ್ಟನಾಗಿ ಆ ಜಯದ ಜ್ಞಾಪಕಾರ್ಥವಾಗಿ ಬ್ರಾಹ್ಮಣರಿಂದ ವಾಜಪೇಯ ಯಜ್ಞವನ್ನೂ, ಹಲವು ಧರ್ಮಕಾರ್ಯಗಳನ್ನೂ ಮಾಡಿಸಿ ವಿದ್ವಾಂಸರಿಗೆ ವಿಶೇಷ ದಾನಧರ್ಮಾದಿಗಳನ್ನಿತ್ತು, ಶಿವರಾಜಪುರವೆಂಬ ಒಂದು ಅಗ್ರಹಾರವನ್ನು ಕಟ್ಟಿಸಿ ಯೋಗ್ಯರಾದ ಶ್ರೋತ್ರಿಯರಿಗೆ ಧಾರೆಯೆರೆದು ಕೊಟ್ಟನು. ಅಲ್ಲದೆ ಕೇದಾರೇಶ್ವರ, ಕಾಶಿ, ಶ್ರೀಶೈಲ, ಗೋಕರ್ಣ, ರಾಮೇಶ್ವರ, ಶಿವಗಂಗೆ ಮುಂತಾದ ಶೈವ ಕ್ಷೇತ್ರಗಳಲ್ಲೆಲ್ಲ ವಿಶೇಷವಾದ ಪುಣ್ಯವಟ್ಟನ್ನು ಇಟ್ಟು ತನ್ನ ಸೇವೆಯು

ನಡೆದು ಬರುವಂತೆ ಏರ್ಪಡಿಸಿದನು.

ಇದಾದ ತರುವಾಯ ಶಿವಪ್ಪನಾಯಕನಿಗೆ, ಖಿಲವಾಗಿ ಹೋಗಿದ್ದ ವಿಜಯನಗರದ ಚಕ್ರಾಧಿಪತ್ಯವನ್ನು ಪುನಃ ಜೀರ್ಣೋದ್ಧಾರಗೊಳಿಸಬೇಕೆಂದು ಇಚ್ಛೆ ಹುಟ್ಟಿತು. ಒಡನೆ ಶ್ರೀರಂಗರಾಜನ ಪಕ್ಷವನ್ನು ವಹಿಸಿ ದಂಡಯಾತ್ರೆಗೆ ಹೊರಟು, ಸಕ್ಕರೆಪಟ್ಟಣವನ್ನು ಹಿಡಿದು ಅಲ್ಲಿ ಆತನಿಗೆ ಪಟ್ಟಗಟ್ಟಿ, ಮುಂದೆ ವಿಜಯನಗರದವರಿಗೆ ಕಾರಣಾಂತರಗಳಿಂದ ಕೈತಪ್ಪಿಹೋಗಿದ್ದ ಶ್ರೀರಂಗಪಟ್ಟಣ ರಾಜ್ಯವನ್ನು ಅವರಿಗೆ ಜಯಿಸಿಕೊಡಬೇಕೆಂದು ನಿಶ್ಚಯಿಸಿ ಹೊರಟನು. ಮಾರ್ಗದಲ್ಲಿ ಹಾಸನ ಬೇಲೂರು ಕಡೂರು ಮೈಸೂರು ಈ ಪ್ರಾಂತಗಳೂ ಕೈವಶವಾದುವು. ಶ್ರೀರಂಗಪಟ್ಟಣದವರೆಗೂ ಸೈನ್ಯವನ್ನು ನಡೆಸಿ ಅದಕ್ಕೆ ಮುತ್ತಿಗೆಯನ್ನೂ ಹಾಕಿದನು. ಅಷ್ಟರಲ್ಲಿ ಅತ್ತ ರಾಜಧಾನಿಯಲ್ಲಿ ಅತ್ಯಗತ್ಯವಾದ ಕಾರ್ಯಪ್ರಾಪ್ತವಾದುದರಿಂದ ಮುತ್ತಿಗೆಯನ್ನು ಬಲಪಡಿಸಿ ಮುಂದರಿಸಲು ಅವಕಾಶವಿಲ್ಲದೆ ಒಡನೆ ಹಿಂದಿರುಗಿ ಸ್ವರಾಜ್ಯಾಭಿಮುಖವಾಗಿ ಪ್ರಯಾಣ ಮಾಡಿದನು.

ರಾಜಧಾನಿಯಲ್ಲಿ ಸುವ್ಯವಸ್ಥೆಯನ್ನು ಏರ್ಪಡಿಸಿದಮೇಲೆ ಶಿವಪ್ಪನಾಯಕನ ದೃಷ್ಟಿಯು ಘಟ್ಟದ ಕೆಳಗಿನ ಪ್ರಾಂತದಮೇಲೆ ಬಿತ್ತು. ಒಡನೆ ಆತನು ಹೊಸಂಗಡಿಯ ಬಳಿ ಘಟ್ಟ ಇಳಿದು ಸೈನ್ಯದೊಂದಿಗೆ ಪ್ರಯಾಣ ಮಾಡಿ ಕುಂದಾಪುರಕ್ಕೆ ಹೋಗಿ, ಅದನ್ನು ಮುತ್ತಿ ಸ್ವಾಧೀನಪಡಿಸಿಕೊಂಡನು. ಮುಂದೆ ಹೊನ್ನಾವರವನ್ನು ಜಯಿಸಿ, ಸುತ್ತುಮುತ್ತಿನ ರೈತರಿಗೂ ಕೈಗಾರಿಕೆ ಜನರಿಗೂ ಅಭಯವಿತ್ತು, ಆ ಪ್ರಾಂತದ ಪಾಲನೆಗೆ ಯೋಗ್ಯರಾದ ಅಧಿಕಾರಿಗಳನ್ನು ನಿಯಮಿಸಿದನು. ಅಲ್ಲಿಂದ ಭಟ್ಕಳವನ್ನು ಸೇರಿ ಅದನ್ನೂ ಬಾರ್ಕೂರು ಪ್ರಾಂತವನ್ನೂ ವಶಪಡಿಸಿಕೊಂಡು ಅಲ್ಲೆಲ್ಲಾ ಪ್ರಜೆಗಳ ಧನ ಮಾನ ಪ್ರಾಣರಕ್ಷಣೆಗೆ ಅವಶ್ಯಕವೆನ್ನಿಸಿದ ಏರ್ಪಾಡುಗಳನ್ನು ಮಾಡಿದನು. ತರುವಾಯ ಹಾಗೆಯೇ ಮುಂದಕ್ಕೂ ಸೈನ್ಯವನ್ನು ನಡೆಯಿಸಿ, ಮಂಗಳೂರು, ಮಳವೆ, ಕಟ್ಟಿಕೀಳೂರು, ಬೇಕಲು, ಚಿತ್ತೂರು, ಚಂದ್ರಗಿರಿ ಎಂಬ ಸ್ಥಳಗಳನ್ನು ಜಯಿಸಿ, ಚಂದ್ರಗಿರಿಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಈ ದೊರೆಯು ಅರಬ್ಬೀ ಸಮುದ್ರದಲ್ಲಿ ಒಂದು ದ್ವೀಪವನ್ನು ಹಿಡಿದುಕೊಂಡು, ಅಲ್ಲೊಂದು ಕೋಟೆಯನ್ನು ಕಟ್ಟಿದ್ದನೆಂದೂ ಹೇ

ಳಿಕೆಯುಂಟು. ಆ ದುರ್ಗವು ಬಹುದಿನಗಳವರೆಗೂ (ಈಗಲೂ) ಬಸವರಾಜ ದುರ್ಗವೆಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದಿತೆಂದು ತಿಳಿದುಬರುತ್ತೆ. ಇದ ರಿಂದ ಈತನಲ್ಲಿ ಸಮುದ್ರ ಪ್ರಯಾಣಕ್ಕೆ ಆವಶ್ಯಕವಾದ ಸಲಕರಣೆಗಳ ಸಂಗ್ರಹವೂ ಇತ್ತೆಂದು ಸಿದ್ಧವಾಗುತ್ತದೆ.

ಈಗಿನ ದಕ್ಷಿಣಕನ್ನಡ ಜಿಲ್ಲೆಯ ಪ್ರಾಂತದಲ್ಲಿ ಸಂಚಾರ ಮಾಡುತ್ತಿದ್ದ ಆ ಕಾಲದಲ್ಲೇ, ಆತನಿಗೆ ಆ ಪ್ರಾಂತದಲ್ಲಿ ಪ್ರಬಲರಾಗಿದ್ದ ಮಾಮಿಳ್ಳೆಯ ರನ್ನು ಅಡಗಿಸಬೇಕೆಂಬ ಇಚ್ಛೆಯೂ ಉಂಟಾಯಿತು. ಒಡನೆ ಆತನು ಪಶ್ಚಿಮ ಸಮುದ್ರತೀರ ಪ್ರಾಂತದಲ್ಲೇ ದಕ್ಷಿಣ ದಿಕ್ಕನ್ನನುಸರಿಸಿ ಪ್ರಯಾಣ ಮಾಡಿ, ಕೇರಳದೇಶವನ್ನು ಪ್ರವೇಶಿಸಿ, ಯಾರಿಗೂ ಸಗ್ಗದೆ ಮಹಾ ದುಷ್ಟರಾಗಿದ್ದ ಅಲ್ಲಿಯ ಮಾಮಿಳ್ಳೆಯರನ್ನೂ, ನಾಯುವಾರರನ್ನೂ ಜಯಿಸಿ ವಿಶೇಷ ಪ್ರಖ್ಯಾತನಾದನು. ಅಷ್ಟುಮಾತ್ರವಲ್ಲ, ಈ ಪಶ್ಚಿಮತೀರ ಪ್ರಾಂತ ದಲ್ಲಿ ಯೂರೋಪುಖಂಡದ ಕೆಲಕೆಲ ಜನಾಂಗದವರು ಬಂದು ನೆಲೆಸಿ ವ್ಯಾಪಾರದ ಕೋಠಿಗಳನ್ನು ಕಟ್ಟಿಕೊಂಡು, ಅವರ ಭಾಷೆಯನ್ನು ತಿಳಿಯದ ಈ ದೇಶದ ಜನಗಳನ್ನು ಅನೇಕ ಬಗೆಯಲ್ಲಿ ಮೋಸಗೊಳಿಸುತ್ತಲೂ ಹಿಂಸಿ ಸುತ್ತಲೂ ಇದ್ದುದುಂಟು. ಉಷ್ಣಾಧಿಕ್ಯವಾದ ಪ್ರದೇಶವಾದುದರಿಂದ ಕಪ್ಪಾದ ದೇಹವರ್ಣವುಳ್ಳ ಈ ಪ್ರಾಂತದ ನಿವಾಸಿಗಳಿಗೆ, ಶೈತ್ಯಾಧಿಕ್ಯ ಪ್ರದೇಶದ ನಿವಾಸಿಗಳಾದ ಅವರ ವರ್ಣವು ಪ್ರಾರಂಭಕ್ಕೆ ವಿಚಿತ್ರವಾಗಿ ಯೂ ಗೌರವಾಸ್ಪದವಾಗಿಯೂ ಕಂಡುಬಂದಿರಲಿಕ್ಕೆ ಸಾಕು. ಅಲ್ಲದೆ ಸ್ವಾಭಾವಿಕವಾಗಿಯೇ ಉದಾರಿಗಳೂ ನಿಷ್ಕಪಟ ಹೃದಯರೂ ಆದ ಈ ದೇಶೀಯರು, ವ್ಯಾಪಾರವನ್ನೇ ಮುಖ್ಯೋದ್ಯೋಗವನ್ನಾಗಿಟ್ಟುಕೊಂಡು ಬಂದ ಈ ಕೆಂಪುಜನರಿಂದ ಪ್ರಾರಂಭಕ್ಕೆ ತಕ್ಕಷ್ಟುಮಟ್ಟಿಗೆ ಮೋಸಗೊಳಿ ಸಲ್ಪಡುತ್ತಿದ್ದರು. ನಮ್ಮ ದೇಶೀಯರಿಗೆ, ಪ್ರಾರಂಭಕ್ಕೆ ಬಂದ ಪೋರ್ಚು ಗೀಸರು, ಫ್ರೆಂಚರು, ಡಚ್ಚರು, ಇಂಗ್ಲೀಷರು ಎಂಬೀ ಬೇರೆಬೇರೆ ಜನಾಂ ಗದವರ ಪ್ರತ್ಯೇಕ ಪರಿಚಯವಾಗದೆ ಕೆಂಪು ವರ್ಣದವರಾದ ಈ ಜನರೆಲ್ಲ ರನ್ನೂ ಫರಂಗಿಯವರು ಎಂಬ ಒಂದೇ ಹೆಸರಿನಿಂದ ಸಂಬೋಧಿಸುತ್ತಿದ್ದರು. ವ್ಯಾಪಾರಾದಿಗಳಲ್ಲಿ ಈ ಪರದೇಶೀಯರ ಪ್ರಾಬಲ್ಯವು ದಿನದಿನಕ್ಕೆ ಹೆಚ್ಚು ತ್ತಿದ್ದುದನ್ನೂ, ತನ್ಮೂಲಕ ದೇಶೀಯರಿಗೆ ಉಂಟಾಗುತ್ತಿದ್ದ ಕಿರುಕುಳ

ವನ್ನೂ ಅನುಲಕ್ಷಿಸಿ, ಶಿವಪ್ಪನಾಯಕನು ಈ ಜನರ ಮುಖ್ಯಸ್ಥರನ್ನು ಬರಮಾಡಿಕೊಂಡು ಅವರ ವ್ಯಾಪಾರ ಉದ್ಯೋಗಗಳನ್ನು ಕುರಿತು ತಕ್ಕಂತೆ ತನಿಖೆನಡಿಸಿ, ಅವರಿಂದ ದೇಶೀಯರಿಗೆ ಯಾವ ಬಗೆಯಿಂದಲೂ ಕಷ್ಟನಷ್ಟಗಳುಂಟಾಗದಂತೆ ಗಮನಿಸಿರಬೇಕೆಂದು ಖಂಡಿತನಾಗಿ ಅಪ್ಪಣೆಮಾಡಿ, ಅವರ ಹಾವಳಿಯನ್ನು ತಗ್ಗಿಸಿದನು. ವ್ಯಾಪಾರರ ಮುಖ್ಯಸ್ಥಳವಾದ ನೀಲೇಶ್ವರವು ಶಿವಪ್ಪನಾಯಕನ ಕೈಸೇರಿತು. ವಿಜಯಿಯಾದ ವೇಣುಪುರದರಸನು, ಅಷ್ಟು ದೂರಪ್ರಾಂತದಲ್ಲೂ ತನ್ನ ವಿಜಯಪತಾಕೆಯು ಸರ್ವಕಾಲಿಕವಾಗಿ ಮೆರೆಯುತ್ತಿರಬೇಕೆಂದು ಸಂಕಲ್ಪಿಸಿ, ಅಲ್ಲಿ ತನ್ನದೊಂದು ಜಯಸ್ತಂಭವನ್ನು ಸ್ಥಾಪಿಸಿದನು.

ಇಷ್ಟಾಗುವಲ್ಲಿ ಅತ್ತ ವಿಜಾಪುರದ ಸುಲ್ತಾನನಾದ ಇಬ್ರಾಹಿಂ ಅದಿಲ್‌ಷಹನು ಮೃತನಾದನೆಂಬ ವಾರ್ತೆಯು ಬಂತು. ಒಡನೆ ರಾಜಕಾರಣಪಟುವಾದ ನಮ್ಮ ಕಥಾನಾಯಕನು ಸೈನ್ಯದೊಂದಿಗೆ ಹೊರಟು, ಹಿಂದೆ ಒಂದು ಕಾಲದಲ್ಲಿ ಕೈತಪ್ಪಿಹೋಗಿದ್ದ ಇಕ್ಕೇರಿಯನ್ನೂ, ಸೊರಬ, ಸಿರಸಿ, ಬನವಾಸಿ, ಹೇರೂರು, ಜೋಳೂರು, ಸೋದೆ ಮೊದಲಾದ ಸ್ಥಳಗಳನ್ನೂ ಒಂದಾದಮೇಲೊಂದರಂತೆ ಜಯಿಸಿ ಸ್ವಾಧೀನಪಡಿಸಿಕೊಂಡನು. ಶಿವಪ್ಪನು ಎಂತಹ ವೀರನಾಗಿದ್ದನೋ ಅಷ್ಟುಮಟ್ಟಿನ ಉದಾರಿಯಾಗಿಯೂ ಇದ್ದನು. ಸೋದೆಯನ್ನು ಜಯಿಸಿದ ತರುವಾಯ ಅಲ್ಲಿಯ ಸಂಸ್ಥಾನಾಧಿಪನಾದ ಮಧುಲಿಂಗನಾಯಕನು ವಿಧೇಯನಾಗಿ ಬೇಡಿಕೊಳ್ಳಲಾಗಿ, ನಾಯಕನು ರಾಜಧರ್ಮಕ್ಕನುಸಾರವಾಗಿ ತನ್ನನ್ನು ಎದುರಿಸಿದ್ದ ಆತನನ್ನು ಮನ್ನಿಸಿ, ಆತನ ಪ್ರಾಂತವನ್ನು ಹಿಂದಿರುಗಿ ಕೊಟ್ಟು ಆದರಿಸಿದನು. ಆ ಸಂದರ್ಭದಲ್ಲೇ ಆ ಪ್ರಾಂತದ ಹಲವುಮಂದಿ ಚಿಕ್ಕಚಿಕ್ಕ ರಾಜರೂ ಪಾಳಯಗಾರರೂ ಬಂದು ಶಿವಪ್ಪನಾಯಕನನ್ನು ಕಾಣಿಸಿಕೊಂಡು, ಕಪ್ಪಕಾಣಿಕೆಗಳನ್ನೂ, ವಸ್ತ್ರಾಭರಣಾದಿಗಳನ್ನೂ, ವಿಶೇಷ ದ್ರವ್ಯವನ್ನೂ ಕೊಟ್ಟು ಆತನ ಕೃಪಾಕಟಾಕ್ಷಕ್ಕೆ ಪಾತ್ರರಾದರು.

ಶಿವಪ್ಪನಾಯಕನು, ದೈವಭಕ್ತನೂ ನಿಯತಾಚಾರಶೀಲನೂ ಆಗಿದ್ದು, ತನ್ನ ಪ್ರಜೆಗಳಲ್ಲಿ ಆಯಾ ಮತಸ್ಥರು ತಪ್ಪದೆ ಅವರವರ ಧರ್ಮಗಳನ್ನು ಅನುಸರಿಸಬೇಕೆಂದು ವಿಧಿಸಿದ್ದನು. ಪ್ರಭುವಾದ ತಾನು ಏಕ

ಧರ್ಮಪಕ್ಷಪಾತಿಯಾಗಿ ಪರಧರ್ಮಗಳವರನ್ನು ಮಾನಸಿಕ ಮಾಡುವುದರಿಂದ ರಾಜ್ಯದಲ್ಲಿ ಅಸಂತುಷ್ಟಿಯೂ, ಧರ್ಮಗ್ಲಾನಿಯೂ, ತನ್ನ ಧರ್ಮದವರಲ್ಲಿ ಒಣದಾಂಭಿಕತೆ, ವ್ಯಕ್ತಿಪ್ರತಿಷ್ಠೆ ಮುಂತಾದುವುಗಳೂ ಪ್ರಬಲಿಸಿ ಅಶಾಂತತೆಯು ಹೆಚ್ಚುವುದೆಂಬುದನ್ನು ಆತನು ಚೆನ್ನಾಗಿ ತಿಳಿದಿದ್ದನು. ಆದುದರಿಂದಲೇ, ಬ್ರಾಹ್ಮಣರು, ಲಿಂಗವಂತರು, ಮಹಮ್ಮದೀಯರು ಮುಂತಾದ ವಿವಿಧ ಜಾತಿಗಳವರನ್ನೂ, ಬ್ರಾಹ್ಮಣರಲ್ಲೇ ಶೈವರು ವೈಷ್ಣವರು ರಾಮಾನುಜರು ಮುಂತಾದವರನ್ನೂ, ಅವರವರ ಮತಾಚಾರಗಳಿಗೆ ತಕ್ಕಂತೆ ನಿಯತಾಚಾರಶೀಲರಾಗಿ ನಡೆದುಕೊಳ್ಳುವಂತೆ ನಿಬಂಧನೆ ಮಾಡಿದ್ದನು. ನ್ಯಾಯಶೀಲನಾದ ಈ ಪ್ರಭುವಿನ ಅಂತಃಕರಣದಲ್ಲಿದ್ದ ಈ ಉದಾರಭಾವದ ಪರಿಚಯವಿಲ್ಲದಿದ್ದ, ಕೆಲಮಂದಿ ಅಪ್ರಬುದ್ಧರಾದ ಆತನ ಸ್ವಂತ ಕುಲಸ್ಥರು, ಪರವರ್ಣಗಳವರಮೇಲೆ - ಮುಖ್ಯವಾಗಿ ಬ್ರಾಹ್ಮಣರಮೇಲೆ ಆಗಾಗ್ಗೆ ವರ್ಣದ್ವೇಷವನ್ನು ವ್ಯಕ್ತಪಡಿಸಿ ಕಿರುಕುಳಪಡಿಸುತ್ತಿದ್ದರಂತೆ! ಅವು ರಾಜನ ಗಮನಕ್ಕೆ ತರಲ್ಪಟ್ಟಾಗಲೆಲ್ಲ, ಸತ್ಯಸಂಧನಾದ ಈ ರಾಜನು ಅವರ ತಪ್ಪು ಅವರಿಗೆ ಚೆನ್ನಾಗಿ ಗೋಚರಕ್ಕೆ ಬರುವಂತೆ ನಿಷ್ಠುರರೀತಿಯಿಂದ ನ್ಯಾಯ ತೀರ್ಮಾನಮಾಡಿ ಪ್ರಜಾರಂಜಕನಾಗಿರುತ್ತಿದ್ದನು. ಆ ವಿಚಾರವನ್ನು ಸ್ಪಷ್ಟಗೊಳಿಸುವ ಹಲವು ದಂತಕಥೆಗಳಿವೆಯಾದರೂ, ಅವನ್ನು ಇಲ್ಲಿ ಉದಹರಿಸಬೇಕಾದುದು ಅಪ್ರಕೃತ.

ಶಿವಾಚಾರಮತಸ್ಥನಾದ ಆತನು, ಜಂಗಮ ಮಠಗಳು, ಶೈವ ದೇವಾಲಯಗಳು ಮುಂತಾದುವುಗಳನ್ನು ಜೀರ್ಣೋದ್ಧಾರಗೊಳಿಸಿ, ಆ ಮಠಸ್ಥರಿಗೆ ವಿಶೇಷ ಸೌಕರ್ಯಗಳನ್ನೊದಗಿಸಿ, ಆ ಮಠದ ಅಭಿವೃದ್ಧಿಗಾಗಿ ಪ್ರಯತ್ನಿಸಿದ್ದರೆ ಅದರಲ್ಲಿ ಅತಿಶಯವೇನೂ ಇಲ್ಲ. ಆದರೆ, ಈತನು ಬ್ರಾಹ್ಮಣರನ್ನೂ ಬಹೂಕರಿಸಿ ಅವರಿಗೆ ಕಾಲಪುರುಷದಾನ ತುಲಾಪುರುಷದಾನ ಸಹಸ್ರಗೋದಾನ ಮುಂತಾದ ವಿಶೇಷ ದಾನಧರ್ಮಗಳನ್ನು ಮಾಡಿ ಕಾಶೀ ಕ್ಷೇತ್ರದಲ್ಲಿ ತನ್ನ ಹೆಸರಿನಲ್ಲಿ ನಿತ್ಯಸೇವೆಯು ನಡೆದು ಬರುವಂತೆ ತಕ್ಕ ಏರ್ಪಾಟಗಳನ್ನು ಮಾಡಿದನು. ನ್ಯಾಯವಿಮರ್ಶೆಯ ಕಾರ್ಯವು ಕೇವಲ ಅಧಿಕಾರಿಗಳ ಪಾಲಿಗೇ ಉಳಿದರೆ, ಕಾಲಕ್ರಮದಲ್ಲಿ ಪ್ರಜೆಗಳಿಗೆ ನ್ಯಾಯದೊರೆಯದೆ ಹೋದೀತೆಂದು ತಿಳಿದು, ತನ್ನ ಸಂಚಾರ ಕಾಲದಲ್ಲೆಲ್ಲ ಪ್ರಜೆಗಳ ಕಷ್ಟಸು

ಖಗಳನ್ನು ಸ್ವತಃ ತಾನೇ ವಿಚಾರಿಸುತ್ತ, ಸರ್ವಕಾಲ ಸರ್ವಾವಸ್ಥೆಗಳಲ್ಲೂ ಪ್ರಜಾಸೌಖ್ಯವನ್ನೇ ತನ್ನ ರಾಜ್ಯದ ತಳಹದಿಯೆಂದು ತಿಳಿದು, ಅದರ ಪುರಕ್ಷಣೆಯಲ್ಲೇ ಗಮನವಿಟ್ಟು ನಡೆಯುತ್ತಿದ್ದನು. ನ್ಯಾಯಪಾಲನಾದಿ ಕಾರ್ಯಗಳಲ್ಲಿ ಆತನ ರಾಜ್ಯಭಾರವು ಎಷ್ಟುಮಟ್ಟಿಗಿತ್ತೆಂಬುದನ್ನು ಒಬ್ಬ*ಕವಿವರ್ಯನು ಹೀಗೆಂದು ವರ್ಣಿಸಿದ್ದಾನೆ.

ಕಂದ:—†ಕಂಡು ಪಣವಿತ್ತು ನಡೆಯದೆ
ಚಂಡಿಸಿ ಪುಂಡೆದ್ದು ಪರಿವ ದುಷ್ಪ್ರಜೆಗಳು ಮಂ
ಪಂಡಿಸಿಯುಳ್ಳರ್ಥವ ನೀ
ಳ್ದುಂಡಿಗೆಗೆಡೆಗೈಸಿ ತೆತ್ತರಂ ರಕ್ಷಿಸಿದಂ

ಕೂಟವ ನೊಡರಿಪರಂ ಬ
ಲ್ಗೋಟೆಗಳೊಳ್ಬಂದಿಗಿಕ್ಕಿ ತುಂಟರ್ಕಳ ಕಾ
ಲಾಟವ ನುಡುಗಿಸಿ ಧೂರ್ತರ
ಗೋಟುಗಳಂ ಕೊಂಡು ರಾಜ್ಯಮಂ ಪಾಲಿಸಿದಂ

ನೆರೆವರಿ ವರಾಡ ಕಡ ಮನ
ವರಿ ವಂಚನೆ ವಟ್ಟೆ ಲಂಚ ಹೊರನಿಲ ಹಸ್ತಾಂ
ತರ ಸಂಜಾಯಿತನಿಲಗಳ
ಪರಿವಿಡಿಯಂ ನಿಲಿಸಿ ಸೀಮೆಯುಂ ರಕ್ಷಿಸಿದಂ

ಕಳೆದುಳಿದ ಲೆಕ್ಕ ಗುತ್ತಿಗೆ
ಗಳ ನಿಲಹದ ನಾಮಿಯಡ್ಡವಂತಿಕೆ ನಾನಾ
ಸುಲಿಗೆ ಲಾವಣಿಗೆಯೆಂಬೀ
ಗಳಬಳಮಂ ನಿಲಿಸಿ ಸುಂಕಮಂ ಬಾಳಿಸಿದಂ

*ಲಿಂಗಣ್ಣಕವಿ ವಿರಚಿತ 'ಕೆಳದಿ ನೃಪವಿಜಯ'

† ಮುನ್ನುಡಿಯ ತರುವಾಯ ೪ ನೆಯ ಪುಟದಲ್ಲಿ ಕೊಟ್ಟಿರುವ ಪದ್ಯಗಳನ್ನು ಇವುಗಳೊಂದಿಗೆ ಸೇರಿಸಿ ಓದಿಕೊಳ್ಳಬೇಕು. ಸಂ.

ಕಟ್ಟು ಕೈವಾಲೆ ಸಮಯಂ
ತಟ್ಟನ ಮೆರೆವಣಿಗೆ ಪೊಮ್ಮು ಕೈದುಡುಕುಗಳಂ
ಪುಟ್ಟಿಸಿ ಪೊಣರ್ವ ಸೆಟ್ಟಿಗ
ಳಟ್ಟುಳಿಯಂ ನಿಲಿಸಿ ಸುಂಕವಂ ಬಾಳಿಸಿದಂ

ಕರಣಿಕೆಯನಿತ್ತು ಸಿಸ್ತಿನ
ಬರಹಗಳಿಂದಾಯ ಬೀಯಮಂ ಬಣಿತೆಗೆತಂ
ದುರುದುರ್ವ್ಯಯಂಗಳಂ ತಾಂ
ವಿರಚಿಸದಾರ್ಜಿಸಿದನೊಪ್ಪುವಗಣಿತ ಧನಮಂ

ನ್ಯಾಯವಿಮರ್ಶೆಯಲ್ಲಿ ಆತನ ಆಧಿಪತ್ಯವು ಕೇವಲ ಮಾನವ ಕುಲವನ್ನು ಮಾತ್ರವಲ್ಲ. ತಿರ್ಯಕ್ಪ್ರಾಣಿಗಳನ್ನೂ ಶಾಸನಮಾಡುತ್ತಿದ್ದ ರಾಜವರೇಣ್ಯನು ಶಿವಪ್ಪನಾಯಕನು ಎಂಬರ್ಥವನ್ನು ಕವಿಯು—

ಪರಿವಹಿಯಂ ನಿಲಿಸಿದನಾ
ದೊರೆತನ್ನಯ ಮೇಲಣಾಣೆ ಘೋಷಣೆಯಿಂದಂ
ಪರವಸ್ತುವನೊಯ್ದಡಗಿದ
**ನರಿಯಂ** ಪಿಡಿತರಿಸಿ ಶಾಸ್ತಿಯಂ ಮಾಡಿಸಿದಂ

ಇಂತೆಂದು ಹೇಳಿ, ಕವಿಯು ಆ ರಾಜನನ್ನು ತನ್ನ ಮುಕ್ತಕಂಠದಿಂದ ಹೀಗೆಂದು ಹೊಗಳಿದ್ದಾನೆ.

ಪಲವುಕ್ತಿಗಳಿಂದೇಂ ರಿಪು
ಕುಲಭೈರವ ಶಿವನೃಪಾಲಗೆಣೆಯಹ ನೃಪರೀ
ಕಲಿಯುಗದೊಳಿಲ್ಲಮವನಿಪ
ಕುಲಕಂ ತಾಂ ತಿಲಕನೆನಿಸಿ ರಾರಾಜಿಸಿದಂ

## ಅಧ್ಯಾಯ ೫ "ಶಿವಪ್ಪನಾಯಕನ ಶಿಸ್ತು"

ಕೆಳದಿ, ಇಕ್ಕೇರಿ ಅಥವ ಬಿದನೂರು ಸಂಸ್ಥಾನವನ್ನು ಆಳಿದ ಹದಿನೇಳು ಮಂದಿ ಅರಸರಲ್ಲಿ ನಮ್ಮ ಕಥಾನಾಯಕನೇ ಸರ್ವಶ್ರೇಷ್ಠನು. ಈತನ ಕಾಲದಲ್ಲಿ ಆ ರಾಜ್ಯವು ವಿಸ್ತರಿಸಿದಷ್ಟು ಮತ್ತಾರ ಕಾಲದಲ್ಲೂ ವಿಸ್ತರಿಸಿರಲಿಲ್ಲ. ಪಶ್ಚಿಮಕ್ಕೆ ಅರಬ್ಬೀಸಮುದ್ರ ತೀರದಲ್ಲಿ ಉತ್ತರಕ್ಕೆ ಗೋಕರ್ಣದಿಂದ ದಕ್ಷಿಣಕ್ಕೆ ಕ್ಯಾಸರಗೋಡಿನವರೆಗೂ ಇರುವ ಆದ್ಯಂತ ಪ್ರಾಂತವೂ ಪೂರ್ವಕ್ಕೆ ಹಿರೇಕೆರೂರು ಸವಣೂರು ಹರಪನಹಳ್ಳಿ ಪ್ರಾಂತಗಳೂ, ದಾವಣಗೆರೆ ಹರಿಹರ ಪ್ರಾಂತಗಳೂ ಹೊಳಲಕೆರೆ ಬೀರೂರು ಅರಸೀಕೆರೆ ಹೊಳೆನರಸೀಪುರ ಮುಂತಾದ ಪ್ರಾಂತಗಳೂ ಈ ರಾಜನ ಆಧಿಪತ್ಯಕ್ಕೆ ಸೇರಿದ್ದುವು. ರಾಜ್ಯವು ಉತ್ತರ ದಕ್ಷಿಣ ೧೨೦ರಿಂದ ೧೫೦ ಮೈಲೂ, ಪೂರ್ವ ಪಶ್ಚಿಮ ೮೦ರಿಂದ ೧೦೦ ಮೈಲುಗಳವರೆಗೂ ವ್ಯಾಪಿಸಿತ್ತು. ಒಟ್ಟು ರಾಜ್ಯವು ೧೦೦೦೦ ಚದರಮೈಲಿಯಿಂದ ೧೫೦೦೦ ಚದರಮೈಲಿಗಳವರೆಗೆ ವಿಸ್ತರಿಸಲ್ಪಟ್ಟಿತ್ತು. ಇಷ್ಟು ದೊಡ್ಡ ರಾಜ್ಯವನ್ನು ಸ್ವಭುಜಬಲಪರಾಕ್ರಮದಿಂದ ಆರ್ಜಿಸಿದ ಈ ರಾಜವರೇಣ್ಯನು, ರಾಜ್ಯದ ಅಂತರ್ಬಹಿಃ ಶತ್ರುಗಳನ್ನು ತನ್ನ ದರ್ಪದಿಂದ ಅಡಗಿಸಿ ರಾಜ್ಯದಲ್ಲಿ ಶಾಂತಿಸುಖಸಮಾಧಾನಗಳನ್ನು ಸ್ಥಾಪಿಸಿದ್ದನು. ತನ್ನ ರಾಜ್ಯಕ್ಕೆ ಚತುರ್ಗಡಿಗಳನ್ನು ವಿಂಗಡಿಸಿ ಪೂರ್ವಕ್ಕೆ ಚಿತ್ರದುರ್ಗದ ಪಾಳಯಪಟ್ಟು, ಪಶ್ಚಿಮಕ್ಕೆ ಅರಬ್ಬೀ ಸಮುದ್ರ, ಉತ್ತರಕ್ಕೆ ವಿಜಾಪುರ ಪ್ರಾಂತ ಮತ್ತು ಮರಾಟಿಯವರ ಸೀಮೆ, ದಕ್ಷಿಣಕ್ಕೆ ಮೈಸೂರರಸರ ಸೀಮೆಯು ಶ್ರೀರಂಗಪಟ್ಟಣ ಮುಂತಾದ ಪ್ರಾಂತಗಳು ಮತ್ತು ಮಲಬಾರು, ಹೀಗೆ ಮೇರೆಯನ್ನು ಏರ್ಪಡಿಸಿ, ಈ ಮಧ್ಯೆ ಇರತಕ್ಕ ಸೀಮೆಯು ಬಿದನೂರು ಸಂಸ್ಥಾನವೆಂದು ನಿಷ್ಕರ್ಷೆ ಮಾಡಿದನು. ರಾಜ್ಯವು ಹಿಂದೆ ಇದ್ದುದಕ್ಕಿಂತಲೂ ಹತ್ತು ಪಾಲಷ್ಟು ವಿಸ್ತರಿಸಿತ್ತು. ಪಶ್ಚಿಮ ಸಮುದ್ರತೀರದ ಗೋಕರ್ಣ, ಹೊನ್ನಾವರ, ಭಟ್ಕಳ, ಕುಂದಾಪುರ, ಉಡುಪಿ, ಮಂಗಳೂರು, ಕಾಸರಗೋಡು ಮುಂತಾದ ರೇವುಪಟ್ಟಣಗಳ ಮೂಲಕ ಅಪಾರವಾದ ವ್ಯಾಪಾರ ನಡೆದು ದೇಶದಲ್ಲ ವಿಶೇಷವಾದ ಜಾಗೃತಿಯುಂಟಾಯಿತು. ಒಳರಾಜ್ಯದಲ್ಲೂ ಹಲವು ಸ್ಥಳಗಳು ವ್ಯಾಪಾರದ ಕೇಂದ್ರಸ್ಥಾನಗಳಾದುವು.

ದೇಶದಲ್ಲೆಲ್ಲ ವ್ಯಾಪಾರಾದಿಗಳ ಸೌಕರ್ಯಕ್ಕಾಗಿ ರಸ್ತೆಗಳೂ ಸೇತುವೆಗಳೂ ಸಾಲುಮರಗಳೂ ಪರಸ್ಥಳೀಕರಿಗೆ ಛತ್ರ ಮಂಟಪ ಮುಂತಾದ ವಿಶ್ರಾಂತಿ ಸ್ಥಳಗಳೂ ಕಲ್ಪಿಸಲ್ಪಟ್ಟುವು. ದೇಶದಲ್ಲಿ ಎಲ್ಲಿ ನೋಡಿದರೂ ನವಜಾಗ್ರತಿಯುಂಟಾದಂತೆ ಕಳಕಳಿಸತೊಡಗಿತು. ಇಷ್ಟು ಕೆಲಸಗಳು ನಡೆಯಲು ರಾಜನಿಗೆ ಅಪಾರ ದ್ರವ್ಯ ಸಹಾಯದ ಆವಶ್ಯಕತೆಯುಂಟಾಯಿತು. ಆ ಕಾಲದ ಮುಖ್ಯವಾದ ರಾಜಾದಾಯವೆಂದರೆ ಭೂಕಂದಾಯವೇ! ಭೂಕಂದಾಯವು ಕಡಮೆಯಾಗಿ ರಾಜ್ಯದ ವೆಚ್ಚವು ಹೆಚ್ಚಾಯಿತೆಂದರೆ ರಾಜ್ಯಾಂಗದವರು, ಬೇರೆ ಬೇರೆ ಹೆಸರಿನಿಂದ ನಾನಾ ಬಗೆಯ ಕಂದಾಯಗಳನ್ನು ಹೇರಿ ಜನರಿಂದ ವಸೂಲ್ಮಾಡಿ ಆದಾಯಕ್ಕೂ ಖರ್ಚಿಗೂ ಸಮಮಾಡುವ ಪದ್ಧತಿಯುಂಟಲ್ಲವೆ? ಆದರೆ ಇದರಿಂದ ಪ್ರಜೆಗಳಲ್ಲಿ ಅಶಾಂತತೆಯು ಹುಟ್ಟಿ ಹಬ್ಬಲು ಅವಕಾಶವಾಗುವುದು. ಅಶಾಂತ ಪ್ರಜೆಗಳಿಂದ ಕೂಡಿದ ಯಾವ ರಾಜ್ಯವು ತಾನೇ ಶಾಶ್ವತವಾಗಿ ಉಳಿದೀತು! ಪ್ರಾಜ್ಞನಾದ ಶಿವಪ್ಪನಾಯಕನು ಈ ಮರ್ಮವನ್ನು ತಿಳಿದು, ನಮ್ಮ ದೇಶಕ್ಕೆ ಅತಿ ಮುಖ್ಯ ವೃತ್ತಿಯಾದ ಭೂ ವ್ಯವಸಾಯವನ್ನು ಉತ್ತಮಗೊಳಿಸುವುದರ ಮೂಲಕವೇ ರಾಜ್ಯದ ಸಂಪತ್ತನ್ನೂ ರಾಜಾದಾಯವನ್ನೂ ಹೆಚ್ಚಿಸಬೇಕೆಂದು ಸಂಕಲ್ಪಿಸಿ ವ್ಯವಸಾಯಕ್ಕೆ ಯೋಗ್ಯವೆಂದು ತೋರಿದ ಯಾವ ಭೂ ಪ್ರದೇಶವೂ ಬಂಜರಾಗಿರದೆ ಸಾಗುವಳಿಗೆ ಬರುವಂತೆ ಪ್ರಯತ್ನ ನಡೆಸಿದನು. ಒಡನೆ ಆವರೆಗೆ ಕೇವಲ ಅವ್ಯವಸ್ಥ ಸ್ಥಿತಿಯಲ್ಲಿದ್ದ ಭೂ ಕಂದಾಯದ ದರವನ್ನು ನಿಗದಿಮಾಡಬೇಕಾದುದು ಅತ್ಯಾವಶ್ಯಕವೆನ್ನಿಸಿತು. ಶಿವಪ್ಪನಾಯಕನು ಭೂ ಕಂದಾಯದ ಸಿಸ್ತು, ಅಡಕೆ ಹಾಲತ್ತು, ಕಂದಾಯ ವಸೂಲಿಗಾಗಿ ಮಾಡಿದ ನಿಬಂಧನೆಗಳು ಇವು ಸರ್ವೋತ್ಕೃಷ್ಟವಾದುವೆಂದು ಈಗಲೂ ಮೆಚ್ಚಿಕೊಳ್ಳಲ್ಪಟ್ಟಿವೆ. ರೈತರಿಗೆ ವಿಶೇಷ ಕಿರುಕುಳವಿಲ್ಲದೆ, ರಾಜ್ಯಾಂಗಕ್ಕೆ ವಿಶೇಷ ಕಷ್ಟವಿಲ್ಲದೆ, ನಡೆಯುವ ಈ ಶ್ಲಾಘ್ಯವಾದ ಕಾರ್ಯಕ್ರಮವನ್ನು ಏರ್ಪಡಿಸಿದ ಆತನ ಕೌಶಲ್ಯವು ಕೊಂಡಾಡಲ್ಪಡತಕ್ಕುದು. ಶಿವಪ್ಪನಾಯಕನು ಭೂ ಕಂದಾಯವನ್ನು ನಿಷ್ಕರ್ಷಿಸುವುದಕ್ಕಾಗಿ ಭೂಮಿಯನ್ನು ಈ ಕೆಳಗೆ ಕಂಡಂತೆ ಐದು ಬಗೆಯಾಗಿ ವಿಂಗಡಿಸಿದನು.

೧. ಮರಳು ಮಿಶ್ರವಾದ ಎರೇ ಮಣ್ಣು-ಉತ್ತಮ.

೨. ಎತ್ತರವಾಗಿ ಬೈಲಾಗಿರುವ ಸ್ಥಳದ ಕೆಮ್ಮಣ್ಣು ಅಥವ ಮಿಶ್ರಮಣ್ಣು-ಮಧ್ಯಮ.

೩. ನೀರಿನ ಚಿಲುಮೆಯಿರುವ ಕರಿ ಅಥವ ಶ್ಯಾಮಲ ವರ್ಣದ ಮರಳು ಮಿಶ್ರವಾದ ಮಣ್ಣು-ಕನಿಷ್ಟ.

೪. ತೇವವಿಲ್ಲದ, ಮಿಟ್ಟೆ ಸ್ಥಳದಲ್ಲಿರುವ ಗಟ್ಟಿಯಾದ ಎಟ್ಟೆ ಭೂಮಿ. -ಅಧಮ.

೫. ನೀರಿನ ಮಟ್ಟದ ಮೇಲಿದ್ದು, ಬಿಸಿ ಮರಳು ಮುಂತಾದ ಲಕ್ಷಣದಿಂದ ಕೂಡಿದ ಊಸಮಂಡಲ ಪ್ರದೇಶ - ಅಧಮಾಧಮ.

ಸಮಗ್ರ ಭೂ ಪ್ರದೇಶವು ಈ ಐದು ತರಗತಿಗಳಿಗೆ ಒಳಪಟ್ಟಿರುವುದೆಂದು ನಿರ್ಣಯಿಸಿದ ತರುವಾಯ ಪ್ರತಿ ಗ್ರಾಮದಲ್ಲೂ ಈ ಐದು ತರಗತಿಗಳಿಗೆ ಸೇರಿದ ಒಂದೇ ಆಳತೆಯ ಪ್ರದೇಶಗಳನ್ನು ವಿಂಗಡಿಸಿಕೊಂಡು ಅವನ್ನು ಅರಸನಿಗಾಗಿ ಸರ್ಕಾರದವರೇ ಖುದ್ದು ವ್ಯವಸಾಯ ಮಾಡಿಸಿ, ಆಯಾ ತರಗತಿಯ ಭೂಮಿಗೆ ಹಾಕುವ ಬೀಜ, ಸಾಗುವಳಿಗೆ ತಗುಲಿದ ಖರ್ಚು, ಬೆಳೆಯಾದ ದವಸ, ಅದರ ಬೆಲೆ ಈ ಎಲ್ಲಕ್ಕೂ ಗೊತ್ತಾದ ಲೆಕ್ಕವನ್ನಿಟ್ಟು, ಆ ಉತ್ಪನ್ನ ಮತ್ತು ಅದರ ಬೆಲೆ ಇದನ್ನು ಐದು ವರ್ಷದ ಸರಾಸರಿ ಲೆಕ್ಕ ನೋಡಿ, ೫೦ ಸೇರಿನ ಒಂದು ಖಂಡುಗಕ್ಕೆ ಒಂದು ಹಣವೆಂದು ಬೆಲೆ ನಿಗದಿಮಾಡಿ, ಹಾಗೆ ಶೇಖರವಾದ ಒಟ್ಟು ಉತ್ಪತ್ತಿಯಲ್ಲಿ ಸರ್ಕಾರಕ್ಕೆ ಮೂರರಲ್ಲಿ ಒಂದಂಶವು ಸೇರತಕ್ಕದ್ದು ಎಂದು ನಿಗದಿ ಮಾಡಿದನು. ಈ ಐದು ತರಗತಿಯ ಭೂಮಿಗೂ, ಅಲ್ಲಲ್ಲಿಯ ಸ್ವಾಭಾವಿಕ ಭೂಗುಣಕ್ಕನುಸಾರವಾಗಿ ಹೆಚ್ಚಿನ ದರ ಮತ್ತು ಕಮ್ಮಿಯ ದರವೂ ನಿಗದಿ ಮಾಡಲ್ಪಟ್ಟಿತು.

ಖುಷ್ಕಿ ಮತ್ತು ತರೀ ಪೈರುಗಳಿಗೆ ಸಂಬಂಧಪಟ್ಟಂತೆ ಮೇಲ್ಕಂಡ ರೀತಿಯಲ್ಲಿ ಕಂದಾಯ ವಸೂಲಾತಿಯ ದರವನ್ನು ಏರ್ಪಡಿಸಿದ ಶಿವಪ್ಪನಾಯಕನು, ಬಾಗಾಯಿತು ಅಥವ ತೋಟದ ವ್ಯವಸಾಯವನ್ನೂ ಮಾನಸಿಕ ಮಾಡಿರಲಿಲ್ಲ. ಶಿವಪ್ಪನಾಯಕನ ರಾಜ್ಯವೆಲ್ಲ ಪೂರ್ತಿಯಾಗಿ ಮಲೆನಾಡು ಪ್ರಾಂತವಾಗಿ, ಅಲ್ಲಿ ಅಡಕೆ ಏಲಕ್ಕಿ ಮೆಣಸು ಮುಂತಾದುವುಗಳ ಬೆಳೆವಣಿ

ಗೆಯೇ ಹೆಚ್ಚಾಗಿತ್ತು. ಮುಖ್ಯವಾದ ಅಡಕೆ ವ್ಯವಸಾಯವು ಸರಕಾರಕ್ಕೂ ಪ್ರಜೆಗಳಿಗೂ ವಿಶೇಷ ಲಾಭಕರವಾದುದಾಗಿ ಕಂಡುಬಂದಿದ್ದರೂ, ಅದೊಂದು ವ್ಯವಸ್ಥಿತ ಪದ್ಧತಿಯಿಂದ ನಡೆಯುದಿದ್ದುದರಿಂದ ರೈತನಿಗೆ ಕಷ್ಟಕ್ಕೆ ತಕ್ಕಂತೆ ಬರಬೇಕಾದಷ್ಟು ಆದಾಯವೂ, ಸರ್ಕಾರಕ್ಕೆ ತಕ್ಕಷ್ಟು ಸುಂಕವೂ ಬಾರದೆ ಉಭಯತಾಪಿ ನಷ್ಟವುಂಟಾಗುತ್ತಿತ್ತು. ಕಷ್ಟಪಟ್ಟು ಬೆಳೆ ಮಾಡುವ ರೈತನ ನಾಲ್ಕರಷ್ಟು ಆದಾಯವು ಇಲ್ಲಿಂದಲ್ಲಿಗೆ ಸಾಗಿಸಿ ವ್ಯಾಪಾರ ಮಾಡುವ ವರ್ತಕನಿಗೆ ದೊರತು ಅವನು ಪುಷ್ಟನಾಗುತ್ತಿದ್ದನು. ಚತುರನಾದ ಶಿವಪ್ಪನಾಯಕನು ಈ ಸೂಕ್ಷ್ಮವನ್ನು ಗ್ರಹಿಸಿ, ಅಡಕೆ ತೋಟಕ್ಕೆ ಕಂದಾಯ ನಿಷ್ಕರ್ಷೆ ಮಾಡುವ ಒಂದು ಪದ್ಧತಿಯನ್ನು ಸೃಷ್ಟಿಸಿದನು. ಇಕ್ಕೇರಿಯಲ್ಲಿ ಅಘೋರೇಶ್ವರ ದೇವಾಲಯಕ್ಕೆ ಹತ್ತಿಹೋಗಲು ಕಟ್ಟಿಸಿರುವ ಮೆಟ್ಟಲಿನ ಉದ್ದವನ್ನೇ ಆಧಾರವಾಗಿಟ್ಟುಕೊಂಡು ಒಂದು ಮರದಿಂದ ಮತ್ತೊಂದು ಮರಕ್ಕೆ ೧ಲವರೆ ಅಡಿ ದೂರವಿರಬೇಕೆಂದೂ ಇಂತಹ ಅಳತೆಯಲ್ಲಿ ೧೦೦೦ ಮರಗಳಿರುವ ಪ್ರದೇಶದ ಆದಾಯ, ವ್ಯವಸಾಯಕ್ಕೆ ತಗಲುವ ವೆಚ್ಚ ಮುಂತಾದುವುಗಳನ್ನು ಮೇಲ್ಕಂಡಂತೆ ಐದು ವರ್ಷದ ಸರಾಸರಿಯಮೇಲೆ ನಿರ್ಣಯಿಸಿ ಆ ಲೆಕ್ಕದಮೇಲೆ ಗೊತ್ತಾಗಿ ಸರ್ಕಾರಕ್ಕೆ ಸಲ್ಲತಕ್ಕದು ಇಷ್ಟು ಅಂಶವೆಂದು ನಿರ್ಣಯಿಸಿದನು. ಥೊರೆಯು ಕಂದಾಯವನ್ನು ಪ್ರಜಾವರ್ಗದಮೇಲೆ ಹೇರುವುದಕ್ಕೆ ಪೂರ್ವದಲ್ಲಿ ಪ್ರತಿಯೊಂದು ಪೈರನ್ನೂ ತನ್ನ ಸಮಕ್ಷಮ ತನ್ನ ಸ್ವಂತ ಭೂಮಿಯಲ್ಲಿ ಬೆಳೆಯಿಸಿ, ಅದರ ಹೆಚ್ಚು ಕಡಮೆಗಳನ್ನು ಸಾಕ್ಷಾತ್ತಾಗಿ ಪರಾಮರ್ಶಿಸಿ ನ್ಯಾಯವೆಂದು ಸಮ್ಮತವಾದಷ್ಟನ್ನೇ ವಿಧಿಸುತ್ತಿದ್ದನಲ್ಲದೆ ಅನ್ಯಥಾ ಇಲ್ಲ. ಆತನು ಏರ್ಪಡಿಸಿದ ಕಾಲದಲ್ಲಿ ಅದು ಮೊದಲು ಸೊರಬ, ಶಿಕಾರಿಪುರ, ಶಿವಮೊಗ್ಗ, ಹೊನ್ನಾಳಿ, ತರೀಕೆರೆ ಈ ತಾಲ್ಲೂಕುಗಳಲ್ಲಿ ಪ್ರಚಾರಕ್ಕೆ ಬಂದು, ತರುವಾಯ ಇತರ ಸ್ಥಳಗಳಿಗೆ ಹರಡಿತು. ರೈತ ಜನರ ಕಷ್ಟಸುಖಗಳನ್ನು ಮನಸ್ಸಿಗೆ ತಂದುಕೊಂಡು, ಅವರೇ ರಾಜ್ಯಕ್ಕೆ ಆಧಾರಸ್ತಂಭರೆಂಬುದನ್ನು ನಿಶ್ಚಯವಾಗಿ ನಂಬಿ, ಅವರಿಗೆ ಬೇಕಾದ ಸಕಲವಿಧ ಸೌಕರ್ಯಗಳನ್ನೂ ನ್ಯಾಯವಿರೋಧವಿಲ್ಲದೆ ಒದಗಿಸಿ ಕೊಟ್ಟಿದ್ದ ಸತ್ಪ್ರಭುವೆಂದರೆ, ಚರಿತ್ರೆಗೆ ದೃಷ್ಟಿಗೋಚರರಾಗಿರುವವರಲ್ಲಿ ನಮ್ಮ ಕಥಾನಾಯಕನೊಬ್ಬನೇ ಎಂದು ಧಾರಾಳವಾಗಿ ಹೇಳಬಹು

ದು. ನಗರ ಡಿವಿಜನ್ ಪ್ರಾಂತದಲ್ಲಿ 'ಶಿವಪ್ಪನಾಯಕನ ಸಿಸ್ತು' ಎಂಬುದು ನಿಷ್ಕರ್ಷಿತವಾದ ಯಾವುದೊಂದು ಏರ್ಪಾಡಿಗೂ ರೂಢಿನಾಮವಾಗಿ ಈಗ ಲೂ ಉಪಯೋಗಿಸಲ್ಪಡುತ್ತಿರುವ ಪದ್ಧತಿಯಿದೆ.

ಈ ವ್ಯವಹಾರದಲ್ಲಿ ಆತನು ಎಷ್ಟುಮಟ್ಟಿನ ಮೇಧಾವಿಯಾಗಿದ್ದನೆಂ ಬುದನ್ನು ತಿಳಿಯುವುದಕ್ಕೆ ಹೆಚ್ಚು ನಿದರ್ಶನಗಳೇನೂ ಆವಶ್ಯಕವಿಲ್ಲ. ಆ ತನು ಕಾಲವಾಗಿ ಹೆಚ್ಚು ಕಡಮೆ ೨೫೦ ವರ್ಷಗಳಾಗುತ್ತಾ ಬಂದುವಾದ ರೂ, ಇನ್ನೂ ಆತನು ಏರ್ಪಡಿಸಿದ ಪದ್ಧತಿಯು ತಪ್ಪೆಂದು ಹೇಳುವ ಬೇ ರೊಬ್ಬ ಚತುರ ರಾಜನೀತಿ ವಿಶಾರದನು ದೃಷ್ಟಿಗೆ ಬಾರದಿರುವುದಂತಿರಲಿ- ಈಚೆಗೆ ಬಂದಿರುವ ಬ್ರಿಟಿಷ್ ಪ್ರಭುತ್ವದ ಐರೋಪ್ಯ ಅಧಿಕಾರಿಗಳು ಸಹ ತಮ್ಮ ಸರ್ವೇ ಜಮಾಬಂದಿಗಳಲ್ಲಿ ಶಿವಪ್ಪನಾಯಕನು ಏರ್ಪಡಿಸಿದ ಸಿಸ್ತು 'ಕರಾರುವಾಕ' ಇದೆಯೆಂದು ಒಪ್ಪಿ, ಆತನ ಸಾಮರ್ಥ್ಯವನ್ನು ಮೆಚ್ಚಿ ಕೊಂಡಿದ್ದಾರೆ. ರಾಜ್ಯಾಂಗಕ್ಕೆ ದ್ರವ್ಯಾಭಾವ ತೋರಿದಾಗ, ಆತನು ನಿಗದಿ ಮಾಡಿದ ಕಂದಾಯದಮೇಲೆ ವರಹಕ್ಕೆ ಇಷ್ಟು ಎಂದು ಹೆಚ್ಚುಮಾಡಿ ಎತ್ತು ತ್ತಿದ್ದ ಪದ್ಧತಿಯು ಈಚೆಗೆ ಒಂದೆರಡುವೇಳೆ ನಡೆದುಬಂದಿದೆಯಲ್ಲದೆ, ಕಂ ದಾಯ ಪದ್ಧತಿಯನ್ನೇ ವ್ಯತ್ಯಾಸಗೊಳಿಸಿ ಹೊಸಪದ್ಧತಿಯನ್ನು ಸ್ಥಾಪಿಸುವ ಆವಶ್ಯಕತೆಯೂ-ಜಾಣ್ಮೆಯೂ ಈಚೆಗೆ ಯಾರಲ್ಲೂ ಕಂಡುಬಂದಿಲ್ಲ.

ಮಲೆನಾಡು ಪ್ರಕೃತಿ ಸೌಂದರ್ಯದ ತೌರುಮನೆ. ಅಲ್ಲಿಯ ಬೆಟ್ಟ ಗುಡ್ಡ ಪ್ರಾಂತಗಳೂ, ದಟ್ಟವಾದ ಅರಣ್ಯಪ್ರದೇಶಗಳೂ ರಾಜ್ಯಾಂಗಕ್ಕೆ ಹಲವು ಬಗೆಯಲ್ಲಿ ಲಾಭಕರವಾದುವೆನ್ನಿಸಿವೆ. ಅಲ್ಲಿಯ ಸ್ಥಲ ಜಲಸಮೃ ದ್ಧಿಯು ಇತರ ಪ್ರಾಂತಗಳವರಿಗೆ ಮೋಹಜನಕವಾದುದು-ಅಸೂಯಾಜನಕ ವಾದುದು. ಅಲ್ಲಿಯ ವ್ಯವಸಾಯವೂ ವ್ಯಾಪಾರವೂ ಎಷ್ಟುಮಟ್ಟಿಗೆ ಅಭಿವೃ ದ್ಧಿಗೆ ಬರಬಹುದು, ಆ ಪ್ರಾಂತ್ಯದ ಹಳ್ಳಿಗಾಡೂ, ಊರುಪಟ್ಟಣಗಳೂ ಎಷ್ಟುಮಟ್ಟಿಗೆ ಬಲಿತು ಬೆಳೆಯಬಹುದು ಎಂಬುದು, ಆ ಪ್ರಾಂತ್ಯದಲ್ಲಿ ಹುಟ್ಟಿ ಬೆಳೆದು ದೇಶದೇಶಾಂತರಗಳವರ ಗಮನವನ್ನೂ ತನ್ನೆಡೆಗೆ ಆಕರ್ಷಿ ಸಿದ್ದ ನಮ್ಮ ಮಲೆನಾಡು ಸಾಮ್ರಾಜ್ಯದ ಚರಿತ್ರೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದವರಿಗೆ ಸ್ಪಷ್ಟವಾಗದಿರದು. ಬಯಲು ಸೀಮೆಯ ಒಣಕಲು ಪ್ರಾಂತಗಳಲ್ಲಿ ಬಹು ಕಷ್ಟದಿಂದ ಬೆಳೆವ ಎರಡು ರಾಗಿಯ-ಜೋಳದ ಕಾಳು

ಗಳ ಆದಾಯವನ್ನು, ಕೇವಲ ಅತ್ಯಲ್ಪ ಶ್ರಮೆಯಿಂದ ಬೆಳೆಯಲಿರುವ ಅಡಕೆ, ಬಾಳೆ, ತೆಂಗು, ಏಲಕ್ಕಿ, ಮೆಣಸು, ಕಾಫಿ, ಕಬ್ಬು, ಬತ್ತ ಮುಂತಾದ ಮಲೆನಾಡಿನ ಮಹಾ ಲಾಭಕರವಾದ ಬೆಳೆಗಳಿಂದ ಪ್ರಾಪ್ತವಾಗುವ ಆದಾಯವೊಂದಿಗೆ ಹೋಲಿಸುವುದಾದರೆ, ಪ್ರಕೃತಿದೇವತೆಯು ಮಲೆನಾಡು ಪ್ರಾಂತವನ್ನು ಎಷ್ಟುಮಟ್ಟಿನ ಕೃಪಾದೃಷ್ಟಿಯಿಂದ ಅವಲೋಕಿಸಿ, ತನ್ನ ಭಂಡಾರವನ್ನೇ ಅಲ್ಲಿ ನೆಲೆಗೊಳಿಸಿರುವಳೋ ಎಂದು ಹೇಳಬಹುದಾಗಿದೆ. ಇಂತಹ ವಿಸ್ತಾರವಾದ ಪ್ರದೇಶದಲ್ಲಿ ಕಾಲಾಂತರದಿಂದ ಕಾರಣಾಂತರದಿಂದ ಪ್ರಾಪ್ತವಾಗಿರುವ ಅನಾರೋಗ್ಯವನ್ನು, ಉಪಲಬ್ಧವಾಗಿರುವ ವಿಜ್ಞಾನಶಾಸ್ತ್ರ ಸಹಾಯದಿಂದ ಹೋಗಲಾಡಿಸಿ ಜನಗಳಲ್ಲಿ ವಿದ್ಯೆ, ವ್ಯವಹಾರಜ್ಞಾನ, ಹೊರ ಪ್ರಾಂತಗಳವರೊಂದಿಗೆ ಬಳಕೆ, ಹಲವು ಬಗೆಯ ಅಭಿವೃದ್ಧಿಮಾರ್ಗಗಳ ಪರಿಚಯ ಮುಂತಾದುವುಗಳ ಬೀಜಗಳನ್ನು ಬಿತ್ತಿ ತನ್ಮೂಲಕ ಜಾಗೃತಿಯನ್ನುಂಟುಮಾಡುವುದಾದರೆ, ಮಲೆನಾಡು ಕಳೆಗೊಂಡು ಬೆಳೆಯಲಾರದೆ- ರಾಜ್ಯಾಂಗದ ಭಂಡಾರವನ್ನು ಬೆಳೆಯಿಸಲಾರದೆ? ಒಂದು ಸಾಮ್ರಾಜ್ಯವನ್ನೇ ಸೃಷ್ಟಿಸಿ, ಸ್ಥಾಪಿಸಿ, ಪಾಲಿಸಿ, ಜಗತ್ತಿನಲ್ಲಿ ಎರಡೂವರೆ ಶತಮಾನಗಳಕಾಲ ಬಾಳಿಸಿದಂತಹ ಪ್ರಜ್ಞೆಯು ಯಾವ ಪ್ರಾಂತದ ಜನಸಮುದಾಯದಲ್ಲಿ ಬೀಜರೂಪವಾಗಿ ನೆಲೆಸಿದೆಯೋ ಅಂತಹ ಪ್ರಜಾವರ್ಗದ ಮನಸ್ಸಮುದ್ರದಮೇಲೆ ಕಾಲಕರ್ಮ ಸಂಯೋಗದಿಂದ ಮುಸುಕಿರುವ ಕೊಳೆಧೂಳುಗಳನ್ನು ಆಚೆಗೆ ತಳ್ಳಿದರೆ, ಅವರಿಂದ ನೆರವೇರದಿರುವ ಕಾರ್ಯವಾವುದು? ಅವರಿಗೆ, ತಮ್ಮ ಪ್ರಾಂತದಲ್ಲಿ ಪೂರ್ವದಲ್ಲಿದ್ದು ಕಳೆಗೊಂಡ ವೈಭವಪೂರ್ಣ ಸಾಮ್ರಾಜ್ಯದ ಪರಿಚಯವನ್ನು ತಂದಿತ್ತು, ಪುನಃ ಆ ಪ್ರಾಂತವನ್ನು ಅಷ್ಟುಮಟ್ಟಿನ ಅಭಿವೃದ್ಧಿಗೆ ತರುವುದು ಸಾಧ್ಯ ಎಂದು ಮನಗಾಣಿಸಿದರೆ, ಇಂದಿನ ಮಲೆನಾಡು ಪುನಃ ಅಷ್ಟುಮಾತ್ರವೇ ಅಲ್ಲ-ಆಧುನಿಕ ಅಭಿವೃದ್ಧಿ ಸಾಧನಗಳ ಸಹಾಯದಿಂದ ಅದಕ್ಕೆ ಹತ್ತರಷ್ಟು ಅಭಿವೃದ್ಧಿಗೆ ಬರಲಾರದೆ? ಸರ್ಕಾರದವರು ಮಲೆನಾಡಿನ ಈಗಿನ ಅವನತಿಯ ಕಾರಣಗಳನ್ನು ಸೂಕ್ಷ್ಮದೃಷ್ಟಿಯಿಂದ ಗಮನಿಸಿ, ಅಭಿವೃದ್ಧಿಯ ಸಾಧನಗಳನ್ನು ಯುಕ್ತರೀತಿಯಲ್ಲಿ, ಉಪಯೋಗಿಸಿ ಪ್ರಯತ್ನಿಸುವರಾದರೆ-ಆ ಪ್ರಾಂತದಲ್ಲಿ ವಾಸಿಸಿರುವ, ವಿದ್ಯಾವಂತರೂ ಧನವಂತರೂ ತಮ್ಮ ಪ್ರಾಂತಾಭಿವೃದ್ಧಿಯಲ್ಲಿ ನಿಶ್ಚಯವಾದ ಉದ್ದೇಶಗಳ

ನ್ನಿಟ್ಟುಕೊಂಡು ನಿಸ್ವಾರ್ಥತೆಯಿಂದ ಪ್ರಯತ್ನಗಳನ್ನು ನಡೆಸುವರಾದರೆ ಮಲೆನಾಡು ಕಳೆಗೊಂಡು ಬಲಿತು ಬೆಳೆದು, ಇಂತಹ ನಾಲ್ಕು ಸಾಮ್ರಾಜ್ಯಗಳನ್ನಾದರೂ ಪೋಷಿಸಲು ಶಕ್ತವಾಗಲಾರದೆ ?

ಶಿವಪ್ಪನಾಯಕನು ಸ್ವಯಂ ಧೀರನು, ಯುದ್ಧ ವಿದ್ಯೆಯನ್ನು ಚೆನ್ನಾಗಿ ಅರಿತು, ಸಮಯ ಬಂದಂತೆ ಸಾಮ ದಾನಭೇದ ದಂಡೋಪಾಯಗಳನ್ನು ಉಪಯೋಗಿಸಿ ಶತ್ರುಗಳನ್ನು ಗೆಲ್ಲುವ ಸಾಮರ್ಥ್ಯವನ್ನು ಗಳಿಸಿದ್ದನು. ಈತನು ಪ್ರಸಿದ್ಧನಾಗಿ ಬಿದನೂರು ಸಂಸ್ಥಾನವನ್ನು ಆಳಿಕೊಂಡಿದ್ದವೇಳೆಯಲ್ಲಿ, ವಿಜಾಪುರ ಸಂಸ್ಥಾನದ ಸುಲ್ತಾನರಲ್ಲದೆ ಮತ್ತಾರೂ ಈತನಮೇಲೆ ಶಸ್ತ್ರಧಾರಣ ಮಾಡುವಂತಹ ಪ್ರಬಲ ರಾಜರಿರಲಿಲ್ಲ. ಈತನು ಕೇವಲ ಒಬ್ಬ ಪಾಳಯಗಾರನಲ್ಲ. ಪಾಳಯಗಾರನು ಒಂದು ಕೋಟೆಯಲ್ಲಡಗಿದ್ದು ಸುತ್ತಲಿನ ನಾಲ್ಕೆಂಟು ಗ್ರಾಮಗಳನ್ನು ಕೊಳ್ಳೆಗೊಂಡು ಜೀವಿಸುವ ಅಲ್ಪಚೇತಸ್ಕನು ! ಶಿವಪ್ಪನಾಯಕನು, ಹಲ ಕೆಲವು ರಾಜ್ಯಗಳನ್ನು ಜೈಸಿ, ಕೋಟೆಕೊತ್ತಲುಗಳನ್ನು ಕಟ್ಟಿ, ಯುದ್ಧರಂಗದಲ್ಲಿ ಪ್ರಬಲ ಶತ್ರುಗಳಿಗೆದುರಾಗಿ ಸೈನ್ಯವನ್ನು ನಡೆಯಿಸಿ, ಸ್ವತಃ ಹೋರಾಡಿ ಅನೇಕ ಯುದ್ಧಗಳಲ್ಲಿ ಜಯಸಂಪಾದನೆ ಮಾಡಿದ ವೀರಶಿರೋಮಣಿಯು. ಯುಕ್ತಕಾಲವೂ ಅನುಕೂಲ್ಯವೂ ಒದಗಿದ್ದಲ್ಲಿ ವಿಜಯನಗರಕ್ಕೆ ಸಮಾನವಾದಂತಹ ಒಂದು ಚಕ್ರಾಧಿಪತ್ಯವನ್ನೇ ಸ್ಥಾಪಿಸಿ ನಡೆಯಿಸಲು ಶಕ್ತನಾಗಿದ್ದ ಆ ರಾಜವರೇಣ್ಯನನ್ನು ಪಾಳಯಗಾರನೆಂದು ಸಂಬೋಧಿಸುವುದು ಮಹದಪಚಾರವು. ಮೇಲಾಗಿ ಆತನು ಏರ್ಪಡಿಸಿದ ಕಂದಾಯದ ಸಿಸ್ತು, ಮಹಾಪ್ರತಿಭಾಶಾಲಿಗಳಾದ ರಾಜ ನೀತಿಜ್ಞರನ್ನೂ ತಲೆದೂಗಿಸುವಂತಿದ್ದು, ಈಗಲೂ ಬದಲಾಯಿಸಲು ಅಸಾಧ್ಯವೆನ್ನಿಸುವಷ್ಟು ಉತ್ಕೃಷ್ಟವಾದುದೆನ್ನಿಸಿದೆ. ಇಂತಹ ಪ್ರತಿಭಾವಂತನೂ ರಾಜನೀತಿಜ್ಞನೂ ಆಗಿದ್ದರೂ, ಈ ರಾಜನು ಲೇಶವೂ ಗರ್ವಾಂಧನಾಗದೆ, ದುರಾಚಾರಿಯಾಗಿರದೆ ದೈವಭಕ್ತನೂ, ಗುರು ದೇವತಾ ವಿಧೇಯನೂ, ನಮ್ರನೂ ಆಗಿ ಸಕಲರಿಂದಲೂ ವಂದ್ಯನಾಗಿದ್ದನು.



## ಅಂತ್ಯದೆಸೆ

ವಿಜಯನಗರದರಸರ ವಂಶೀಕನಾದ ಶ್ರೀರಂಗರಾಜನಿಗೆ ಶಕ್ಕರೆಪಟ್ಟಣದಲ್ಲಿ ರಾಜ್ಯವನ್ನಿತ್ತು ನಿಲ್ಲಿಸಿದ ಪ್ರಸ್ತಾಪವನ್ನು ಹಿಂದೊಂದುವೇಳೆ, ಹೇಳಿದೆಯಲ್ಲವೆ? ಆತನಿಗಾಗಿ ಶ್ರೀರಂಗಪಟ್ಟಣವನ್ನೂ ಅದಕ್ಕೆ ವಳಿತವಾದ ಪ್ರಾಂತಗಳನ್ನೂ ಜಯಿಸಿಕೊಟ್ಟು, ಖಿಲವಾಗಿ ಹೋದ ಆ ಮಹಾಸಾಮ್ರಾಜ್ಯವನ್ನು ಪುನಃ ಸ್ಥಾಪನೆ ಮಾಡಬೇಕೆಂಬ ಅಪೇಕ್ಷೆಯು ನಾಯಕನ ಮನಸ್ಸನ್ನು ವಿಶೇಷ ರೀತಿಯಿಂದ ಆಕ್ರಮಿಸಿದ್ದಿತು. ಹೀಗಿರಲು, ೧೬೭೦ನೆಯ ವಿಕಾರಿ ಸಂವತ್ಸರದಲ್ಲಿ ಮತ್ತೊಮ್ಮೆ ತನಗೆ ಅಧೀನರಾಗಿದ್ದ ಸೋದೆ, ಬಿಳಿಗಿ, ತರೀಕೆರೆ ಮುಂತಾದ ಪ್ರಾಂತಗಳ ದೊರೆಗಳ ಸಹಾಯದಿಂದ ವಿಶೇಷ ಸೈನ್ಯವನ್ನು ಕೂಡಿಸಿ, ತನ್ನ ಸೇನೆಯನ್ನೂ ಜೊತೆಗೆ ತೆಗೆದುಕೊಂಡು ಮಹಾ ಪ್ರಯತ್ನದಿಂದ ಈ ಬಾರಿ ಶ್ರೀರಂಗಪಟ್ಟಣವನ್ನು ಜಯಿಸಿಯೇ ಬಿಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಯಾಣ ಮಾಡಿದನು. ಮಾರ್ಗಮಧ್ಯದಲ್ಲಿ ಶ್ರೀರಂಗರಾಯನು ಸಂಧಿಸಿ, ವಿಶೇಷವಾಗಿ ಉಪಚರಿಸಿ, ಬೆಲೆಯುಳ್ಳ ವಸ್ತ್ರಾಭರಣಗಳನ್ನು ಬಹುಮಾನವಾಗಿತ್ತು ಗೌರವಿಸಿದನು. ಎಲ್ಲಾ ಸೇನೆಯನ್ನು ನಡೆಯಿಸಿಕೊಂಡು ಶ್ರೀರಂಗಪಟ್ಟಣದ ಬಳಿಗೇ ನಡೆದು, ನಾಯಕನು ಕಾವೇರೀ ನದಿಗೆ ಸೇತುವೆಯನ್ನು ಕಟ್ಟಿಸಿ, ಪಟ್ಟಣದ ಸಮೀಪದಲ್ಲಿ ಬೀಡುಬಿಟ್ಟು, ಕೋಟೆಯನ್ನು ಮುತ್ತಿದನು. ಈ ಅಪಾರ ಸೈನ್ಯದೆದುರಿಗೆ ಪಟ್ಟಣದವರ ಸೈನ್ಯದ ಆಟವು ನಡೆಯಲಾರದೆಂದು ತೋರಲು, ಆಗ ರಾಜ್ಯವಾಳುತ್ತಿದ್ದ ದೊಡ್ಡದೇವರಾಜ ಒಡೆಯರು ವಿಜಾಪುರದ ನವಾಬನ ಸಹಾಯವನ್ನು ಯಾಚಿಸಿದರು. ನವಾಬನು ಆ ಮನವಿಯನ್ನು ಲಾಲಿಸಿ, ಬಸಲೂಲ್‌ಖಾನನೆಂಬುವನೊಡನೆ ಸಹಾಯಕ್ಕಾಗಿ ಸೈನ್ಯವನ್ನು ಕಳುಹಿಸಿರಲು, ರಾಜತಂತ್ರವಿಶಾರದನಾದ ಶಿವಪ್ಪನಾಯಕನು ಖಾನನು ಅವರಿಗೆ ಸಹಾಯಕನಾಗದಂತೆ ಸಂಧಾನ ನಡೆಸಿದನು. ಈ ಸಂಗತಿಯು ತಿಳಿಯಲು ಮೈಸೂರ ಸೈನ್ಯದವರು ಧೃತಿಗೆಟ್ಟು ಆ ಪ್ರಬಲ ಶತ್ರುವನ್ನು ಹಿಂದಕ್ಕೋಡಿಸುವ ಉಪಾಯ ತೋರದೆ, ಕೋಟೆಗೆ ಮುತ್ತಿಗೆಹಾಕಿದ್ದ ಗುರಿಕಾರರನ್ನು ಸ್ವಾಧೀನಗೊಳಿಸಿಕೊಂಡು, ಶಿವಪ್ಪನಾಯಕನಿಗೆ ಅಭಿಚಾರಕಪ್ರಕ್ರಿಯೆಯ

ನ್ನು (ಮಾಟಾಮಾಡಿಸುವಿಕೆ) ಮಾಡಿಸಿದರೆಂದು ಹೇಳಲ್ಪಟ್ಟಿದೆ. ಅದರಿಂದ ದೇಹಾಲಸ್ಯವನ್ನು ಹೊಂದಿದ ವೇಣುಪುರದರಸನು, ಬಹುದೂರದ ಆ ಪರ ಸ್ಥಳದಲ್ಲಿ ಆ ಸ್ಥಿತಿಯಲ್ಲಿ ನಿಲ್ಲುವುದು ಅಪಾಯವೆಂದೆಣಿಸಿ, ಶೀಘ್ರವಾಗಿ ಹಿಂದಿರುಗಿ ರಾಜಧಾನಿಯನ್ನು ಸೇರಿದನು. ಆ ದೇಹಾಲಸ್ಯವೇ ಕಾರಣವಾಗಿ, ರೋಗವು ಅಧಿಕರಿಸಿ, ೧೬೬೦ರಲ್ಲಿ ದೈವಾಧೀನನಾದನು. ಇಕ್ಕೇರೀ ಸಂಸ್ಥಾನಕ್ಕೆ ಸೇರಿದವರು ಮೈಸೂರರಸರನ್ನೂ, ಆ ಪ್ರಾಂತದವರನ್ನೂ ಮಾಯಾವಿಗಳು - ಮಾಯವಾದಿಗಳು ಎಂದು ಕರೆವ ಪದ್ಧತಿ ಮೊದಲಿನಿಂದಲೂ ಇದ್ದಂತೆ 'ಕೆಳದಿ ನೃಪವಿಜಯ'ವೇ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿದೆ. ಶಿವಪ್ಪನಾಯಕನ ಮರಣ ಕಾರಣವು ಮೇಲ್ಕಂಡಂತೆ ಇದ್ದುದೇ ನಿಶ್ಚಯವಿದ್ದಲ್ಲಿ ಅವರು ಇಟ್ಟು ಕರೆದ ಆ ಹೆಸರು ತಪ್ಪಲ್ಲವೆನ್ನಬಹುದು. ರಾಜಾಧಿರಾಜನೆನ್ನಿಸಿದ ಆ ಪ್ರಭುವು, ಯುದ್ಧರಂಗದಲ್ಲಿ ಹೋರಾಡುತ್ತಾ ಮಡಿದು ವೀರಸ್ವರ್ಗವನ್ನು ಹೊಂದುವುದು ಯುಕ್ತವಾಗಿದ್ದರೂ, ದುರ್ಯೋಗವಶವಾಗಿ ಇಂತು ಮನೆಯಲ್ಲಿ ಮಲಗಿ ನರಳಿ ಮೃತನಾಗುವ ಪರಿಸ್ಥಿತಿಯೊದಗಿದುದು ಶೋಚನೀಯ!

---

## ಉ ಪ ಸಂ ಹಾ ರ

ಕೆಳದಿಯಲ್ಲಿ ಪ್ರಾರಂಭವಾಗಿ, ಇಕ್ಕೇರಿಗೆ ಬಂದು ಅಭಿವೃದ್ಧಿಯಾಗಿ, ನಮ್ಮ ಕಥಾನಾಯಕನ ಕಾಲದಲ್ಲಿ ಬಿದರೂರಲ್ಲಿ (ವೇಣುಪುರ) ಮಹಾ ಪ್ರತಾಪಶಾಲಿಯಾಗಿ ಉಜ್ಜೀವಿಸಿದ ಇಕ್ಕೇರೀ ಅರಸರ ವಂಶವು, ನಮ್ಮ ಕಥಾನಾಯಕನ ತರುವಾಯ ಸರಿಯಾಗಿ ಒಂದು ನೂರು ವರ್ಷಕಾಲ ಬಿದರೂರು ರಾಜಧಾನಿಯಲ್ಲೇ ಆಧಿಪತ್ಯಮಾಡಿ ೧೭೬೩ನೆಯ ಸಂವತ್ಸರದಲ್ಲಿ ಅಂತ್ಯವಾಯಿತು. ಶಿವಪ್ಪನಾಯಕನ ತರುವಾಯ ಆತನ ತಮ್ಮ ಕಿರಿಯ ವೆಂಕಟಪ್ಪನಾಯಕನು ಪಟ್ಟವೇರಿದನು. ಈತನನ್ನು ಶಿವಪ್ಪನಾಯಕನ ಮಗ ಭದ್ರಪ್ಪನಾಯಕನು ಕೊಲ್ಲಿಸಿ ತಾನು ಪಟ್ಟವೇರಿದನು. ಇವನ ತರುವಾಯ ಹಿರಿಯ ಸೋಮಶೇಖರನಾಯಕ, ಚೆನ್ನಮ್ಮಾಜಿ, ಹಿರಿಯ ಬಸಪ್ಪನಾಯಕ,

ಸೋಮಶೇಖರನಾಯಕ, ಬಸವಪ್ಪನಾಯಕ, ಚೆನ್ನಬಸವಪ್ಪನಾಯಕ. ಎಂಬುವರೂ ತರುವಾಯ ಸೋಮಶೇಖರನಾಯಕನೆಂಬಾತನೂ ಕ್ರಮವಾಗಿ ರಾಜ್ಯಕ್ಕೆ ಬಂದರು. ಈ ಕೊನೆಯ ಸೋಮಶೇಖರನಾಯಕನು ಪಟ್ಟಕ್ಕೆ ಬಂದಿದ್ದಾಗ, ಇವನ ದತ್ತು ತಾಯಿ ರಾಣೀ ವೀರಮ್ಮಾಜಿಯು, ಅವನು ಅಲ್ಪವಯಸ್ಕನೆಂಬ ಕಾರಣದಮೇಲೆ ತಾನೇ ರಾಜ್ಯಭಾರ ಮಾಡುತ್ತಿದ್ದಳು.

ವಿಶೇಷ ಐಶ್ವರ್ಯಸಂಪನ್ನವಾಗಿದ್ದ ಬಿದನೂರು ಸಂಸ್ಥಾನವನ್ನು ಅಪಹರಿಸಬೇಕೆಂಬ ಆಪೇಕ್ಷೆಯು ಸುತ್ತುಮುತ್ತಲಿನ ಶಕ್ತರಾದ ರಾಜರಿಗೆಲ್ಲಾ ಹುಟ್ಟಿತ್ತು. ಅವರಲ್ಲೆಲ್ಲಾ ಮೈಸೂರಿನ ಸರ್ವಾಧಿಕಾರಿಯಾಗಿದ್ದ ಹೈದರನಿಗೇ ಅದರ ಪ್ರಾಪ್ತಿಯುಂಟಾಯಿತು. ಹೈದರನು, ಬಿದನೂರು ರಾಜಧಾನಿಯಲ್ಲಿ ರಾಜನು ಬಾಲಕನಾಗಿದ್ದು, ರಾಜ್ಯದ ಆಡಳಿತವು ಒಬ್ಬ ಸುಖಲೋಲುಪಳಾದ ಸ್ತ್ರೀಮಾತ್ರಳಾದ ವೀರಮ್ಮಾಜಿಯೆಂಬ ರಾಣಿಯ ವಶದಲ್ಲಿದ್ದ ಆ ಸಂಧಿಯನ್ನು ಸಾಧಿಸಿ, ಅಪಾರ ಸೈನ್ಯದೊಂದಿಗೆ ಬಂದು ರಾಜಧಾನಿಯನ್ನು ಮುತ್ತಿ ಸಂಧಿಗೆ ಒಪ್ಪದೆ ಕೋಟೆಯನ್ನು ಕೆಡಹಿ ಸುಮಾರು ಎರಡು ಕೋಟಿ ಇಕ್ಕೇರೀ ವರಹಗಳು ಎಂದರೆ ಹನ್ನೆರಡು ಸಹಸ್ರ ರೂಪಾಯಿಗಳಷ್ಟು ದ್ರವ್ಯವನ್ನೂ, ಮುತ್ತು ರತ್ನ ವಜ್ರ ವೈಡೂರ್ಯಗಳನ್ನೂ, ಅಪರಿಮಿತ ಬೆಲೆಯ ವಿವಿಧ ಆಭರಣ ವಸ್ತ್ರತೊಡವೆಗಳನ್ನೂ ಹೊತ್ತೊಯ್ದನು. ರಾಜಧಾನಿಯೂ ಅರಮನೆಯೂ, ಬೆಂಕಿಯಿಂದಲೂ ಕೊಳ್ಳೆ ಸುಲಿಗೆಗಳಿಂದಲೂ ನಾಶವಾಯಿತು-ನಿರ್ನಾಮವಾಯಿತು.

ನಳ ಮಾಂಧಾತ ಯುಧಿಷ್ಠಿರಾದಿ ಚಕ್ರವರ್ತಿಗಳು ಆಳಿದ ಸಾಮ್ರಾಜ್ಯವೂ ಇಂದು ನಾಮಾವಶೇಷವಾಗಿದೆಯಲ್ಲವೆ ಲೋಕದಲ್ಲಿ ಯಾವುದೂ ಶಾಶ್ವತವಾಗಿರತಕ್ಕುದಲ್ಲ: ಆದರೂ, ಮನುಷ್ಯನಾಗಿ ಜನ್ಮಿಸಿದ ಪ್ರತಿಯೊಬ್ಬನೂ ಈ ಜಗನ್ನಾಟಕರಂಗದಲ್ಲಿ, ಧೈರ್ಯ ಸಾಹಸಗಳನ್ನು ಪ್ರಕಟಿಸಿ, ಸ್ವಾಭಿಮಾನ, ಆತ್ಮಗೌರವಗಳನ್ನುಂಟಾಗಿ, ತನ್ನ ಪಾಲಿನ ಕರ್ತವ್ಯವನ್ನು ತಾನು ನೆರವೇರಿಸಿ, ಲೋಕದಲ್ಲಿ ಯಶಸ್ವಿಯಾಗಿ ಉಳಿಯತಕ್ಕುದೊಂದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ನಶ್ವರವಾದ ಧನ ಪ್ರಾಣಗಳು ಎಂದಿದ್ದರೂ ಹೋಗುವುವೇ ಆದುದರಿಂದ ಶಾಶ್ವತವಾದ ಮಾನ ಕೀರ್ತಿಗಳನ್ನು ಹೊಂದಲು ಭಾರತ ಬಾಲಕರು ಶ್ರಮಿಸಲು ದೃಢಪ್ರತಿಜ್ಞರಾಗಲಿ! ನಮ್ಮ

ಕಥಾನಾಯಕರಂತಹ ಧೀರೋದಾರ ಚರಿತ್ರರ ಯಶೋಮಹಿಮೆಗಳು, ಅವರಿಗೆ ಅಂತಹ ಧ್ಯೇಯಸಾಧನೆಯಲ್ಲಿ ಸ್ಥಿರಮನಸ್ಕತೆಯನ್ನುಂಟಾಗಿ ಶ್ರಮಿಸುವಂತೆ ಪ್ರೇರಿಸಲು ಶ್ರೀವರನ ಪರಮಾನುಗ್ರಹವಾಗಲಿ.*

ತಥಾಸ್ತು.

---

*ಈ ಕಥಾರಚನೆಗೆ (1) ಲಿಂಗಣ್ಣಕವಿ ವಿರಚಿತ '**ಕೆಳದಿನೃಪವಿಜಯ**'ವೆಂಬ ಚಂಪೂಕಾವ್ಯ, (2) ದಿವಂಗತ ಶ್ರೀ ಎಂ. ಎಸ್. ಪುಟ್ಟಣ್ಣನವರಿಂದ ವಿರಚಿತವಾದ '**ಇಕ್ಕೇರೀಸಂಸ್ಥಾನದ ಚರಿತ್ರೆ**' ಮತ್ತು, ವಿಜಯನಗರದ ವಿನಾಶಾನಂತರದಲ್ಲಿ ಇಕ್ಕೇರೀಸಂಸ್ಥಾನಕ್ಕೆ ಪ್ರಧಾನ ಮಂತ್ರಿಗಳಾಗಿ ಬಂದು ಸೇರಿದ ಸುಪ್ರಸಿದ್ಧ ಚಿನ್ನಭಂಡಾರದ ನಾರ್ಣಪ್ಪನವರ ವಂಶೀಕರಾಗಿ ಸದ್ಯಃ ತೀರ್ಥಹಳ್ಳಿ, ನಿವಾಸಿಗಳಾಗಿರುವ ಶ್ರೀಮಾನ್ ಚಿನ್ನಭಂಡಾರದ ಸುಬ್ಬರಾವ್ ಬಿ. ಎ. ಯವರು ರಚಿಸಿರುವ ಅವರ '**ವಂಶಚರಿತ್ರೆ**'ಯ ಹಸ್ತಪ್ರತಿ, ಮತ್ತು ಇಕ್ಕೇರೀಸಂಸ್ಥಾನದ ನಕ್ಷೆ ಮುಂತಾದ ದಾಖಲೆಗಳು, ಇವುಗಳಿಂದ ವಿಶೇಷ ಸಹಾಯವೊದಗಿತು. ಇವುಗಳನ್ನು ಒದಗಿಸಿಕೊಟ್ಟುದಕ್ಕಾಗಿ ಮೇಲ್ಕಂಡ ಮಹನೀಯರಿಗೂ, ಇತರ ಗ್ರಂಥಕರ್ತರಿಗೂ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ.

ಸಂಪಾದಕ.

# ಸಂಬೋಧನ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಸರ್ವೇಶ್ವರನಾದ ಶ್ರೀಮನ್ನಾರಾಯಣಮೂರ್ತಿಯ ಅಪಾರಮಹಿಮೆಗಳನ್ನು ಸರ್ವದಾ ಗಾನಮಾಡುತ್ತ, ಅಮೌಲ್ಯವಾದ ಭಗವತ್ಸಂಬಂಧ ಜ್ಞಾನವನ್ನು ಅನುಗ್ರಹಿಸಿ, ಲೋಕದ ಜೀವಕೋಟಿಯನ್ನು ಸಂಸಾರವೆಂಬ ಅಂಧಕೂಪದಿಂದ ಎತ್ತಿ ಉದ್ಧರಿಸುವ ಸತ್ಕಾರ್ಯದಲ್ಲಿ ಸರ್ವದಾ ಆಸಕ್ತರಾಗಿ ಪರೋಪಕಾರನಿರತರಾಗಿ ಮೂರುಲೋಕವನ್ನೂ ಎಡೆಬಿಡದೆ ಸಂಚರಿಸುತ್ತಿರುವ ಮಹಾಮಹಿಮರಾದ ಶ್ರೀ ನಾರದ ಮಹರ್ಷಿಗಳ ಅನುಪಮ ಜೀವಿತವೃತ್ತಾಂತವನ್ನು ಇಲ್ಲಿ ಯಥಾಮತಿ ಕೊಡಬೇಕೆಂದು ಸಂಕಲ್ಪಿಸಿದ್ದೇವೆ. ಋಷಿಮೂಲ-ನದೀಮೂಲಗಳನ್ನು ಗಣಿಸಬಾರದೆಂಬ ಲೋಕವಾರ್ತೆಗೆ ಕಾರಣವೇನೆಂಬುದನ್ನು ಕುರಿತು *ಹಿಂದೆ ಒಂದೆಡೆ ವಿಚಾರಮಾಡಲಾಗಿದೆ. ನಾರದರು ಸಾಮಾನ್ಯ ಋಷಿಗಳು ಮಾತ್ರರಲ್ಲ-ದೇವರ್ಷಿ ಶ್ರೇಷ್ಠರು. ಚತುರ್ಮುಖ ಬ್ರಹ್ಮಪುತ್ರರು. ಬ್ರಹ್ಮಕುಮಾರರಾಗಿ ಜನಿಸಿದ ಈ ಮಹಾಮಹಿಮರು, ಲೇಶಮಾತ್ರವೂ ಸ್ವಪ್ರಯೋಜನಾಪೇಕ್ಷೆಯಿಲ್ಲದೆ, ಸದಾ ಲೋಕಹಿತವನ್ನೇ ಕೋರುತ್ತ, ಎಲ್ಲಿ ಯಾವ ಜೀವರು ಭಗವತ್ಪ್ರಾಪ್ತಿಗಾಗಿ ಆರ್ತರಾಗಿ ಮೊರೆಯಿಡುತ್ತಿರುವರೆಂಬುದನ್ನು ಜ್ಞಾನದೃಷ್ಟಿಯಿಂದ ಅರಿತು, ಅಪ್ರಾರ್ಥಿತರಾಗಿ ಅವರೆಡೆಗೈದಿ ಅವರಿಗೆ ಜ್ಞಾನದಾನಮಾಡಿ, ಉದ್ಧರಿಸಿದ ಉದಾಹರಣೆಗಳು ಒಂದೆರಡಲ್ಲ-ಅನೇಕವಾಗಿ ದೊರೆಯುತ್ತವೆ. ನಾರ-ಎಂದರೆ ಪರಮಾತ್ಮಸಂಬಂಧೀ ಜ್ಞಾನವನ್ನು ದ-ಎಂದರೆ ಪ್ರದಾನಮಾಡತಕ್ಕ

* ಈ ಗ್ರಂಥಮಾಲೆಯ ೧೧೬ನೆಯ 'ವಾಲ್ಮೀಕಿಮಹರ್ಷಿ'ಗಳ ಚರಿತ್ರೆಯನ್ನು ನೋಡಿ.

ವರು ಎಂಬಂತೆ ಅವರ ಪವಿತ್ರನಾಮಧೇಯವೇ ಅನ್ವರ್ಥವಾಗಿ ಅವರ ಮು ಖ್ಯೋದ್ದೇಶವೆಂತಹುದೆಂಬುವನ್ನು ಸೂಚಿಸತಕ್ಕುದಾಗಿದೆ. ಇಂತಹ ಪವಿತ್ರಾತ್ಮರ ಚರಿತ್ರ ಕಥನವು ಶುಭಪ್ರದವಾದುದೆಂಬುದರಲ್ಲಿ ಸಂದೇಹವೇನು ?

ಆದರೆ, ನಾರದರ ಈ ಅಪ್ರಾರ್ಥಿತ ಪರೋಪಕಾರವೂ, ಆರ್ತರಿಗೆ ಜ್ಞಾನದಾನಮಾಡಿ, ಅವರನ್ನು ಉದ್ಧರಿಸುವ ಮಹತ್ಕಾರ್ಯವೂ, ಜನಸಾಮಾನ್ಯದ ದೃಷ್ಟಿಪಥದಿಂದ ಮರೆಯಾಗಿದೆ ಲೋಕಕ್ಕೆ ಅವರು ತೋರುತ್ತಿರುವುದು ಬೇರೊಂದು ದೃಷ್ಟಿಯಿಂದ. ಅಜ್ಞಲೋಕವು ನಾರದ ಮಹರ್ಷಿಗಳನ್ನು ಜ್ಞಾನಪ್ರದರಾದ ಮಹಾಮಹಿಮರೆಂಬ ದೃಷ್ಟಿಯಿಂದಲ್ಲ- ಅವರನ್ನು ಕಲಹಪ್ರಿಯರು-ಎಂಬ ಕುಹಕ ದೃಷ್ಟಿಯಿಂದ ನೋಡುತ್ತದೆ. ಪರಿಶುಭ್ರವಾದ ಒಂದು ಬಿಳಿಯ ಬಟ್ಟೆಯಮೇಲೆ, ಎಲ್ಲಾದರೊಂದು ಲೇಶ ಮಾತ್ರ ಕಪ್ಪು ಮಚ್ಚೆಯಿದ್ದರೆ, ಅದನ್ನು ನೋಡಿದೊಡನೆಯೇ ಮೊದಲಿಗೇ ಆ ಕಪ್ಪು ಮಚ್ಚೆಯೇ ಹೇಗೆ ದೃಷ್ಟಿಗೋಚರವಾಗುವುದೋ ಹಾಗೆಯೇ, ವಿಚಾರವಿಹೀನರಾದ ಲೋಕಸಾಮಾನ್ಯರಿಗೆ, ನಮ್ಮ ಕಥಾನಾಯಕರು ಲೋಕಕ್ಷೇಮಕ್ಕಾಗಿ ಆಗಾಗ ಆಚರಿಸಿರುವ ಕೆಲಕೆಲವು ಕಾರ್ಯಗಳು *ಕಲಹ ಕಾರಕಗಳೆಂದು ಗೋಚರವಾಗುತ್ತವೆ ! ಆದರೆ ರಾಜಮಾರ್ಗದಲ್ಲಿ ಗಂಭೀರವಾಗಿ ಪ್ರಯಾಣಮಾಡುತ್ತಿರುವ ಮಹಾಗಜವು, ತನ್ನನ್ನು ಕಂಡು ಬೊಗಳಿ ಕೊಳ್ಳುತ್ತಿರುವ ನಾಯಿಯ ಕಡೆಗೆ ತಿರುಗಿಯಾದರೂ ನೋಡದೆ, ತನ್ನ ಮಾರ್ಗದಲ್ಲಿ ತಾನು ಹೇಗೆ ಹೋಗುತ್ತಿರುವುದೋ ಹಾಗೆಯೇ ಲೋಕಕ್ಷೇಮಾಕಾಂಕ್ಷಿಗಳಾದ ಮಹಾಮಹಿಮರು ಲೋಕದ ದೂಷಣೆ ಭೂಷಣೆಗಳ ಕಡೆಗೆ ಲಕ್ಷ್ಯಕೊಡದೆ ತಮ್ಮ ಸದುದ್ದೇಶದಲ್ಲೇ ಸರ್ವದಾ ಆಸಕ್ತರಾಗಿರಬೇಕೆಂಬುದನ್ನು ಈ ಮಹಾಮಹಿಮರ ಚರಿತ್ರೆಯು ಸೂಚಿಸುತ್ತದೆ.

ಲೋಕದಲ್ಲಿ ಕೆಲವರಿಗೆ ಜ್ಞಾನವು ಬೇರೆ-ಭಕ್ತಿಯು ಬೇರೆ ಎಂಬೊಂದು ಭಾವನೆಯುಂಟು. ಭಕ್ತಿಯು ಕೇವಲ ಅಲ್ಪ ಚೇತಸ್ಕರೂ ಪ್ರೌಢಪಾಂಡಿತ್ಯವಿಲ್ಲದ ಅಪ್ರಬುದ್ಧರೂ ಅನುಸರಿಸುವ ಮಾರ್ಗವೆಂಬುದು ಅವರಮಾತ್ರ

---

* ಈ ಗ್ರಂಥಮಾಲೆಯ ೪೫ನೆಯ ಕುಸುಮ 'ಪುರಂದರದಾಸರು' ಪುಸ್ತಕವನ್ನು ನೋಡಿ.

ಶಾಸ್ತ್ರಜ್ಞಾನದಿಂದ ತಲೆತಿರುಗಿರುವ ಅವಿವೇಕಿಗಳು ಹೇಳಿಕೊಳ್ಳುವುದುಂಟು! ಆದರೆ ಅದು ತಪ್ಪು ಅಭಿಪ್ರಾಯವೆಂಬುದನ್ನು ಶ್ರೀ ನಾರದ ಮಹರ್ಷಿಗಳ ಕೃತಿಯು ಸ್ಪಷ್ಟವಾಗಿ ತೋರಿಸುತ್ತದೆ. ಪರಮಾತ್ಮಪ್ರಾಪ್ತಿಗಾಗಿ ಯೋಗ್ಯಜೀವರಿಗೆ - ಹುಡುಕಿಕೊಂಡು ಹೋಗಿ ಜ್ಞಾನದಾನಮಾಡುವ ಈ ಮಹಾಮುನಿವರರು ಭಕ್ತಿಪಂಥಕ್ಕೆ ಆಚಾರ್ಯರೋ ಎಂಬಂತಿದ್ದು-ಭಕ್ತಿಸೂಕ್ತಗಳನ್ನೂ ರಚಿಸಿರುವರು. ಇವರಿಂದ ಲೋಕೋದ್ಧಾರಕ್ಕಾಗಿ ರಚಿಸಲ್ಪಟ್ಟ ಆ ಅಮೌಲ್ಯ ಗ್ರಂಥವು-**ನಾರದ ಭಕ್ತಿಸೂತ್ರ** ಎಂಬ ಪವಿತ್ರನಾಮಧೇಯದಿಂದ ಪ್ರಕಟವಾಗಿದೆ. ಪರಮಾತ್ಮನಲ್ಲಿ ಮಾಹಾತ್ಮ್ಯ ಜ್ಞಾನಪೂರ್ವಕನಾದ ಅವಿರಳ ಸುದೃಢ-ನಿರ್ವ್ಯಾಜ ಭಕ್ತಿಯುಂಟಾದರಲ್ಲದೆ ಜನನ ಮರಣ ದುಃಖದಿಂದ ಬಿಡುಗಡೆ ಹೊಂದಲು ಮಾರ್ಗವೇ ಇಲ್ಲ. ಭಕ್ತಿಯಿಂದ ಕೂಡಿರದ ಶಾಸ್ತ್ರಜ್ಞಾನವು ಮನುಷ್ಯನಲ್ಲಿ ಒಣಶಾಠ್ಯವನ್ನೂ ಅಹಂಕಾರ ದುರಭಿಮಾನಗಳನ್ನೂ ವೃದ್ಧಿಗೊಳಿಸಿ ಆತ್ಮನಾಶಕ ಸಾಮಗ್ರಿಯಾಗಿ ಪರಿಣಮಿಸುವುದು; ಜ್ಞಾನರಹಿತವಾದ ಭಕ್ತಿಯು ಕೇವಲ ಮೂಢನಂಬಿಕೆಯಾಗಿ ಪರಿಣಮಿಸಿ ಸಂಪೂರ್ಣ ಆನಂದ ಪ್ರದಾಯಕವಾಗಲಾರದು. ಆದುದರಿಂದ ಮೋಕ್ಷಮಾರ್ಗದಲ್ಲಿ ಅಡಿಯಿಡಬೇಕೆಂದು ಅಪೇಕ್ಷಿಸುವವನು ಮಹಾಮಹಿಮರಾದ ಭಗವದ್ಭಕ್ತವರ್ಯರಿಂದ ವಿರಚಿತಗಳಾಗಿರುವ ಅನೇಕ ಸದ್ಗ್ರಂಥಗಳ ಶ್ರವಣ ಮನನಾದಿಗಳಿಂದ ಆ ಪರಾತ್ಪರ ವಸ್ತುವಿನ-ಶ್ರೀ ವಾಸುದೇವನ ಪಾದಾರವಿಂದಗಳ ಅಪಾರ ಮಹಿಮೆಗಳ ಜ್ಞಾನವನ್ನು ಸಂಪಾದಿಸಿಕೊಂಡು, ಅವುಗಳ ನಿರಂತರ ಧ್ಯಾನದಿಂದ ಏಕಾಗ್ರ ಚಿತ್ತವನ್ನು ಪಡೆದು ನಿಷ್ಕಲ ಭಕ್ತಿ ವೈರಾಗ್ಯಗಳನ್ನು ಗಳಿಸಿಕೊಂಡು ಜನ್ಮಸಾರ್ಥಕಮಾಡಿಕೊಳ್ಳಲು ಈ ಮಾನವ ಜನ್ಮವೇ ಅನುಕೂಲವಾದುದು. ಅಪೂರ್ವವಾಗಿ ದೊರೆತಿರುವ ಇಂತಹ ಅಮೌಲ್ಯ ಸುಸಂಧಿಯನ್ನು ಸದುಪಯೋಗಪಡಿಸಿಕೊಳ್ಳುವುದು ವಿವೇಕಿಗಳ ಕರ್ತವ್ಯವು.

ಮಹನೀಯ ವ್ಯಕ್ತಿಗಳ ಜೀವನ ಚರಿತ್ರೆಗಳಿಗಾಗಿಯೇ ಜನ್ಮವೆತ್ತಿ ಶ್ರಮಿಸುತ್ತಿರುವ ಗ್ರಂಥಮಾಲೆಗೆ ಕನ್ನಡಿಗ ಮಹಾಜನರ ಸ್ವಹಸ್ತ-ಪರಹಸ್ತ

ಸಹಾಯ ಸಹಾನುಭೂತಿಗಳೊದಗಿ, ಅದರ ಕಾರ್ಯವು ನಿರ್ವಿಘ್ನವಾಗಿ ಚಿರಕಾಲ ನಡೆದು ಬರುವಂತೆ ಭಗವದನುಗ್ರಹವಾಗಲೆಂದು ಪ್ರಾರ್ಥಿಸು ತ್ತೇವೆ.

ಬೆಂಗಳೂರು
ತಾ. ೨೩-೧-೩೨

ಇತಿ ಸುಜನವಿಧೇಯ,
**ಯಂ. ರಾಮರಾವ್.**

---

ಶ್ಲೋಕ:— ಆರಾಧಿತೋ ಯದಿ ಹರಿಸ್ತಪಸಾ ತತಃ ಕಿಂ ।
ನಾರಾಧಿತೋ ಯದಿ ಹರಿಸ್ತಪಸಾ ತತಃ ಕಿಂ ।
ಅಂತರ್ಬಹಿರ್ಯದಿ ಹರಿಸ್ತಪಸಾ ತತಃ ಕಿಂ ।
ನಾಂತರ್ಬಹಿರ್ಯದಿ ಹರಿಸ್ತಪಸಾ ತತಃ ಕಿಂ ।

ತಾ. ಭಗವಂತನನ್ನು ಆರಾಧಿಸುವಾತನಿಗೆ ತಪಸ್ಸು ಏಕೆ? ಭಗವಂತನನ್ನು ಆರಾಧಿಸದವನಿಗೆ ತಪಸ್ಸಿನಿಂದ ಪ್ರಯೋಜನವೇನು? ಒಳಗೂ ಹೊರಗೂ ಭಗವಂತನನ್ನು ನೋಡುವವನಿಗೆ ತಪಸ್ಸು ಏಕೆ? ಒಳಗೂ ಹೊರಗೂ ಭಗವಂತನನ್ನು ನೋಡದವನಿಗೆ ತಪಸ್ಸಿನಿಂದ ಪ್ರಯೋಜನವೇನು?

---

ಸೂತ್ರ, ೧೯. ನಾರದಸ್ತು ತದರ್ಪಿತಾಖಿಲಾಚಾರತಾ
ತದ್ವಿಸ್ಮರಣೇ ಪರಮ ವ್ಯಾಕುಲತೇತಿ ।

ತಾ. ಸಮಸ್ತ ಕಾರ್ಯಗಳನ್ನೂ, ಭಗವಂತನಲ್ಲಿ ಸಮರ್ಪಿಸಿ ಅವನನ್ನು ಮರೆಯುವಿಕೆಯಲ್ಲಿ ಕೇವಲ ಸಂಕಟಪಡುವುದು ಭಕ್ತಿ ಎಂದು ನಾರದರ ಅಭಿಮತವು.

'ನಾರದ ಭಕ್ತಿಸೂತ್ರ'

---

|| ಶ್ರೀರಾಮಸಹಾಯಃ ||

ದೇವರ್ಷಿ ಶ್ರೇಷ್ಠರಾದ

# ನಾರದ ಮಹಾಮುನಿಗಳು

---

## ಅಧ್ಯಾಯ ೧ "ಪೂರ್ವ ಬ್ರಹ್ಮಕಲ್ಪದಲ್ಲಿ"

**ನಮ್ಮ** ಮಾತೃಭೂಮಿಯಾದ ಈ ಭರತಖಂಡವು, ಮಹರ್ಷಿಗಳಿಗೂ ಬ್ರಹ್ಮವೇತ್ತರಿಗೂ ತೌರುಮನೆಯೆಂದು ಸುಪ್ರಸಿದ್ಧವಾದುದು. ಅನಾದಿ ಕಾಲದಿಂದಲೂ ಇಲ್ಲಿಯ ವಾತಾವರಣವು ಮಹರ್ಷಿಗಳ, ಭಕ್ತಾದಿಗಳ ಸಾನ್ನಿಧ್ಯದಿಂದ ಪವಿತ್ರಗೊಂಡುದಾದುದರಿಂದ, ಈ ದೇಶವಾಸಿಗಳ ಮನಃಪ್ರವೃತ್ತಿಯು ಪಾರಲೌಕಿಕ ವಿಚಾರಗಳಲ್ಲೂ ಭಕ್ತಿಜ್ಞಾನ ವೈರಾಗ್ಯಗಳಲ್ಲೂ ಪ್ರವಹಿಸುವಷ್ಟು ಶೀಘ್ರವಾಗಿ ಇತರ ಲೌಕಿಕ ವಿಚಾರಗಳಲ್ಲಿ ಪ್ರವಹಿಸಲಾರದು. ಎಂದರೆ-ಇತರ ವಿಚಾರಗಳಲ್ಲಿ ಈ ದೇಶೀಯರು ಅಜ್ಞರು, ಬೋಧಿಸಲ್ಪಟ್ಟರೂ ತಿಳಿಯಕೊಳ್ಳಲಾರದಷ್ಟು ಮಂದಬುದ್ಧಿಗಳು ಎಂದು ಅರ್ಥವಲ್ಲ. ದೇವರು ಧರ್ಮ ಪಾಪಪುಣ್ಯಗಳು ಭಕ್ತಿ ಜ್ಞಾನ ವೈರಾಗ್ಯಾದಿ ಪಾರಲೌಕಿಕ ವಿಚಾರಗಳೆಂದರೆ ಈ ದೇಶೀಯರು ಮನಸೋಲುವಷ್ಟುಮಟ್ಟಿಗೆ ಇತರ ದೇಶಗಳವರಿಗೆ ಅವು ರುಚಿಸವು. ಲೋಕದ ಕೆಲವು ದೇಶಗಳಲ್ಲಿ ರೇಷ್ಮೆಯ ವ್ಯವಸಾಯ, ಮತ್ತೆ ಕೆಲವುಗಳಲ್ಲಿ ಕಾಫಿಯ ವ್ಯವಸಾಯ, ರಬ್ಬರಿನ ವ್ಯವಸಾಯ, ಪೈನಿನ ವ್ಯವಸಾಯ, ಹೂ ಹಣ್ಣು ಕಾಯಿಪಲ್ಯಗಳ ವ್ಯವಸಾಯ ಇವು ನಡೆಯಬಹುದಲ್ಲವೆ! ಕೆಲವು ದೇಶಗಳು ಯಂತ್ರಗಳ ತಯಾರಿಗೆ, ಮತ್ತೆ ಕೆಲವು ವಸ್ತ್ರಗಳ ತಯಾರಿಗೆ, ಬೇರೆ ಕೆಲವು ಕುಶಲಕಲೆಗಳಿಗೆ ಪ್ರಸಿದ್ಧವಾಗಿರಬಹುದಲ್ಲವೆ? ನಮ್ಮ ದೇಶವು ತನ್ನ ಅಮೌಲ್ಯ ಭೂಗುಣದಿಂದ ಮೇಲ್ಕಂಡ ಎಲ್ಲಾ ಬಗೆಯ ವ್ಯವಸಾಯಗಳಿಗೂ, ಕಲೆ ಕುಶಲವಿದ್ಯೆಗಳಿಗೂ ಪ್ರಸಿದ್ಧವಾ

ಗಿರುವುದು ಮಾತ್ರವಲ್ಲ-ಮೇಲ್ಕಂಡ ಕಾರಣದಿಂದ ಪರಿಶುದ್ಧಗೊಂಡ ವಾತಾವರಣದ ಪ್ರಭಾವದಿಂದ ಈ ದೇಶನಿವಾಸಿಗಳ ಮನಸ್ಸಿನ ವ್ಯವಸಾಯಕ್ಕೂ ಯೋಗ್ಯಕ್ಷೇತ್ರವೆನ್ನಿಸಿದೆ. ಇತರ ಯಾವ ದೇಶದಲ್ಲಿರುವವರಾಗಲೀ ತಮ್ಮ ಮನಸ್ಸಿನ ವ್ಯವಸಾಯಕ್ಕೆ ಯೋಗ್ಯ ಸಲಕರಣೆಗಳನ್ನು ಅಪೇಕ್ಷಿಸಿದಲ್ಲಿ, ಈ ಪುಣ್ಯದೇಶವನ್ನು ಮರೆಹೊಕ್ಕಲ್ಲದೆ ಬೇರೆ ಮಾರ್ಗವಿಲ್ಲ. ಇದು ಕೇವಲ ಸ್ವಾಭಿಮಾನ ಪ್ರದರ್ಶಕ ಪ್ರಲಾಪವಲ್ಲ. ಅನಾದಿಕಾಲದಿಂದ ನಡೆದು ಬಂದಿರುವ ಮತ್ತು ಈ ಆಧುನಿಕ ಕಾಲದಲ್ಲೂ ನಿದರ್ಶನಕ್ಕೆ ಬಂದಿರುವ ಅಗಣಿತ ಉದಾಹರಣೆಗಳಿಂದ ಇದನ್ನು ಸಿದ್ಧಮಾಡಬಹುದು.

'ಮನಸ್ಸಿನ ವ್ಯವಸಾಯವೆಂಬುದೂ ಒಂದುಂಟೆ!' ಎಂದು ಯಾರೂ ಆಶ್ಚರ್ಯಪಡಬೇಕಾದುದಿಲ್ಲ. ಸತ್ವರಜಸ್ತಮೋ ಗುಣಗಳಿಗೆ ವಶವಾಗಿ, ಹೊಯ್ದಾಡುತ್ತಿರುವ ಈ ಮನಸ್ಸೆಂಬ ಕ್ಷೇತ್ರವು ಕಾಮಕ್ರೋಧ ಲೋಭ ಮೋಹ ಮದಮಾತ್ಸರ್ಯಗಳೆಂಬ ಮುಳ್ಳು ಕಂಟಿಗಳು, ಕಳೆಗಳು, ಮುಂತಾದುವುಗಳಿಂದ ಆವೃತವಾಗಿ ಕಾಲಿಡಲಿಕ್ಕೂ ಸಾಧ್ಯವಿಲ್ಲದಂತೆ ಭಯಂಕರವಾಗಿರುವುದು. ಹೆಂಡತಿಮಕ್ಕಳಮೇಲಿನ ಆಸೆ, ಹಣಹೊನ್ನುಗಳಮೇಲಿನಾಸೆ, ಪಶುವೃತ್ತಿ ಮನೆಬಾಗಿಲುಗಳ ಮೇಲಿನಾಸೆ, ವಿವಿಧ ಭೋಗಗಳನ್ನು ಅನುಭವಿಸಬೇಕೆಂಬ ಆಸೆ, ಇವುಗಳೆಲ್ಲವೂ ಮನಸ್ಸೆಂಬ ಕ್ಷೇತ್ರದಲ್ಲಿರುವ ಕಳೆಗಳು. ಉಪಯೋಗ ರಹಿತವಾದ ಬಾಧಕ ವಸ್ತುಗಳು. ಇವುಗಳಿಂದ ಆತ್ಮನ ಬೆಳವಣಿಗೆ ಎಂದರೆ ಆತ್ಮನ ಕ್ಷೇಮಕ್ಕೆ ತಿಲಮಾತ್ರವೂ ಪ್ರಯೋಜನವುಂಟಾಗಲಾರದು. ಭೂಮಿಯಲ್ಲಿ ಬೆಳೆವ ಕಳೆಗಳಿಂದ ಪೈರಿಗೆ ಏನಾದರೂ ಪ್ರಯೋಜನವುಂಟೆ? ಪ್ರಯತ್ನಪೂರ್ವಕ ಭೂಮಿಯಲ್ಲಿದ್ದ ಕಳೆಯನ್ನು ಹೋಗಲಾಡಿಸಿದರಲ್ಲವೆ, ಆ ಭೂಮಿಯು ಉತ್ತಮವಾದ ಪೈರು ಬೆಳೆಯಲು ಸಿದ್ಧವಾಗಬಲ್ಲುದು! ಮನುಷ್ಯನು ತನಗೆ ಈಗಿರುವ ಸ್ಥಿತಿಗಿಂತಲೂ ಉತ್ತಮವಾದ ಒಂದು ಸ್ಥಿತಿಯು ಪ್ರಾಪ್ತವಾಗಬೇಕೆಂದು ಅಪೇಕ್ಷಿಸಿದರೆ, ಅದಕ್ಕೆ ಈ ಮನಸ್ಸಿನ ಸಹಾಯಗೊಂಡಲ್ಲದೆ ಸಾಧ್ಯವೇ ಇಲ್ಲ. ಮನಸ್ಸು ಮೇಲೆಹೇಳಿದಂತೆ ಕಾಮಕ್ರೋಧಾದಿಗಳು, ದ್ವೇಷಾಸೂಯಾದಿಗಳು, ದುರಾಸೆ ದುರ್ವ್ಯಸನಗಳು, ನಿಷ್ಪ್ರಯೋಜಕವಸ್ತುಗಳಲ್ಲಿ ಮೋಹ ಮುಂತಾದುವುಗಳಲ್ಲಿ ನಿರತವಾಗಿ

ಚಂಚಲವಾಗಿದ್ದರೆ ಅಂತಹ ಮನಸ್ಸಿನಿಂದ ಯಾವ ಮಹತ್ಕಾರ್ಯ ಮಾಡ ಲು ತಾನೆ ಸಾಧ್ಯವಾದೀತು? ಅಂತಹ ಮನಸ್ಸು, ಕಡಿವಾಣವಿಲ್ಲದ ಕುದುರೆ ಯಂತೆ ಮನಬಂದೆಡೆಗೆ ಓಡಿ ದೇಹವೆಂಬ ರಥದಲ್ಲಿ ಕುಳಿತಿರುವ ಜೀವಾತ್ಮ ನೆಂಬ ರಥಿಕನನ್ನು ಎಲ್ಲೆಂದರಲ್ಲಿ ಕೆಡಹಿ, ತಾನೂ ನಾಶವಾಗುವುದು. ಆ ದುದರಿಂದ ಅಂತಹ ಮನಸ್ಸಿಗೆ ವ್ಯವಸಾಯವು ಆವಶ್ಯಕ. ಈ ವ್ಯವಸಾಯ ದಿಂದ ಮನಸ್ಸಿನಲ್ಲಿ ವ್ಯಾಪಿಸಿರುವ ಸಕಲ ದುರ್ಗುಣಗಳೂ ದೂರವಾಗುವುವು. ಅದರ ಚಾಂಚಲ್ಯ ಸ್ವಭಾವವು ಹೋಗಿ ಸ್ಥಿರಭಾವವುಂಟಾಗುವುದು. ಅನಿ ತ್ಯವಾದ ವಸ್ತುಗಳಿಗಾಗಿ ಆಸೆಗೊಳ್ಳುವ ಕ್ಷುದ್ರಭಾವವು ಹೋಗಿ ಶಾಶ್ವತ ವಾದ ನಿರುಪಾಧಿಕವಾದ ವಸ್ತುವನ್ನು ಗಳಿಸುವಿಕೆಯಲ್ಲಿ ಅದು ಆಸಕ್ತವಾ ಗುವುದು. ಆ ಸಂದರ್ಭದಲ್ಲಿ ಅದಕ್ಕೆ ಭಗವದನುಗ್ರಹದ ಅವಲಂಬನೆಯನ್ನಿ ತ್ತು ಅದರಲ್ಲಿ ಭಗವನ್ನಾಮವೆಂಬ ಅಮೃತಮಯ ಬೀಜವನ್ನು ಬಿತ್ತಿದರೆ ಅಲ್ಲಿ ಜನನಮರಣಗಳ ಪ್ರವಾಹವನ್ನೇ ನಿಲ್ಲಿಸಿಬಿಡಲು ಸಮರ್ಥವಾದ ನಿತ್ಯಾ ನಂದವೆಂಬ ದಿವ್ಯ ಫಲವನ್ನು ಬಿಡುವ ಪೈರು ಹುಲುಸಾಗಿ ಬೆಳೆಯುವುದು. ಈ ಬಗೆಯ ಮನಸ್ಸಿನ ವ್ಯವಸಾಯದ ಪದ್ಧತಿಯನ್ನು ತಿಳಿದು, ಅನೇಕ ಸಂ ದರ್ಭಗಳಲ್ಲಿ ಪ್ರಯೋಗ ನಡೆಸಿ ಉತ್ತಮವಾದ ಫಲಪ್ರಯೋಜನಗಳನ್ನು ಹೊಂದಿದ ಪ್ರವೀಣರು ಈ ನಮ್ಮ ಮಾತೃಭೂಮಿಯಲ್ಲೇ ಅನಾದಿಕಾಲದಿಂ ದಲೂ ನೆಲೆಸಿದ್ದುದು. ತಮ್ಮ ಪ್ರಯೋಗ ಶಾಲೆಯನ್ನು ಸ್ಥಾಪಿಸಿ, ಹಲವು ಪ್ರಯೋಗಗಳನ್ನು ನಡೆಸಿದ್ದುದೂ ಇಲ್ಲಿಯೇ! ಇಂತಹ ಪ್ರವೀಣರಿಗೆಲ್ಲ ಶಿರೋಭೂಷಣಪ್ರಾಯರಾದವರು ನಮ್ಮ ಕಥಾನಾಯಕರಾದ ಶ್ರೀ ನಾರದ ಮಹರ್ಷಿಗಳು. ಇವರು ಮನಸ್ಸೆಂಬ ಕ್ಷೇತ್ರದ ವ್ಯವಸಾಯಕ್ಕಾಗಿ ಹಲವು ಕಾಲ-ದೇಶಗಳಲ್ಲಿ ಬಗೆ ಬಗೆಯ ಪ್ರಯೋಗಗಳನ್ನು ನಡೆಸಿ ವಿಚಿತ್ರ ರೀತಿಯ ಫಲಗಳನ್ನು ಪಡೆದಿದ್ದಾರೆ. ಇವರ ಪ್ರಯೋಗಕ್ಕೆ ಒಳಪಟ್ಟ ಜೀವೋತ್ತ ಮ ವ್ಯಕ್ತಿಗಳು ಜನನಮರಣಗಳೆಂಬ ಕೋಟಲೆಯನ್ನೇ ನೀಗಿಕೊಂಡು, ನಿತ್ಯಾನಂದ ಸ್ವರೂಪರಾಗಿ, ದಿವ್ಯತೇಜೋಮಯ ನಕ್ಷತ್ರಗಳಂತೆ ದೇದೀಪ್ಯ ಮಾನರಾಗಿ, ಯಶಃಕಾಯರಾಗಿ ಹೊಳೆಯುತ್ತಿದ್ದಾರೆ. ಜಗದ ಜೀವಕೋ ಟಿಯನ್ನು, ದುಃಖಮಯವಾದ ಸಂಸಾರ ಪಂಕದಿಂದ ಎತ್ತಿ, ಸುಬೋಧ ವಾದ ಹಿತವಾಕ್ಯಗಳನ್ನಾಡಿ ಅವರನ್ನು ಉದ್ಧರಿಸುವುದನ್ನೇ ಮುಖ್ಯ ವೃತ್ತಿ

ಯನ್ನಾಗಿ ಉಳ್ಳ ಶ್ರೀ ನಾರದ ಮಹರ್ಷಿಗಳ ಜೀವಿತವು, ವಿಚಿತ್ರವೂ ಅಗಾಧವೂ ಆದುದು. ಅದನ್ನು ವಾಚಕಮಹಾಶಯರು ಪಠಿಸಿ ಆನಂದಿಸಬೇಕು.

ನಾರದ ಮಹರ್ಷಿಗಳ ಜೀವಿತವು ವಿಚಿತ್ರವಾದುದು ಮಾತ್ರವಲ್ಲ - ಅಗಾಧವಾದುದು ಮಾತ್ರವಲ್ಲ. ಪ್ರಾಚೀನವಾದುದು-ಅತಿ ಪುರಾತನವಾದುದು. ಅವರು ಒಂದಾನೊಂದುವೇಳೆ ಸರಸ್ವತೀ ನದೀತೀರದಲ್ಲಿ ಚಿಂತಾಮಗ್ನರಾಗಿ ಕುಳಿತಿದ್ದ ವೇದವ್ಯಾಸರಲ್ಲಿಗೆ ಬಂದು ಪ್ರಸ್ತುತ ಸ್ವಾನ ತಮ್ಮ ಜನ್ಮವೃತ್ತಾಂತವನ್ನೇ ಹೇಳಿಕೊಂಡಿದ್ದಾರೆ. ಅವರು ಆ ಸಂದರ್ಭದಲ್ಲಿ ಬಂದು ವ್ಯಾಸರನ್ನು ಕಂಡುದಕ್ಕೂ ಲೋಕ ಸಂಗ್ರಹಣಕ್ಕೆ ಸಂಬಂಧಿಸಿದ ಒಂದು ಮಹತ್ಕಾರ್ಯ ಸಾಧನೆಯೇ ಕಾರಣವಾಗಿದ್ದಿತು. ಪರಾಶರ ಮಹರ್ಷಿಗಳ ತಪಃಫಲವಾಗಿ ಸತ್ಯವತೀ ದೇವಿಯಲ್ಲಿ ಅವತರಿಸಿದ ಶ್ರೀವೇದವ್ಯಾಸ ಮಹರ್ಷಿಗಳು, ಅಲ್ಪಚೇತಸ್ಕರೂ ಅಲ್ಪಜ್ಞರೂ ಆದ ಜಗದ ಮಾನವಕೋಟಿಯನ್ನು ನೋಡಿ ಅವರು ಅಪಾರವಾಗಿರುವ ವೇದರಾಶಿಯನ್ನು ಅರ್ಥಮಾಡಿಕೊಳ್ಳಲಾರರೆಂದು ತಿಳಿದು ಕನಿಕರದಿಂದ ಅವರ ಉದ್ಧಾರಕ್ಕಾಗಿ ವೇದಗಳನ್ನು ಋಕ್, ಯಜುಸ್, ಸಾಮ, ಅಥರ್ವಣಗಳೆಂದು ನಾಲ್ಕು ಭಾಗವಾಗಿ ವಿಂಗಡಿಸಿದರು. ಅವೂ ಬಹು ಗಹನವಾದುವೆಂದು ತೋರಲು, ಆ ವೇದಾರ್ಥಗಳನ್ನೇ ಒಳಕೊಂಡ ಹಲವು ಪುರಾಣಗಳನ್ನು ರಚಿಸಿದರು. ಸಕಲ ತತ್ವರಹಸ್ಯಗಳನ್ನೂ, ಧರ್ಮಸೂಕ್ಷ್ಮ ವಿಚಾರಗಳನ್ನೂ, ಲೋಕನೀತಿಪಾಠಗಳನ್ನೂ ಒಳಗೊಂಡು ಪಂಚಮವೇದವೋ ಎಂದು ಹೆಸರುಗೊಂಡ ಮಹಾಭಾರತವೆಂಬ ಅಗಾಧ ಗ್ರಂಥವನ್ನು ರಚನೆಮಾಡಿದರು. ಲೋಕದಲ್ಲಿನ ಸಜ್ಜನರ ಪ್ರಯೋಜನಕ್ಕಾಗಿ ಇಷ್ಟು ಕಾರ್ಯಮಾಡಿದರೂ, ಆ ಲೋಕೋಪಕಾರ ಶೀಲರಿಗೆ ಮನಸ್ಸಮಾಧಾನವಾಗಲಿಲ್ಲ. ತಾವು ಅವರಿಗೆ ಮಾಡಿದ ಅಷ್ಟು ಕಾರ್ಯವೂ ಅಪೂರ್ಣವಾದುದೆಂದೇ ಅವರ ಮನಸ್ಸಿಗೆ ಬೋಧವಾಗುತ್ತಿತ್ತು. ಇನ್ನೂ ಏನೋ ಸ್ವಲ್ಪಕಾರ್ಯವು ಅವಶ್ಯಕವಾಗಿದೆ ಎಂದು ಅವರ ಬುದ್ಧಿಗೆ ಗೋಚರವಾಗುತ್ತಿತ್ತು. ಆದರೆ ಆ ಲೋಪವಾವುದು ಎಂದು ತಿಳಿಯದಿದ್ದುದೇ ಮೇಲೆ ಹೇಳಿದ ಅವರ ಚಿಂತೆಗೆ ಕಾರಣವು. ಲೋಕಸಂಗ್ರಹಣ ಕಾರ್ಯವನ್ನೇ ಮುಖ್ಯ ಪ್ರಯೋಜನವನ್ನಾಗಿ ಉಳ್ಳ

ನಮ್ಮ ಕಥಾನಾಯಕರು, ವ್ಯಾಸರಂತಹ ಲೋಕಕ್ಷೇಮತತ್ಪರರಿಗೆ ವ್ಯಾಕುಲವುಂಟಾದ ಕಾಲದಲ್ಲಿ ಅದನ್ನು ನಿವಾರಣೆ ಮಾಡದಿರುವರೇ! ಒಡನೆ ಭಗವನ್ನಾಮ ಮಹಿಮೆಯನ್ನು ಹಾಡಿಕೊಳ್ಳುತ್ತ, ನಾರದ ಮಹರ್ಷಿಗಳು, ಅವರ ಸಮೀಪಕ್ಕೆ ಬಂದರು. ತ್ರಿಲೋಕಸಂಚಾರಿಗಳೂ ಭಗವದ್ಭಜನತತ್ಪರರೂ, ಆದ ನಾರದ ಮಹರ್ಷಿಗಳನ್ನು ಕಂಡೊಡನೆಯೇ ಶ್ರೀ ವೇದವ್ಯಾಸರು ಎದಿರೆದ್ದು, ನಮಸ್ಕರಿಸಿ ಷೋಡಶೋಪಚಾರದಿಂದ ಆದರಿಸಿ, ದಿವ್ಯ ಪೀಠವನ್ನಿತ್ತು ಕೂರಿಸಿ, ಅವರ ಅನುಜ್ಞೆಯಿಂದ ತಾವೂ ಉಚಿತಾಸನದಲ್ಲಿ ಕುಳಿತರು. ಸರ್ವಜ್ಞರಾದ ನಾರದರಿಗೆ ವ್ಯಾಸರ ವ್ಯಸನ ಕಾರಣವು ಅಗೋಚರವಾಗಬಲ್ಲುದೇ! ಉದ್ದೇಶಪೂರ್ವಕವಾಗಿಯೇ ಅಲ್ಲಿಗೆ ಬಂದಿದ್ದ ನಾರದರು, ವ್ಯಾಸರನ್ನು ಕುರಿತು – 'ಮಹರ್ಷಿಗಳೇ ನೀವು ಇದುವರೆಗೆ ವೇದಗಳನ್ನು ವಿಭಜನೆ ಮಾಡಿದಿರಿ. ಸಪ್ತಾದಶ ಪುರಾಣಗಳನ್ನು ರಚಿಸಿದಿರಿ, ಬ್ರಹ್ಮಸೂತ್ರಗಳನ್ನು ರಚನೆ ಮಾಡಿದಿರಿ, ಮಹಾಭಾರತವನ್ನೂ, ಅದರ ಅಂಗವಾಗಿ ಭಗವದ್ಗೀತೆಯೆಂಬ ಅಮೌಲ್ಯ ರತ್ನಗುಚ್ಛವನ್ನೂ ಲೋಕಕ್ಕೆ ದಾನ ಮಾಡಿದಿರಿ. ಆದರೆ ಇವೆಲ್ಲವುಗಳಲ್ಲೂ ಭಗವಂತನಾದ ಶ್ರೀಮನ್ನಾರಾಯಣನ ಮಹಿಮೆಯು ಅಂಶತ್ವೇನ ಕೀರ್ತಿಸಲ್ಪಟ್ಟಿದೆಯಲ್ಲದೆ, ಸಾಗ್ರವಾಗಿ ನಿರೂಪಿಸಲ್ಪಟ್ಟಿಲ್ಲ. ಕಲಿಯುಗವು ಬಹು ಪಾಪಭೂಯಿಷ್ಠವಾದುದು! ಕರ್ಮಾಧೀನರಾಗಿ ತೊಳಲುವ ಮಾನವ ಪ್ರಾಣಿಗಳು, ವೇದಶಾಸ್ತ್ರಗಳನ್ನೂ ಮಹಾಪುರಾಣಾದಿಗಳನ್ನೂ ಪಠಿಸಿ ತತ್ವಚಿಂತನೆ ಮಾಡಿ ತನ್ಮೂಲಕ ಮೋಕ್ಷಸಾಧನೆ ಮಾಡಿಕೊಳ್ಳಲು ಶಕ್ತರಾಗಲಾರರು. ಅಲ್ಪಮತಿಗಳೂ ಅಲ್ಪಾಯುಷಿಗಳೂ ಆದ ಕ್ಷುದ್ರ ಮಾನವರ ಉದ್ಧಾರಕ್ಕೆ ಭಗವದ್ಭಕ್ತವರ್ಯರ ಕಥಾ ರೂಪದಿಂದ ಕೇವಲ ಭಗವತ್ಕಥಾನಿರೂಪಣೆ ಮಾಡುವಂತಹ ರತ್ನ ಭಂಡಾರವನ್ನೊಂದನ್ನು ತಾವು ಸಿದ್ಧಮಾಡಿ ಲೋಕಕ್ಕೆ ದಾನ ಮಾಡಬೇಕು. ಭಗವಂತನಾದ ಶ್ರೀಮನ್ನಾರಾಯಣನು ತನ್ನ ಅನಂತಾವತಾರಗಳಲ್ಲಿ ಲೋಕಕ್ಷೇಮಕ್ಕಾಗಿ ಆಚರಿಸಿದ ಅಲೌಕಿಕ ಲೀಲೆಗಳ ಕಥನವೂ, ಭಗವನ್ಮಹಿಮಾವರ್ಣನವೂ ಮಾತ್ರವೇ ಕೀರ್ತಿಸಲ್ಪಡಬೇಕು. ಸಕಲ ತಾಪತ್ರಯ ನಿವಾರಕವೂ ಅಭಯಪ್ರದಾಯಕವೂ ಆದ ಈ ಅಮೌಲ್ಯ ದಾನವನ್ನು ಇನ್ನೂ ಮಾಡಲಿಲ್ಲವಲ್ಲಾ ಎಂಬುದೇ, ಲೋಕೋಪಕಾರನಿರತರಾದ ನಿಮ್ಮ ಮ

ನೋವ್ಯಾಕುಲಕ್ಕೂ ಕಾರಣವಾಗಿದೆ. ಸಜ್ಜನರಾದ ತಮ್ಮಂತಹ ಮಹನೀಯರು ಮಾಡುವ ಹಿತಬೋಧೆಯಿಂದ ಆಗದಿರುವ ಪ್ರಯೋಜನವಾವುದಿರುವುದು! ಜನ್ಮಾಂತರದಲ್ಲಿ ಕ್ಷುದ್ರವ್ಯಕ್ತಿಯಾಗಿದ್ದ ನಾನು ಇಂದು ಈ ರೂಪದಿಂದಲೂ, ಈ ಸ್ಥಿತಿಯಿಂದಲೂ ನಿಮ್ಮೆದುರಿಗೆ ನಿಂತಿರುವುದಕ್ಕೆ, ನನಗೆ ಸಜ್ಜನ ಸಹವಾಸದ ಸುಯೋಗವೊದಗಿದುದೇ ಮುಖ್ಯ ಕಾರಣವಾಯಿತು. ಸಜ್ಜನ ಸಹವಾಸದಿಂದ ಪಾಪಯೋನಿಸಂಭೂತನೂ ಭ್ರಷ್ಟನೂ ಆಗಿದ್ದ ಮಾನವನೂ ಸಹ ಸದ್ಗತಿಯನ್ನು ಹೊಂದಬಹುದು ಎಂಬುದಕ್ಕೆ ತನ್ನ ಜೀವಿತವೇ ಯೋಗ್ಯ ಉದಾಹರಣೆಯಾಗಿದೆ.' ಎಂದು ಸುಮ್ಮನಾದರು.

ನಾರದರಂತಹ ಪುಣ್ಯಪುರುಷರು ಜನ್ಮಾಂತರದಲ್ಲಿ ಪಾಪಯೋನಿಸಂಭೂತರಾಗಿದ್ದರೆಂದು ಕೇಳಿದೊಡನೆಯೇ ವ್ಯಾಸರಿಗೆ ಪರಮಾಶ್ಚರ್ಯವೆನ್ನಿಸಿತು. ಆ ಸಂಗತಿಯೇನೋ, ಅವರ ಜನ್ಮಾಂತರ ವೃತ್ತಾಂತವೇನೋ ತಿಳಿಯಬೇಕೆಂದು ಅವರು ಕುತೂಹಲಾವಿಷ್ಟರಾಗಿ, ವಿಶಾಲ ನೇತ್ರಗಳಿಂದ ನಾರದರನ್ನೇ ದಿಟ್ಟಿಸುತ್ತಾ ಕುಳಿತರು. ನಾರದರು - 'ವ್ಯಾಸಮಹರ್ಷಿ, ಸಜ್ಜನ ಸಹವಾಸದಿಂದ ನಾನು ಉದ್ಧೃತನಾದ ಬಗೆಯನ್ನು ತಿಳಿಯಲು ಅಪೇಕ್ಷೆಗೊಂಡಿರುವಿರಲ್ಲವೆ? ಆ ವಿಚಾರವನ್ನು ಹೇಳುತ್ತೇನೆ ಕೇಳಿ. ನನ್ನ ಪೂರ್ವ ಚರಿತ್ರೆಯೆಂದರೆ ಇಂದು ನಿನ್ನಿನ ಕಥೆಯಲ್ಲ. ಹಿಂದಿನ ಬ್ರಹ್ಮಕಲ್ಪಕ್ಕೆ ಸಂಬಂಧಿಸಿದ ವಿಚಾರವದು. ಆ ಕಲ್ಪದಲ್ಲಿ ನಾನು ದಾಸೀ ಪುತ್ರನಾಗಿ ಜನ್ಮಿಸಿದ್ದೆನು. ನಾನು ಒಬ್ಬ ಸಾಮಾನ್ಯ ದಾಸಿಯ ಉದರದಲ್ಲಿ ಜನಿಸಲು ಕಾರಣವೇನಿರಬಹುದೆಂದೂ ನಿಮಗೆ ಆಶ್ಚರ್ಯವಾಗಬಹುದಲ್ಲವೆ ಕೇಳಿ! ಹಿಂದಿನ ಮಹಾ ಕಲ್ಪದಲ್ಲಿ ನಾನು ಉಪಬರ್ಹಣನೆಂಬ ಹೆಸರಿನ ಗಂಧರ್ವನಾಗಿದ್ದೆ. ಗಂಧರ್ವರೆಲ್ಲರೂ ನನ್ನನ್ನು ವಿಶೇಷ ಗೌರವಾದರಗಳಿಂದ ತಮ್ಮ ನಾಯಕನೆಂಬಂತೆ ಕಾಣುತ್ತಿದ್ದರು. ಅಪ್ಸರಸ್ತ್ರೀಯರಂತೂ, ನನ್ನ ರೂಪು, ಯೌವನ, ಸೌಂದರ್ಯ, ಗಾಂಭೀರ್ಯ, ಮಧುರತಮ ಶಾರೀರ ಮುಂತಾದುವುಗಳಿಗೆ ಮೋಹಿತರಾಗಿ ನನ್ನ ವಿಷಯದಲ್ಲಿ ಅತಿಶಯ ಅನುರಾಗವನ್ನು ವ್ಯಕ್ತಗೊಳಿಸುತ್ತಿದ್ದರು. ಅವರ ಸೌಂದರ್ಯ ಸೌಕುಮಾರ್ಯ ನಗೆನೋಟಗಳಿಂದ ಆಕರ್ಷಿತನಾದ ನಾನಾದರೂ ಅವರ ಸಹವಾಸವನ್ನು ಬಿಟ್ಟಗಲಲೊಲ್ಲದೆ, ಸದಾ ಸ್ತ್ರೀಲೋಲನಾಗಿ ಅಂತಃಪುರದಲ್ಲೇ ಇದ್ದು

ಬಿಡುತ್ತಿದ್ದೆ. ಹೀಗಿರುವಲ್ಲಿ ಒಂದಾನೊಂದು ಸಂದರ್ಭದಲ್ಲಿ ದಕ್ಷನೇ ಮೊದಲಾದ ಪ್ರಜೇಶ್ವರರು ಒಂದು ಯಾಗಮಾಡಲುದ್ಯುಕ್ತರಾಗಿ, ತದಂಗವಾಗಿ ನಡೆಯಬೇಕಾದ ಹರಿಕಥಾ ಉಪಗಾಯನಕ್ಕಾಗಿ, ಗಂಧರ್ವರಲ್ಲೆಲ್ಲ ಸುಪ್ರಸಿದ್ಧಗಾಯಕನೆನ್ನಿಸಿದ್ದ ನನ್ನನ್ನೂ, ಕೆಲವು ಮಂದಿ ಅಪ್ಸರೆಯರನ್ನೂ ಕರೆದಿದ್ದರು. ನಾವು ಪ್ರಜೇಶ್ವರರ ಗಾನಸಭಾಕ್ಕೆ ಯೋಗ್ಯವೆನ್ನಿಸುವ ಸಕಲ ಸಾಧನಗಳಿಂದ ಕೂಡಿ ಅಲ್ಲಿಗೆ ಹೋಗಿ, ಭಗವದ್ಗುಣ ವರ್ಣನ ರೂಪವಾದ ಗಾನವನ್ನು ಸಕಲರಿಗೂ ಕರ್ಣರಸಾಯನವಾಗಿರುವಂತೆ ಹಾಡಿ ನೆರೆದ ಸಕಲ ಸಭಿಕರ ಪ್ರಶಂಸೆಗೂ ಪಾತ್ರನಾದೆ. ನಮ್ಮನ್ನು ಆಹ್ವಾನಿಸಿ ಸಂಗೀತ ಸಭೆಯನ್ನು ನೆರೆಯಿಸಿದವರು ದಕ್ಷನೇ ಮೊದಲಾದ ಪ್ರಮುಖ ಪ್ರಜೇಶ್ವರರು; ನಾನು ಗಾನ ಮಾಡುತ್ತಿದ್ದುದಾದರೋ ಶ್ರೀ ಹರಿಯ ಮಹಿಮಾ ವರ್ಣನ ರೂಪವಾದ ಕೀರ್ತನ. ಆದರೆ ಸ್ತ್ರೀಲೋಲನೂ ವಿಷಯೇಚ್ಛುವೂ ಆದ ನನಗೆ ಇವುಗಳಲ್ಲೊಂದೂ ಗಮನವಿಲ್ಲದೆ, ನಾನು ಕೇವಲ ನನ್ನ ಭುವನ ಮೋಹನ ರೂಪಕ್ಕೂ ಕರ್ಣಾಪ್ಯಾಯನವಾದ ಗಾಯನಕ್ಕೂ ಸಂಪೂರ್ಣವಾಗಿ ಆಕರ್ಷಿತರಾಗಿ ಎರಳೆಗಳಂತೆ ವಿಶಾಲವಾಗಿ ತೆರೆದ ಕಣ್ಣುಗಳಿಂದ ನನ್ನನ್ನೇ ನೋಡುತ್ತ ಕಾಮಬಾಣಪೀಡಿತರಾದುದರಿಂದ ಪರವಶರಾಗಿ ಕುಳಿತಿದ್ದ ಆ ಅಪ್ಸರೆಯರ ಕಡೆಯೇ ನೋಡುತ್ತ, ಕೇವಲ ಅವರ ಪ್ರೀತಿಗೋಸ್ಕರವಾಗಿಯೋ ಎಂಬಂತೆ ಹಾಡುತ್ತಿದ್ದೆನು. ಮಹನೀಯರು ನೆರೆದಿದ್ದ ಆ ಸಭೆಯಲ್ಲಿ ನನ್ನ ಈ ಚೇಷ್ಟೆಯು ಕ್ಷಮ್ಯವಾಗಬಹುದೇ? ಪಶು ಸಹಜವಾದ ನನ್ನ ಕುಹಕತನವು ದೃಷ್ಟಿಗೋಚರವಾದೊಡನೆಯೇ ದಕ್ಷ ಪ್ರಜೇಶ್ವರನು, ನನ್ನನ್ನು ದುರುಗುಟ್ಟಿ ನೋಡತೊಡಗಿದನು. ಆತನಿಗೆ ಮಾತ್ರವಲ್ಲ, ನನ್ನಾಹೇಯಕೃತ್ಯವು, ಆ ಯಜ್ಞಕಾರ್ಯದ ಯಾಜಮಾನ್ಯವಹಿಸಿದ್ದ ಎಲ್ಲರಿಗೂ ಅಸಹ್ಯಕರವಾಗಿ ತೋರಿತು. ಒಡನೆ ಅವರೆಲ್ಲರೂ ಸೇರಿ – ‘ಎಲಾ ಗಂಧರ್ವಾಧಮಾ, ನೀನಿರುವ ಸ್ಥಳ, ಕಾಲ, ನೀನು ಕೈಗೊಂಡಿರುವ ಕಾರ್ಯ ಈ ಒಂದರ ಪರಿಜ್ಞಾನವೂ ಇಲ್ಲದೆ ಇಂತಹ ಕ್ಷುದ್ರಕಾರ್ಯಕ್ಕೆ ಮನಗೊಟ್ಟಿಯಾದುದರಿಂದ ನೀನು, ಜ್ಞಾನ, ತೇಜಸ್ಸು, ಐಶ್ವರ್ಯ ಮುಂತಾದ ಮಹತ್ವದಸಂಪತ್ತನ್ನೂ ಗಂಧರ್ವ ಪದವಿಯನ್ನು ಕಳೆದುಕೊಂಡು, ಮನುಷ್ಯಯೋನಿಯಲ್ಲಿ ದಾಸೀ ಪುತ್ರನಾಗಿ ಜನ್ಮಿಸು’ ಎಂದು ಶಪಿಸಿದರು.

## ಅಧ್ಯಾಯ ೨ "ದಾಸೀಗರ್ಭಜನ್ಮ"

ದುರಂತವಾದ ಆ ಶಾಪವಾಕ್ಯವು ಕಿವಿಗೆಬಿದ್ದೊಡನೆಯೇ ವಿಷಯಾಂಧತೆಯಿಂದ ತಿರುಗುತ್ತಿದ್ದ ನನ್ನ ತಲೆಗೆ ಪ್ರಜ್ಞೆಬಂದಂತಾಯಿತು. ಕಣ್ಣೆದುರಿಗೆ ಮರ್ತ್ಯಲೋಕದ ಭಯಂಕರ ನೋಟವು ಚಿತ್ರಿತವಾಗಿ ನನಗೆ ಹೃದಯವೇ ಕಳಚಿಬಿದ್ದಂತಾಯಿತು. ಕೈಕಾಲುಗಳಲ್ಲಿದ್ದ ಸತ್ವವು ಭಗ್ನವಾಗಿ ಕುಂದಿದಂತಾಯಿತು. ಮೈ ನಡುಕ ಹುಟ್ಟಿತು. ಬಾಯಲ್ಲಿನ ದ್ರವವಾರಿತು. ನನಗಿದ್ದ ಮಹದುತ್ಸಾಹವು ಭಗ್ನವಾಗಿ, ಮುಖದಲ್ಲಿದ್ದ ದಿವ್ಯ ತೇಜಸ್ಸು ಲೋಪವಾಗಿ ನಾನು ಉಸಿರುವೆಣನಂತಾದೆನು. ಆ ಸಂದರ್ಭದಲ್ಲಿ ಕ್ಷಮೆಯನ್ನು ಬೇಡಿ, ನನಗೆ ಆ ಕ್ಷುದ್ರ ಜನ್ಮದಿಂದ ನಿರ್ಮೋಚನೆಯೊಂದಿಗೆ, ಹೇಗೆ ಎಂಬುದನ್ನು ಕೇಳಿಕೊಳ್ಳಬೇಕೆಂಬುದೂ ನನ್ನ ಬುದ್ಧಿಗೆ ತೋರದೆ, ನಾನು ಮಂಕುಬಡಿದಂತಾಗಿ ಶೂನ್ಯ ದೃಷ್ಟಿಯಿಂದ ನೋಡುತ್ತಾ ಸ್ತಬ್ಧನಾಗಿ ಆ ಸಭಾಸ್ಥಾನದಲ್ಲಿ ಕುಳಿತಿದ್ದೆನು. ನನ್ನಾಸ್ಥಿತಿಯು, ಆವರೆಗೇ ನನ್ನ ದೇವಯೋಗ್ಯವಾದ ಗಾಯನವನ್ನು ಕೇಳಿ ಸಂತೋಷಪಟ್ಟಿದ್ದ ಅವರಲ್ಲಿ ಕೆಲವರಿಗೆ ಮನಸ್ಸು ಕರಗುವಂತೆ ಮಾಡಿತೆಂದು ತೋರುತ್ತದೆ – ಅಯ್ಯೋ ಪಾಪ – ಎಂದುಕೊಂಡ ಅವರು, – 'ಎಲೈ ಉಪಬರ್ಹಣನೇ ಚಿಂತಿಸಬೇಡ. ನೀನು ದಾಸೀಪುತ್ರನಾಗಿ ಜನ್ಮಿಸಿದರೂ ನಿನಗೆ ಆತ್ಮತತ್ವವೇತ್ತರಾದ ಸಜ್ಜನರ ಸಹವಾಸ ಪ್ರಾಪ್ತವಾಗಿ, ತನ್ಮೂಲಕ ಶೀಘ್ರವಾಗಿಯೇ ಕ್ಷೇಮವುಂಟಾಗುವುದು.' ಎಂದು ನುಡಿದರು.

ನನಗೆ ಅವರು ಅನುಗ್ರಹಿಸಿದ ಈ ವಿಶಾಪವೊಂದಿಗೆ ಅಂದಿನ ಸಭೆಯು ಮುಗಿದು ಎಲ್ಲರೂ ಹೊರಟುಹೋದರು. ಅಪ್ಸರೆಯರೂ, ನನ್ನ ಅನುಯಾಯಿಗಳಾದ ಇತರ ಗಂಧರ್ವರೂ ನನಗೆ ಪ್ರಾಪ್ತವಾದ ದುರಂತ ಶಿಕ್ಷೆಗಾಗಿ ಕಣ್ಣೀರು ಸುರಿಸುತ್ತಾ, ಗದ್ಗದ ಸ್ವರದಿಂದ ರೋದಿಸುತ್ತಾ ಹೊರಟು ನಡೆದರು. ನಾನು ದುಃಖಾನುಭವಕ್ಕಾಗಿ ಭೂಲೋಕವನ್ನು ಕುರಿತು ಪ್ರಯಾಣಮಾಡಿದೆನು. ಕೇಳಿದಿರಾ, ದೇವಮಂದಿರಗಳಲ್ಲಾಗಲೀ, ಮಹಾಸ್ಥಳಗಳಲ್ಲಾಗಲೀ, ತೀರ್ಥಕ್ಷೇತ್ರಗಳೇ ಮುಂತಾದ ಪುಣ್ಯಸ್ಥಳಗಳಲ್ಲಾಗಲೀ ದುರಾಲೋಚನೆಗಳನ್ನೂ ದುಶ್ಚೇಷ್ಟೆಗಳನ್ನೂ ಆಚರಿಸಿದವರಿಗೆ ಎಂತಹ ದುರ್ಗತಿಯುಂಟಾಗಬಹುದೆಂಬ ನನ್ನ ಈ ದುರಂತ ಕಥೆಯನ್ನು !

ಆ ಪ್ರಜೇಶ್ವರರ ಶಾಪವು ಕ್ಷಿಪ್ರದಲ್ಲೇ ಕಾರ್ಯಕಾರಿಯಾಯಿತು ನಾನು ಒಬ್ಬ ದಾಸಿ (ವಾರವನಿತೆ) ಯ ಉದರದಲ್ಲಿ ಉದ್ಭವಿಸಿದೆ. ನಾನು ಆಕೆಯ ಯೌವನಾಂತ್ಯ ವಯಸ್ಸಿನಲ್ಲಿ ಜನ್ಮಿಸಿದೆನಾದುದರಿಂದ, ಮುಂದೆ ಅವಳಿಗೆ ತನ್ನ ಕುಲವೃತ್ತಿಯಲ್ಲಿ ಜೀವನ ನಡೆಯುವುದು ದುಸ್ತರವಾಗಿ, ಅವಳು ಅವರಿವರ ಮನೆಯಲ್ಲಿ ಕೂಲಿ ಮುಂತಾದ ಹೀನ ಸೇವಾಕಾರ್ಯಗಳನ್ನು ಮಾಡಿಕೊಂಡು ಉಪಜೀವಿಸುತ್ತಾ, ಬಾಲಕನಾದ ನನ್ನನ್ನೂ ಪೋಷಿಸುತ್ತಿದ್ದಳು. ತಂದೆ ಯಾರೆಂಬ ಪರಿಚಯವನ್ನೇ ಅರಿಯದಿದ್ದ ನನಗೆ ಆ ತಾಯಿಯೇ ಜಗತ್ತಿನಲ್ಲಿ ಏಕಮಾತ್ರ ಬಂಧುವಾಗಿದ್ದಳು. ನಾನೂ ಶೈಶವದಲ್ಲೂ ಬಾಲ್ಯಾವಸ್ಥೆಯಲ್ಲೂ ಅವಳನ್ನನುಸರಿಸಿ, ಅವಳು ಹೋದಲ್ಲಿಗೆ ಹೋಗಿ ಅವಳು ಬಿಟ್ಟಲ್ಲಿ ಆಡಿಕೊಂಡಿರುತ್ತಾ ಮೂರು ನಾಲ್ಕು ವರ್ಷ ಕಾಲವನ್ನು ಕಳೆದೆನು. ನನಗೆ ಐದನೆಯ ವರ್ಷ ಪ್ರಾಪ್ತವಾಗುತ್ತಿರುವಾಗ್ಗೆ, ನನ್ನ ತಾಯಿಯು ಸಾಧುಗಳೂ ಸನ್ಯಾಸಿಗಳೂ ಬಂದು ವಾಸಿಸುತ್ತಿದ್ದ ಒಂದು ಆಶ್ರಮದಲ್ಲಿ ಕೆಲಸಮಾಡಿಕೊಂಡಿದ್ದಳು. ಮುಂದೆ ಕೆಲವು ದಿನಗಳಲ್ಲೇ ಆ ಆಶ್ರಮಕ್ಕೆ ಕೆಲವುಮಂದಿ ಪರಮಹಂಸ ಸನ್ಯಾಸಿಗಳು ಬಂದು, ಚಾತುರ್ಮಾಸ್ಯ ವ್ರತಕಾಲವನ್ನು ಅಲ್ಲೇ ಕಳೆಯಲು ನಿರ್ಧರಿಸಿ ನಿಂತರು. ಆ ಸಾಧು ಸಜ್ಜನರ ಸಾನ್ನಿಧ್ಯಮಹಿಮೆಯಿಂದ ಅನೇಕರು ಅವರ ದರ್ಶನಕ್ಕಾಗಿಯೂ, ಅವರು ಮಾಡುತ್ತಿದ್ದ ತತ್ತ್ವೋಪದೇಶ ಶ್ರವಣಕ್ಕಾಗಿಯೂ ಆಶ್ರಮಕ್ಕೆ ಬಂದು ಹೋಗುತ್ತಿದ್ದರು. ಅವರು ಮಾಡುತ್ತಿದ್ದ ತತ್ತ್ವಬೋಧೆಯು ನಮ್ಮ ತಾಯಿಗೂ ಹೆಚ್ಚು ಪ್ರಿಯವಾಗಿದ್ದುದರಿಂದ ಆಕೆಯೂ ವಿಶೇಷ ಶ್ರದ್ಧೆಯಿಂದ ಆಶ್ರಮದ ಕೆಲಸಕಾರ್ಯಗಳನ್ನು ಮಾಡುತ್ತಲೂ, ತನ್ನ ಊಟ ಉಡಿಗೆಗಳನ್ನು ಬಹು ಶೀಘ್ರಕಾಲದಲ್ಲೇ ಮುಗಿಸಿಕೊಂಡು, ಬೋಧನೆಯ ಕಾಲಕ್ಕೆ ತಪ್ಪದೆ ಬಂದು ಸಿದ್ಧವಾಗುತ್ತಲೂ ಇದ್ದಳು. ನಾನು ಸದಾ ನನ್ನ ತಾಯಿಯನ್ನೇ ಅವಲಂಬಿಸಿಕೊಂಡಿರುತ್ತಿದ್ದವನಾದುದರಿಂದ ನಮ್ಮಿಬ್ಬರಿಗೂ ದಿನದ ಬಹು ಕಾಲವು ಆಶ್ರಮದಲ್ಲೇ ಕಳೆಯುತ್ತಿತ್ತು. ಜನ್ಮಾಂತರೀಯ ಸುಕೃತಲೇಶದ ಫಲವಾಗಿ ಇರಬಹುದು – ನಾನು ಆ ಬಾಲ್ಯ ವಯಸ್ಸಿನಲ್ಲಿ ಸುಂದರನಾಗಿಯೂ ಪ್ರಸನ್ನಮುಖವುಳ್ಳವನಾಗಿಯೂ, ಚಪಲಚಿತ್ತವಿಲ್ಲದೆ, ಆಟಪಾಟಗಳಲ್ಲಿ ವಿಶೇಷ ಆಸಕ್ತಿಯಿಲ್ಲದೆ,

ಹಿರಿಯರಲ್ಲಿ ವಿನಯ ವಿಧೇಯತೆಗಳನ್ನು ತೋರಿಸುವ ಸ್ವಭಾವವುಳ್ಳವನಾಗಿ, ದೇವರು ಗುರುಗಳು ಸಾಧು ಸನ್ಯಾಸಿಗಳು ಎಂದರೆ ಭಯಭಕ್ತಿಗಳುಳ್ಳವನಾಗಿ ಇರುತ್ತಾ, ಆ ಸಾಧುಗಳು ನೆರೆದ ಜನರಿಗೆ ತತ್ವಶ್ರವಣ ಮಾಡಿಸುತ್ತಿದ್ದ ಕಾಲದಲ್ಲಿ ನನ್ನ ತಾಯಿಯ ಬಳಿಯಲ್ಲಿ, ಅತ್ತಿತ್ತ ತಿರುಗದೆ, ಬೇಸರಗೊಳ್ಳದೆ, ನಿದ್ರಿಸದೆ, ಏಕಾಗ್ರಚಿತ್ತದಿಂದ ಕುಳಿತು ಅವರು ಹೇಳುತ್ತಿದ್ದ ಪುಣ್ಯಕಥೆಗಳನ್ನು ಕೇಳುತ್ತಿದ್ದೆನು. ನನ್ನ ವಯಸ್ಸಿಗೆ ವಿಶೇಷವೆಂದು ತೋರುವ ನನ್ನ ಈ ಚರ್ಯೆಯು ಅವರಿಗೆ ಬಹು ಆಶ್ಚರ್ಯವನ್ನುಂಟುಮಾಡಿತು. ನನ್ನನ್ನು ದಿನವೂ ಆ ಸ್ಥಿತಿಯಲ್ಲೇ ನೋಡುತ್ತಿದ್ದ ಆ ಸಾಧುಶ್ರೇಷ್ಠರಿಗೆ ಕೆಲವು ದಿನಗಳಲ್ಲೇ ನನ್ನ ವಿಷಯದಲ್ಲಿ ಏನೋ ಒಂದು ಬಗೆಯ ಪ್ರೇಮವುಂಟಾಯಿತು. ನನ್ನನ್ನು ಆಗಾಗ ಬಳಿಗೆ ಕರೆದು ಸವಿ ಮಾತಿನಿಂದ ಆದರಿಸುವರು. ಹಣ್ಣುಹಂಪಲುಗಳನ್ನು ಕೊಟ್ಟು ಪ್ರೀತಿಸುವರು. ಅನ್ನ ಭೋಜನವಾದ ತರುವಾಯ ಮಿಕ್ಕ ಪದಾರ್ಥಗಳನ್ನು ನನಗಿತ್ತು ಊಟಮಾಡೆಂದು ಹೇಳುವರು. ಮತ್ತು ಏನು ಕಾರಣವೋ ಕಾಣೆ, ತಾವು ಊಟಮಾಡಿದ ತರುವಾಯ ಆ ಎಂಜಲೆಲೆಗಳನ್ನು - ಮಗೂ ನೀನು ತೆಗೆದುಹಾಕಿ ಈ ಸ್ಥಳವನ್ನು ಗೋಮಯದಿಂದ ಶುದ್ಧಿಗೊಳಿಸು. ಈ ಕೆಲಸಮಾಡುವಿಕೆಯಿಂದ ನಿನಗೆ ಶ್ರೇಯಸ್ಸುಂಟಾಗುವುದು, ಎಂದು ಹೇಳುವರು. ನಾನು ಆ ಕೆಲಸವನ್ನು ಬಹು ಶ್ರದ್ಧಾಪೂರ್ವಕವಾಗಿಯೂ ಚೊಕ್ಕಟವಾಗಿಯೂ ಮಾಡುತ್ತ ಬಂದುದು ಅವರಿಗೆ ನನ್ನ ವಿಷಯದಲ್ಲಿದ್ದ ಪ್ರೇಮವು ಅಧಿಕರಿಸುವಂತೆ ಮಾಡಿತು. ಆ ಮಹನೀಯರ ಕರಸ್ಪರ್ಶದಿಂದಲೂ, ಅವರ ವೈಶ್ವದೇವ ಬಲಿಸಹಿತ ಬ್ರಹ್ಮಯಜ್ಞಾದಿ ಸತ್ಕೃತ್ಯಗಳ ಪ್ರಭಾವದಿಂದಲೂ ಪರಿಶುದ್ಧವಾದ ಆ ಆಹಾರವನ್ನು ಸೇವಿಸುತ್ತಾ ಬಂದುದರಿಂದ ನನ್ನಲ್ಲಿ ಸ್ವಲ್ಪ ದಿನಗಳಲ್ಲೇ ವಿಶೇಷ ವ್ಯತ್ಯಾಸವು ಕಂಡುಬಂದಿತು. ನನ್ನ ಸಕಲ ಪಾಪಗಳೂ ನಿವಾರಣೆಯಾದುವೋ ಎನ್ನುವಂತೆ ಮನಸ್ಸು ಪ್ರಸನ್ನವಾಯಿತು. ಅವರು ಕೈಕೊಂಡು ನಡಿಸುತ್ತಿದ್ದ ಆ ಧರ್ಮಬೋಧನೆಯ ಕಾರ್ಯದಲ್ಲಿ ವಿಶೇಷ ಆಸಕ್ತಿಯುಂಟಾಯಿತು. ಶ್ರೀ ಕೃಷ್ಣಭಗವಾನನ ಪಾದಾರವಿಂದಗಳಲ್ಲಿ ನಿಶ್ಚಲವೂ ನಿಷ್ಕಲ್ಮಷವೂ ಆದ ಭಕ್ತಿಯುಂಟಾಯಿತು. ಭಗವತ್ತತ್ವಗಳನ್ನು ವಿಶೇಷವಾಗಿ ತಿಳಿಯಬೇಕೆಂಬ ಅಪೇಕ್ಷೆಯು ಮೇಲೆ ಮೇಲೆ ಹೆಚ್ಚತೊಡಗಿತು. ಮನಸ್ಸು ಕ್ಷುದ್ರ

ವಿಷಯಗಳ ಅಪೇಕ್ಷೆಯನ್ನು ತ್ಯಜಿಸಿ ಶುದ್ಧವಾಯಿತು. ಭಗವಂತನ ನಾಮಶ್ರವಣ, ಭಗವಂತನ ಕಲ್ಯಾಣ ಗುಣಗಳನ್ನು ಕೀರ್ತಿಸುವ ಕಥಾ ಶ್ರವಣ ಇವುಗಳಲ್ಲೇ ಮನಸ್ಸು ವಿಶೇಷ ಆಸಕ್ತವಾಯಿತು. ಕ್ರಮ ಕ್ರಮವಾಗಿ ಭಗವದ್ವಿಚಾರವಲ್ಲದ ಮತ್ತಾವ ಸಂಗತಿಯೂ ಮನಸ್ಸಿಗೆ ರುಚಿಸದಾಯಿತು. ನನ್ನ ಆ ವಯಸ್ಸಿಗೆ ಅತೀತವೆಂದು ತೋರಿದ ನನ್ನೀ ಮನಸ್ಥಿತಿಯು ಆ ಸಾಧುವರ್ಯರಿಗೆ ಪರಮಾಶ್ಚರ್ಯಕರವಾಗಿ ತೋರಿತು.

ಆ ವೇಳೆಗೆ ವರ್ಷಋತುವು ಕಳೆದು ಶರದೃತುವು ಪ್ರಾಪ್ತವಾಗುತ್ತಿರಲು, ಆ ಪರಮಹಂಸರು ತಮ್ಮ ಚಾತುರ್ಮಾಸ್ಯವ್ರತ ಸಂಕಲ್ಪವು ಪರಿಸಮಾಪ್ತಿಗೊಂಡುದರಿಂದ, ಅಲ್ಲಿಂದ ಸ್ಥಳಾಂತರಕ್ಕೆ ಹೊರಡಲನುವಾದರು. ಅವರು ಅಲ್ಲಿಂದ ಪ್ರಯಾಣ ಮಾಡಲುದ್ಯುಕ್ತರಾದರೆಂಬುದು, ಈವರೆಗೇ ಅವರ ಹಿತಬೋಧೆಯಿಂದ ಮನಶ್ಶಾಂತಿಯನ್ನು ಹೊಂದಿದ್ದ ಸಕಲರಿಗೂ ವ್ಯಾಕುಲಕ್ಕೆ ಕಾರಣವಾಯಿತು. ಆದರೆ ಎಲ್ಲರಿಗಿಂತಲೂ ನನ್ನ ವಿಚಾರವು ಮಾತ್ರ ಬಹು ಪರಿತಾಪಕರವಾಯಿತು. ನಾನು ಇನ್ನೂ ಚಿಕ್ಕವಯಸ್ಸಿನವನಾದುದರಿಂದ, ನನ್ನ ಏಕಮಾತ್ರ ಅವಲಂಬನವಾಗಿದ್ದ ನನ್ನ ತಾಯಿಯನ್ನು ಬಿಟ್ಟು ಅವರೊಂದಿಗೆ ಹೋಗಲು ಸಾಧ್ಯವಿಲ್ಲ; ಆದರೆ ಮನಸ್ಸು ಅವರನ್ನು ಬಿಟ್ಟು ಅಗಲಲು ಸರ್ವಥಾ ಒಪ್ಪದು. ಅವರೊಂದಿಗೇ ಹೋಗಿ ಜನ್ಮಸಾರ್ಥಕತೆಯ ಮಾರ್ಗವನ್ನು ಸಾಧಿಸಬೇಕೆಂದು ಮನಸ್ಸು ಪ್ರೇರಿಸುತ್ತಿರುವುದು. ಆದರೆ ದೇಹದ ಅಶಕ್ತತೆಯು ಅದಕ್ಕೆ ಮಾರ್ಗಕೊಡದು. ನನ್ನ ಈ ಸ್ಥಿತಿಯು ಅವರಿಗೂ ಗೋಚರವಾಗದಿರಲಿಲ್ಲ. ಪಾಪರಹಿತನೂ, ಶ್ರದ್ಧಾಭಕ್ತಿಯುತನೂ, ಬಾಲಕನಾದರೂ ಚಪಲಚಿತ್ತವಿಲ್ಲದವನೂ, ಆದ ನನಗೆ ಮೇಲ್ಮೆಯನ್ನುಂಟುಮಾಡಬೇಕೆಂಬ ಸದ್ಭಾವವು ಅವರಿಗೂ ಉಂಟಾಯಿತು. ಒಡನೆ ಅವರು, ಎಲ್ಲರೂ ಹೊರಟುಹೋದ ತರುವಾಯ ನನ್ನನ್ನು ಏಕಾಂತವಾದ ಒಂದು ಸ್ಥಳಕ್ಕೆ ಕರೆದೊಯ್ದು, ತಮ್ಮ ಶುಭಕರವಾದ ವರದ ಹಸ್ತವನ್ನು ನನ್ನ ತಲೆಯಮೇಲಿಟ್ಟು - 'ಮಗೂ ವಯಸ್ಸಿನಲ್ಲಿ ಬಾಲಕನಾದರೂ ವಿವೇಕದಲ್ಲಿ ಪ್ರೌಢನಾಗಿರುವ ನಿನ್ನನ್ನು ಕಂಡು ನಮಗೆ ನಿನ್ನ ವಿಷಯದಲ್ಲಿ ಪರಮ ಪ್ರೀತಿಯುಂಟಾಗಿದೆ. ನಿನಗೆ ಪರಮಾತ್ಮ ಪ್ರಾಪ್ತಿಗೆ ಸಾಧಕವಾದ ಬಹು ಗೂಢವಾದ ಒಂದು ರಹಸ್ಯವನ್ನು ಹೇಳುತ್ತೇವೆ ಕೇಳು. ಲೋಕ

ದಲ್ಲಿ ಭಗವತ್ಪ್ರಾಪ್ತಿಗಾಗಿ ಪ್ರಯತ್ನಿಸದಿದ್ದರೆ, ಮನುಷ್ಯನು ಎಷ್ಟುಕಾಲ ಬದುಕಿದರೂ, ಆ ಜನ್ಮವು ಹದ್ದುಗೂಬೆಗಳಂತೆ ನಿರರ್ಥಕವಲ್ಲದೆ ಅದ ರಿಂದ ಯಾವ ಪ್ರಯೋಜನವೂ ಉಂಟಾಗದು. ಪರಮಾತ್ಮ ಪ್ರಾಪ್ತಿಗೆ, ಮನುಷ್ಯನಿಗಿರುವ ದೊಡ್ಡ ಪ್ರತಿಬಂಧಕ ಸಾಮಗ್ರಿಯೆಂದರೆ ಆಧ್ಯಾತ್ಮಿಕ ಆಧಿ ದೈವಿಕ ಆಧಿಭೌತಿಕವೆಂಬ ತಾಪತ್ರಯಗಳು. ಈ ತಾಪತ್ರಯಗಳನ್ನು ನಿವಾ ರಿಸಿಕೊಂಡರೆ ಮುಂದೆ ಮನುಷ್ಯನು ನಿಷ್ಕಲ್ಮಷ ಮನೋಭಾವದಿಂದ ಪರಮಾ ತ್ಮಸಿದ್ಧಿಗಾಗಿ ಪ್ರಯತ್ನಿಸಲು ಹೆಚ್ಚು ಶ್ರಮವಾಗುವುದಿಲ್ಲ. ಕರ್ಮಮಾಡದೆ ಲೋಕದಲ್ಲಿ ಜೀವಿಸುವುದು ಸಾಧ್ಯವಿಲ್ಲ. ಕರ್ಮ ಮಾಡುವಲ್ಲಿ ಹಲವು ವಿಷಯ ವಿಷಯಾಂತರಗಳಲ್ಲಿ ಪ್ರವೇಶಿಸಿ ವ್ಯವಹರಿಸಬೇಕಾಗುವುದು. ಆಗ್ಗ ಮನಸ್ಸು ಚಲಿಸಿ ವಿಷಯಾಸಕ್ತವಾದರೆ, ನಿಶ್ಚಯವಾದ ಗುರಿಯು ತಪ್ಪಿ, ಪ್ರಯತ್ನವೇ ವ್ಯರ್ಥವಾಗುವುದು. ಆದುದರಿಂದ ಈ ರಹಸ್ಯವನ್ನು ಕೇಳು- ನಾವು ಮಾಡುವ ಕರ್ಮದಲ್ಲಿಯೂ, ನಮ್ಮಲ್ಲಿಯೂ, ಮತ್ತು ಆ ಕರ್ಮ ಕ್ಕಾಗಿ ನಾವು ಉಪಯೋಗಿಸುವ ಪದಾರ್ಥಗಳಲ್ಲಿಯೂ. ಪರಮಾತ್ಮನು ವ್ಯಾಪ್ತನಾಗಿ, ಈ ಎಲ್ಲಾ ಕಾರ್ಯಗಳಿಗೂ ನಿಯಾಮಕನಾಗಿ ಇದ್ದಾನೆ ಯೆಂಬ ಜ್ಞಾನವು ಮನಸ್ಸಿನಿಂದ ಅಳಿಸಿ ಹೋಗದಿರುವಂತೆ ಸದಾ ನೆನಪಿನ ಲ್ಲಿಟ್ಟುಕೊಂಡಿರಬೇಕು ಇದು ಮಾತ್ರವೇ ತಾಪತ್ರಯ ನಿವಾರಣೆಗೆ ಮು ಖ್ಯವಾದ ಉಪಾಯವು' ಎಂದು ಬೋಧಿಸಿದರು. ಅವರ ಈ ರಹಸ್ಯ ಬೋ ಧನೆಯು ನನ್ನ ಮನಸ್ಸಿಗೆ ವಿಶೇಷ ಸಮಾಧಾನವನ್ನುಂಟುಮಾಡಿತು ಅಷ್ಟು ಮಾತ್ರವಲ್ಲ - ದಯಾಮಯರಾದ ಆ ಸಾಧುವರ್ಯರು ನನ್ನನ್ನು ಕುರಿತು- 'ಮಗೂ ನಿನಗೆ ಲೌಕಿಕವಾದ ತಾಪತ್ರಯಗಳಿಂದ ಬಾಧಕಪ್ಪಂಟಾಗವಂತಹ ಉಪಾಯವೊಂದು ತಿಳಿಯಿತಲ್ಲವೆ! ನೀನು ನಿರ್ಜನ ಪ್ರದೇಶದಲ್ಲಿ, ನಿಷ್ಕ ಲ್ಮಷ ಮನೋಭಾವದಿಂದ ಧ್ಯಾನಮಾಡಿ ಪರಮಾತ್ಮಸಿದ್ಧಿಯನ್ನು ಹೊಂದ ಲು ಸಾಧಕವಾದ ಒಂದು ಮಂತ್ರರಾಜವನ್ನೂ ನಿನಗಾಗಿ ಉಪದೇಶ ಮಾಡ ಬೇಕೆಂದು ನಮಗೆ ಈಶಪ್ರೇರಣೆಯಾಗುತ್ತಿದೆ. ಬಾ' ಎಂದು ಸಮೀಪಕ್ಕೆ ಕರೆದುಕೊಂಡು ಬಲಗಿವಿಯಲ್ಲಿ—

ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ॥

ಎಂಬ ಮಂತ್ರವನ್ನುಚ್ಚರಿಸಿ, ಸನ್ನಿಂದಲೂ ಉಚ್ಚಾರ ಮಾಡಿಸಿ,-'ಮಗೂ ನಿನಗೆ ಶ್ರೀಯಸ್ಸುಂಟಾಗಲಿ. ಈ ಮಂತ್ರವನ್ನು ಮರೆಯದೆ ಶ್ರದ್ಧಾಭಕ್ತಿ ಯುಕ್ತನಾಗಿ ಧ್ಯಾನಿಸುತ್ತಾ ಬಂದರೆ ನಿನಗೆ ಸಕಲ ದುರಿತಗಳೂ ಪರಿಹಾರ ವಾಗುವುವು; ಮಾತ್ರವಲ್ಲದೆ, ಭಗವಂತನಲ್ಲಿ ಅನನ್ಯಭಕ್ತಿಯೂ, ಕಾಲಕ್ರ ಮದಲ್ಲಿ ಶ್ರೀ ವಾಸುದೇವ ಮೂರ್ತಿಯ ದಿವ್ಯರೂಪ ಸಂದರ್ಶನವೂ ಆಗು ವುವು. ಚಿಂತಿಸಬೇಡ ' ಎಂದು ನುಡಿದು, ಆ ಸಾಧುವರ್ಯರು ಸ್ಥಾನಾಂ ತರವನ್ನು ಕುರಿತು ಪ್ರಯಾಣಮಾಡಿದರು. ವ್ಯಾಸಮಹರ್ಷೀ, ಸಜ್ಜನರು ಅಪಾರ ದಯಾವಂತರು, ಅವರು ಅನಿಮಿತ್ತ ಬಾಂಧವರು. ಹಾಗಲ್ಲದಿದ್ದರೆ ದಾಸೀಗರ್ಭ ಸಂಭವನಾದ ನನ್ನ ವಿಷಯದಲ್ಲಿ ಇಷ್ಟುಮಟ್ಟಿನ ದಯೆ ಯನ್ನು ತೋರಿಸುತ್ತಿದ್ದರೆ?—

---

## ಅಧ್ಯಾಯ ೩ "ಚತುರ್ಮುಖ ಬ್ರಹ್ಮಸಂಭವ"

ಮಹನೀಯರಾದ ಅವರ ಸಾನ್ನಿಧ್ಯವು ತಪ್ಪಿದುದು, ಕೆಲವು ದಿನಗ ಳವರೆಗೆ, ನನ್ನನ್ನು ವಿಶೇಷ ಮನೋವ್ಯಥೆಗೆ ಗುರಿಮಾಡಿತು. ಆಹಾರ ನಿದ್ರೆ ಮುಂತಾದ ಯಾವ ಅಪೇಕ್ಷೆಯೂ ಇಲ್ಲದೆ, ಕೇವಲ ಮಂಕನಂತಿದ್ದು ಕೆಲವು ಕಾಲ ಕಳೆದ ತರುವಾಯ, ನಾನು ಹಾಗೆ ವ್ಯಸನಪಡುವುದು ನಿಷ್ಪ್ರ ಯೋಜನವೆಂದು ತಿಳಿದು, ಆ ಮಹನೀಯರು ಬೋಧಿಸಿದ್ದ ಪರತತ್ವ ವಿಚಾ ರಗಳನ್ನು ಕುರಿತು ಮನನ ಮಾಡಿಕೊಳ್ಳುತ್ತ, ಭಗವಂತನ ಪಾವನನಾಮಗ ಳನ್ನೂ ಕಲ್ಯಾಣ ಗುಣಗಳನ್ನೂ ಚಿಂತನಮಾಡುತ್ತ ಕಾಲಯಾಪನೆ ಮಾ ಡಿಕೊಂಡಿದ್ದೆನು. ಸಜ್ಜನ ಸಾಂಗತ್ಯದ ಫಲವನ್ನೇನೆಂದು ಹೇಳಲಿ! ನನ್ನ ಮನಸ್ಸು ಪ್ರಾಪಂಚಿಕವಾದ ಯಾವ ವಸ್ತುವನ್ನೂ ಬಯಸದೆ, ಇದ್ದುದ ರಿಂದ ನಾನು ಕಾಲಕಾಲಕ್ಕೆ ನನ್ನ ತಾಯಿಯು ಕೊಡುತ್ತಿದ್ದ ಸ್ವಲ್ಪ ಆಹಾ ರವನ್ನು ಉಪ್ಪು ಸಪ್ಪೆ-ಸಿಹಿ ಕಹಿ ಎಂಬ ರುಚಿ ಭೇದವನ್ನೂ ಅರಿಯದೆ ಕೇವಲ ದೇಹರಕ್ಷಣೋದ್ದೇಶದಿಂದ ಮಾತ್ರ ತಿಂದು, ಸದಾ ಭಗವದ್ವಿಚಾರ ಚಿಂತಾಪರನಾಗಿರುತ್ತಿದ್ದೆನು. ಹೀಗಿರುತ್ತಿರುವಲ್ಲಿ ಮುಂದೆ ಕೆಲವು ದಿನಗ

ಕೊಳಗಾಗಿ, ನನ್ನ ತಾಯಿಯು ಒಂದಾನೊಂದು ದಿನ ಯಾರ ಮನೆಯಲ್ಲೋ ಹಾಲು ಕರೆಯುವುದಕ್ಕಾಗಿ ಹೋಗುತ್ತಿದ್ದಾಗ್ಗೆ ಒಂದು ಸರ್ಪದಿಂದ ಕಚ್ಚಲ್ಪಟ್ಟು ಮೃತಳಾದಳು. ಕೇವಲ ಬಾಲಕನಾದ ನನಗೆ ಈ ಲೋಕದಲ್ಲಿದ್ದ ಆ ಒಂದೇ ಒಂದು ಅವಲಂಬನವೂ ನಷ್ಟವಾಯಿತಲ್ಲವೆ? ಆದರೆ ಸಜ್ಜನ ಸೇವೆಯಿಂದಲೂ ಅವರ ಬೋಧನೆಯಿಂದಲೂ ನನ್ನ ಮನಸ್ಸು ಎಷ್ಟು ಪಕ್ವಾವಸ್ಥೆಗೆ ಬಂದಿದ್ದಿತೆಂದು ಬಲ್ಲಿರಾ! ಆ ಸ್ಥಿತಿಯಲ್ಲೂ ನನ್ನ ಮನಸ್ಸು ಚಲಿಸಲಿಲ್ಲ. ರಾಗಬದ್ಧವಾಗಲಿಲ್ಲ. ವ್ಯಸನಪೀಡಿತವಾಗಲಿಲ್ಲ. ಬಾಯಿಂದ ಹೇಳಲಾಗದಂತಹ ಒಂದು ಬಗೆಯ ಶಾಂತತೆಯು ಮನಸ್ಸನ್ನು ಆವರಿಸಿದಂತೆ ತೋರಿತು. ಆಗ ನಾನು, –'ಆಹಾ, ಭಗವಂತನಾದ ಶ್ರೀ ಕೃಷ್ಣಮೂರ್ತಿಗೆ ಭಕ್ತರೆಂದರೆ ಎಷ್ಟು ಪ್ರೇಮ – ಎಷ್ಟು ಅಭಿಮಾನ! ತನ್ನ ಸೇವೆಯಲ್ಲಿ ತೊಡಗಿದವರಿಗೆ ಪ್ರಾಪಂಚಿಕವಾಗಿ ಇರುವ ತಡೆಗಳನ್ನೆಲ್ಲ – ವಿಘ್ನಗಳನ್ನೆಲ್ಲ ತೊಲಗಿಸಿ, ಅವರು ನಿಶ್ಚಿಂತೆಯಿಂದ ಸೇವಾತತ್ಪರರಾಗುವಂತೆ ಅನುಕೂಲಗೊಳಿಸುವ ದಯಾಶರಧಿಯಲ್ಲವೆ ಶ್ರೀಮನ್ನಾರಾಯಣನು! ಅಪಾರ ದಯಾಸಮುದ್ರನಾದ ಆತನ ಆಜ್ಞೆಯಿಲ್ಲದೆ ಲೋಕದಲ್ಲಿ ಯಾವ ಕಾರ್ಯ ನಡೆದೀತು! ತನ್ನ ಭಕ್ತನಾದ ನನಗೆ ಲೌಕಿಕವಾಗಿ ಇದ್ದ ಈ ಒಂದು ತಡೆಯನ್ನೂ ನಿವಾರಿಸಬೇಕೆಂದು ಆತನು ಇಚ್ಛಿಸದಿದ್ದರೆ, ಆ ಕ್ಷುದ್ರ ಸರ್ಪಕ್ಕೆ ನಮ್ಮ ತಾಯಿಯನ್ನು ಕಚ್ಚುವ ಸಾಮರ್ಥ್ಯವಾದರೂ ಹೇಗುಂಟಾಗುತ್ತಿತ್ತು? ಭಗವಂತ-ಇವೆಲ್ಲವೂ ನಿನ್ನ ಇಚ್ಛೆ, ನಿನ್ನ ಲೀಲೆ, ನಿನ್ನ ಸಂತೋಷ!' ಎಂದು ನುಡಿದು ನಿಶ್ಚಿಂತೆಯಿಂದ ತಾಯಿಯ ಆ ಮೃತದೇಹದ ಸಂಸ್ಕಾರಕ್ಕಾಗಿ ಪ್ರಯತ್ನಿಸಿದೆನು. ಕೇವಲ ಬಾಲಕನಾದ ನನಗೆ ಅದು ಅಸಾಧ್ಯವಾದ ಕಾರ್ಯವಲ್ಲವೆ? ಆದರೂ ಆ ಭಯವೇ ಇಲ್ಲದೆ, ಅಗ್ಗೆ ನನಗೆ ಸಾಧ್ಯವೆಂದು ತೋರಿದ ಉಪಾಯಗಳಿಂದ ಎಂತೂ ಆ ಶವಕ್ಕೆ ಅಗ್ನಿಸಂಸ್ಕಾರ ಮಾಡಿಸಿ ಮಾತೃಋಣವಿಮುಕ್ತನಾದೆನೆಂದುಕೊಂಡು ಸ್ನಾನಾದಿಗಳಿಂದ ಶುದ್ಧನಾದೆನು.

ನನಗಿದ್ದ ಆ ಒಬ್ಬ ತಾಯಿಯೂ ಹೋದ ತರುವಾಯ ಮುಂದೆ ಆ ಸ್ಥಳದಲ್ಲಿ ನನ್ನನ್ನು ಕೇಳುವವರ್‍ಯಾರು? ನಾನು ನಿಶ್ಚಿಂತನಾಗಿ ಗಾಳಿಯಂತೆ ಎಲ್ಲಿ ಸಂಚರಿಸಿದರೂ ಹೇಳಿ ಕೇಳುವವರಿಲ್ಲದಂತಾದುದರಿಂದ, ಮುಂದೆ ಅಲ್ಲಿರಲು ಇಚ್ಛಿಸದೆ, ಉತ್ತರದಿಕ್ಕನ್ನನುಸರಿಸಿ ಪ್ರಯಾಣ ಮಾಡಿದೆನು. ಎಲ್ಲಿ

ಗೆಹೋಗಿ ಸೇರಬೇಕೆಂಬ ಯೋಚನೆಯಿಲ್ಲದೆ, ನಾನು ಅನುಸರಿಸಿ ಹೊರಟ ಆ ಮಾರ್ಗವು ಎಲ್ಲಿಗೆ ಹೋಗುವುದೆಂಬ ಅರಿವಿಲ್ಲದೆ, ಉದ್ದೇಶರಹಿತನಾಗಿ, ಆದರೆ ಎಂತೂ ಉತ್ತರ ದಿಕ್ಕಿಗೆ ಅಭಿಮುಖವಾಗಿಯಂತೂ ಪ್ರಯಾಣ ಮಾಡಿದೆ. ಮಾರ್ಗದಲ್ಲಿ ಸ್ವಲ್ಪದೂರ ಕಲ್ಲು ಮುಳ್ಳುಗಳೂ, ದೊಡ್ಡ ದೊಡ್ಡ ಬಂಡೆಗಳೂ ಹಳ್ಳಕೊಳ್ಳಗಳೂ ಇದ್ದು ಬಹು ದುರ್ಗಮವಾಗಿದ್ದಿತು. ಆ ಮಾರ್ಗವನ್ನು ಬಿಟ್ಟು ಹಿಂದಿರುಗಬೇಕೆಂದೂ ಒಂದೆರಡು ಬಾರಿ ಮನಸ್ಸಿಗೆ ತೋರಿತು. ಆದರೆ ನನ್ನ ಮನಸ್ಸು ಅಷ್ಟುಮಟ್ಟಿನ ಕಷ್ಟಗಳಿಗೆಲ್ಲ ಬೆದರಿ ಉದ್ದೇಶ ಸಾಧನೆಯ ಮಾರ್ಗದಿಂದ ತಿರುಗತಕ್ಕುದಾಗಿರಲಿಲ್ಲ. ಮನಸ್ಸಿನಲ್ಲಿ ಬೇರೊಂದು ಯೋಚನೆಯಿಲ್ಲದೆ, ಭಗವಂತನ ನಾಮೋಚ್ಚಾರ ಮಾಡಿಕೊಳ್ಳುತ್ತ ಮುಂದರಿದು ಸಾಗುತ್ತಿದ್ದ ನನಗೆ ಮುಂದಿನ ಮಾರ್ಗವು ಬಹು ಸುಗಮವಾಗಿ ತೋರಿತು. ಎಲ್ಲೆಲ್ಲೂ ಪೈರು ಬೆಳೆದ ಗದ್ದೆಹೊಲಗಳು, ಫಲ ಪುಷ್ಪಗಳ ವೃಕ್ಷಲತಾದಿಗಳಿಂದ ನಿಬಿಡವಾದ ತೋಟ ಉಪವನಾದಿಗಳು ಮುಂತಾದುವುಗಳಿಂದ ನಯನ ಮನೋಹರವಾದ ಕೆಲವು ದೂರವನ್ನೂ ಕಳೆದು ಮುಂದೆ ನಡೆದೆನು. ಅಲ್ಲೊಂದು ನಗರ. ಅದರಲ್ಲಿ ಗಗನ ಚುಂಬಿತಗಳಾದ ಉಪ್ಪರಿಗೆಗಳೂ, ಗೋಪುರಗಳೂ, ಮಂಟಪಗಳೂ, ಧರ್ಮಶಾಲೆಗಳೂ, ವಿಸ್ತಾರವಾದ ಬೀದಿಗಳೂ, ಅಂಗಡಿ ಮುಂಗಟ್ಟುಗಳೂ ಇದ್ದುವು. ಬಹು ದೂರದಿಂದ ಪ್ರಯಾಣ ಮಾಡಿ ಬಂದಿದ್ದ ನಾನು ಅಲ್ಲಿ ನಿಲ್ಲಬಹುದಾಗಿದ್ದಿತು. ಆದರೆ, ನನಗೆ ಲೇಶಮಾತ್ರವಾದರೂ ಆಯಾಸವಾಗಲೀ ಹಸಿವು ಬಾಯಾರಿಕೆಗಳಾಗಲೀ ಉಂಟಾಗದಿದ್ದುದರಿಂದ ವ್ಯರ್ಥವಾಗಿ ಅಲ್ಲಿ ನಿಲ್ಲಲು ಇಚ್ಛೆಯೇ ಉಂಟಾಗಲಿಲ್ಲ. ಮುಂದೆ ಪ್ರಯಾಣ ಮಾಡಿಕೊಂಡು ನಡೆದೆನು. ಅನೇಕ ಬಯಲುಗಳು, ಹಳ್ಳಕೊಳ್ಳಗಳು, ಬೆಟ್ಟಗುಡ್ಡಗಳು ಮುಂತಾದುವನ್ನು ದಾಟಿ, ಒಂದು ಗೊಂಡಾರಣ್ಯವನ್ನು ಪ್ರವೇಶಿಸಿದೆನು. ಆಗ ನನಗೆ ದೇಹದಲ್ಲಿ ಶ್ರಮತೋರಿತು. ಬಹು ಶ್ರಾಂತನಾದುದರಿಂದ ಮುಂದೆ ನಡೆಯಲು ಇಚ್ಛೆಯುಂಟಾಗಲಿಲ್ಲ. ದೇಹವು ವಿಶ್ರಾಂತಿಯನ್ನಪೇಕ್ಷಿಸಿತು. ಅಲ್ಲೇ ಸ್ವಲ್ಪಹೊತ್ತು ಕುಳಿತು ಆಯಾಸನಿವಾರಣೆ ಮಾಡಿಕೊಂಡು, ತರುವಾಯ ಸಮೀಪದಲ್ಲೇ ಕಂಡಬಂದ ಒಂದು ಕೊಳದಲ್ಲಿ ಸ್ನಾನಮಾಡಿ, ಜಲಪಾನ ಮಾಡಲು, ಆಯಾಸವೆಲ್ಲ ಪರಿಹಾರವಾಗಿ ದೇಹದಲ್ಲಿ ನವಶಕ್ತಿಯುದ

ಯಿಸಿದಂತಾಯಿತು. ಒಡನೆ ಕಾಲವ್ಯರ್ಥ ಮಾಡದೆ ಮುಂದೇನು ಮಾಡಬೇಕೆಂದು ಯೋಚಿಸಿದೆನು. ನಿರ್ಜನವಾದ ಮತ್ತು ಪರಿಶುದ್ಧವಾದ ಸ್ಥಳದಲ್ಲಿ ಕುಳಿತು ಭಗವದ್ಧ್ಯಾನಕ್ಕೆ ತೊಡಗೆಂದು ಹೇಳಿದ್ದ ಆ ಸಾಧುಪುಂಗವರ ಅಮೃತವಚನವು ಜ್ಞಾಪಕಕ್ಕೆ ಬಂತು. ಸಮೀಪದಲ್ಲೇ ಒಂದು ವಿಸ್ತಾರವಾದ ಅಶ್ವತ್ಥ ವೃಕ್ಷವು ದೃಷ್ಟಿಗೋಚರವಾಯಿತು. ಅದರ ಮೂಲವನ್ನಾಶ್ರಯಿಸಿ, ನಿರ್ಮಲವಾದ ಆ ಸ್ಥಳದಲ್ಲಿ ಕುಳಿತು, ಭಗವದ್ಧ್ಯಾನತತ್ಪರನಾಗಲು ನಿಶ್ಚಯಿಸಿದೆನು. ಮನಸ್ಸು ಸುಪ್ರಸನ್ನವಾಗಿದ್ದಿತು. ವಿಶೇಷ ಎತ್ತರವೂ ಅಲ್ಲದ ವಿಶೇಷ ತಗ್ಗೂ ಅಲ್ಲದ ಪರಿಶುಭ್ರವಾದ ಒಂದಾಸನವನ್ನು ಸಿದ್ಧಪಡಿಸಿಕೊಂಡು ಅದರಮೇಲೆ ಕುಳಿತು, ನಾನು ಹೃದಯಾಂತರ್ವರ್ತಿಯಾದ ಪರಮಾತ್ಮ ಧ್ಯಾನದಲ್ಲಿ ತೊಡಗಿದೆನು. ನನ್ನಮೇಲಿನ ಅಪಾರ ಕೃಪೆಯಿಂದ ಆ ಸಾಧುವರೇಣ್ಯರು ಉಪದೇಶಿಸಿದ್ದ.—

ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ।

ಎಂಬೀ ಮಂತ್ರರಾಜವನ್ನೇ ಪುನಃ ಪುನಃ ಉಚ್ಚರಿಸಿಕೊಳ್ಳುತ್ತ, ಮನಸ್ಸಿನಲ್ಲಿ ಬೇರೊಂದು ಯೋಚನೆಯಿಲ್ಲದೆ, ಸೃಷ್ಟಿಸ್ಥಿತಿಲಯಾದಿಗಳಿಗೆ ಏಕಮಾತ್ರ ಪ್ರಭುವಾದ ಜಗದೀಶ್ವರನಲ್ಲೇ ನಟ್ಟಮನಸ್ಸುಳ್ಳವನಾಗಿ ಆತನ ಕಲ್ಯಾಣ ಗುಣಮಾಲೆಯನ್ನೇ ಚಿಂತಿಸಿಕೊಳ್ಳುತ್ತ, ಹೀಗೆಯೇ ಬಹುಕಾಲ ಧ್ಯಾನತತ್ಪರನಾಗಿದ್ದೆನು. ನನ್ನ ಧ್ಯಾನಯೋಗವು ಮುಂದರಿದಂತೆಲ್ಲ ನನ್ನ ಮನಸ್ಸು ಬಹು ಶಾಂತಸ್ಥಿತಿಯನ್ನು ಹೊಂದತೊಡಗಿತು. ಮನಸ್ಸಿನಲ್ಲಿ ಹಾಗೆ ಅಪಾರವಾದ ಶಾಂತಿಯು ನೆಲೆಸಿದೊಡನೆಯೇ ಆವರೆಗೆ ನನ್ನ ತಿಳಿವಿಕೆಗೇ ಬಾರದಿದ್ದ ಅನೇಕ ಸಂಗತಿಗಳು ಗೋಚರಕ್ಕೆ ಬರತೊಡಗಿದುವು. ಅದ್ಭುತವೂ ಅನುಪಮವೂ ಆದ ಈ ಜಗತ್ಸೃಷ್ಟಿಯ ನಿಶ್ಚಯಸ್ವರೂಪವೆಂಥದೆಂಬುದೂ, ಅಗಾಧವಾದ ಈ ಜಗತ್ತಿನ ಅಸಂಖ್ಯಜೀವರಾಶಿಗಳ ಪಾಲನಾರಹಸ್ಯವೇನೆಂಬುದೂ, ಕಾಲಕಾಲವನ್ನರಿತು, ಸೃಷ್ಟವಾದ - ಮತ್ತು ತನ್ನಿಂದಲೇ ಪೋಷಿತವಾದ ಈ ಜಗತ್ತಿನ ಜೀವಿಗಳನ್ನು ಲಯಗೊಳಿಸುವ ಭಗವಚ್ಚೈತನ್ಯದ ಉದ್ದೇಶವೇನೆಂಬುದೂ ಗೋಚರಿಸಿ, ಪರಮಾದ್ಭುತವೆ

ಸ್ಸಿಸಿತು. ಭಗವಂತನ ಕಾರ್ಯಗಳಲ್ಲೆಲ್ಲ ಅತ್ಯಂತ ಮಹತ್ವದ ಕಾರ್ಯ ವೆನ್ನಿಸುವ ಈ ಸೃಷ್ಟಿಸ್ಥಿತಿಲಯಾದಿಗಳ ನಿಶ್ಚಯ ಸ್ವರೂಪವು ಗೋಚರಿಸಿದಾಗ ನನ್ನ ಮನಸ್ಸಿನಲ್ಲುಂಟಾದ ಆನಂದಾತಿಶಯವನ್ನು ಮಾತುಗಳಿಂದ ವ್ಯಕ್ತಗೊಳಿಸುವುದು ಅಸಾಧ್ಯವು! ಆಗ ನನ್ನ ಹಿಂದೆ ಮುಂದೆ ಎಡ ಬಲ ಪಾರ್ಶ್ವಗಳಲ್ಲಿ, ಸಮೀಪದಲ್ಲಿ, ಒಳಗೆ ಹೊರಗೆ ಹೀಗೆ ಸರ್ವತ್ರ ಭಗವಚ್ಚೈತನ್ಯವೇ ವ್ಯಾಪಿಸಿದೆಯೋ ಎಂಬಂತೆ ನನ್ನ ಮನಸ್ಸಿಗೆ ಭಾಸವಾಗುತ್ತಿತ್ತು. ಸರ್ವಚೈತನ್ಯ ಸ್ವರೂಪನಾದ ಶ್ರೀಮನ್ನಾರಾಯಣನಿಗಿಂತಲೂ, ಶ್ರೇಷ್ಠನಾದ, ಆತನಿಗೆ ಸಮಾನನಾದ ಮತ್ತಾವನೂ ಇಲ್ಲವೆಂಬ ನಿಶ್ಚಯಜ್ಞಾನವು ಮನಸ್ಸಿನಲ್ಲಿ ಉತ್ಪನ್ನವಾಯಿತು. ಉತ್ತರ ಕ್ಷಣದಲ್ಲೇ ಹೃದಯ ಕಮಲದಲ್ಲಿ ಮಹಾ ತೇಜಸ್ವಿತೆಯಿಂದ ಕೂಡಿದ ಒಂದು ದಿವ್ಯ ಪ್ರಕಾಶವು ಮಿಂಚು ಹೊಳೆದಂತೆ ಹೊಳೆದು, ಒಂದಿಗೇ ಕೋಟಿ ಸೂರ್ಯ ಪ್ರಕಾಶಮಾನನಾದ ಭಗವಂತನಾದ ಶ್ರೀಮನ್ನಾರಾಯಣಮೂರ್ತಿಯ ದಿವ್ಯ ಮಂಗಳ ಸ್ವರೂಪದ ಸಂಪೂರ್ಣ ದರ್ಶನವಾಯಿತು. ಆ ಅಲೌಕಿಕ ಸೌಂದರ್ಯ, ಆ ಅವರ್ಣನೀಯ ಶೋಭೆ, ಆ ಅನಿರ್ವಚನೀಯ ಪ್ರಭೆ, ಆ ಅಂಚಿತ್ಯಾದ್ಭುತ ಮಹಿಮೆ, ಇವುಗಳನ್ನು, ವ್ಯಾಸಮುನೀಂದ್ರಾ, ಮಾನವನ ಕ್ಷುದ್ರ ಚಕ್ಷುವು ನೋಡಬಲ್ಲುದೆ, ಈ ಅಶಕ್ತ ಜಿಹ್ವೆಯು ವರ್ಣಿಸಬಲ್ಲುದೆ, ದುರ್ಬಲವಾದ ಈ ಮನಸ್ಸು ಗ್ರಹಿಸಬಲ್ಲುದೆ? ಎಂತೂ, ನನಗೆ ಅಷ್ಟು ಮಾತ್ರ ಭಗವದ್ದರ್ಶನವಾಯಿತು. ಉತ್ತರಕ್ಷಣದಲ್ಲೇ ಆ ದಿವ್ಯರೂಪವು ಅದೃಶ್ಯವಾಗಿಹೋಯಿತು. ಒಡನೆ ನನ್ನ ಕಣ್ಣು ಮುಂದೆ ಶೂನ್ಯತೆಯು ವ್ಯಾಪಿಸಿತು. ಅವರೆಗೆ ಸುಪ್ರಸನ್ನವಾಗಿ ಆನಂದಾನುಭವ ಮಾಡುತ್ತಿದ್ದ ಮನಸ್ಸು ಕ್ಷೋಭೆಗೊಂಡು ದುರಂತವ್ಯಥೆಗೆ ಒಳಗಾಯಿತು. ಮುಂದೆ ಆ ಸ್ಥಳದಲ್ಲಿ ಕುಳಿತಿರಲು ಸಮಾಧಾನ ತೋರದಿರಲು, ಅಲ್ಲಿಂದ ಎದ್ದು ಹೊರಟು, ಅಗೋಚರನಾಗಿಹೋದ ಆ ಭಗವನ್ಮೂರ್ತಿಯನ್ನು ಪುನಃ ದರ್ಶಿಸಬೇಕೆಂಬ ಇಚ್ಛೆಯು ಮನಸ್ಸನ್ನೆಲ್ಲ ವ್ಯಾಪಿಸಿರಲು, ದಿಕ್ಕುದೆಸೆಯೆನ್ನದೆ ಉನ್ಮತ್ತನಂತೆ, ಕಾಲುಗಳು ಕೊಂಡುಹೋದ ಎಡೆಯನ್ನನುಸರಿಸಿ ನಡೆಯತೊಡಗಿದೆನು. ಎಷ್ಟು ದೂರ ನಡೆದೆನೆಂಬ ಪ್ರಜ್ಞೆಯಿಲ್ಲ ಮಾರ್ಗದಲ್ಲಿ ಯಾವ ಯಾವ ವಸ್ತುಗಳನ್ನು ನೋಡಿದೆನೆಂಬ ಅರಿವಿಲ್ಲ. ದುರ್ಗಮವಾದ ಮಾರ್ಗದ ಮುಳ್ಳು

ಕಲ್ಲುಗಳಲ್ಲಿ ಬಿದ್ದಿದ್ದು ಮೈ ಕೈಕಾಲುಗಳೆಲ್ಲವೂ ರಕ್ತಮಯವಾಗಿದ್ದುವು. ಉಟ್ಟ ವಸ್ತ್ರಗಳೆಲ್ಲವೂ ಚಿಂದಿ ಚಿಂದಿಯಾಗಿದ್ದುವು. ಹೀಗೆ ಎಷ್ಟೋ ದೂರ ನಡೆದು, ಮುಂದೆಹೋಗಲು ದೇಹವು ಶಕ್ತವಾಗದಿದ್ದುದರಿಂದ ಶ್ರಾಂತನಾಗಿ ಒಂದೆಡೆ ಬಿದ್ದುಬಿಟ್ಟೆನು. ಆಗ ನನಗೆ ಅರ್ಧ ಜ್ಞಾನ ಅರ್ಧ ಮರವೆ ಎಂಬಂತಿತ್ತು. ಆಗ ಒಂದು ಆಕಾಶವಾಣಿಯಾದಂತೆ ನನ್ನ ಕಿವಿಗಳಿಗೆ ಕೇಳಿಸಿತು. 'ಕಾಮ ಕ್ರೋಧಾದಿ ಮನಃಕಲ್ಮಷಗಳನ್ನು ಸಂಪೂರ್ಣವಾಗಿ ಹೋಗಲಾಡಿಸಿಕೊಳ್ಳದಿರುವ ಕುಯೋಗಿಗಳಿಗೆ ನಾನು ದರ್ಶನ ಕೊಡತಕ್ಕವನಲ್ಲವಾದುದರಿಂದ, ಮಗೂ, ಈ ಜನ್ಮದಲ್ಲೀ ನೀನು ಪುನಃ ನನ್ನನ್ನು ನೋಡಲು ಶಕ್ತನಾಗಲಾರೆ, ನಿನಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಗುವುದಕ್ಕಾಗಿ, ನನ್ನ ದಿವ್ಯಸ್ವರೂಪವನ್ನು ಈಗ ಸಕೃತ್ತಾಗಿ ನಿನಗೆ ದರ್ಶನ ಮಾಡಿಸಿದೆನು. ಇನ್ನು ನೀನು ನಿಂದ್ಯವಾದ ಈ ಜನ್ಮದಿಂದ ಚ್ಯುತನಾಗಿ ನನ್ನ ಪರಿಜನರ ಸ್ಥಾನವನ್ನು ಹೊಂದುವೆ. ನನ್ನ ಅನುಗ್ರಹದಿಂದ ಸೃಷ್ಟಿ ಸ್ಥಿತಿ ಸಂಹಾರಾದಿ ಮಹತ್ಕಾರ್ಯಗಳಲ್ಲಿ ನಿನಗೆ ಸ್ಥಿರವಾದ ಜ್ಞಾನವುಂಟಾಗಿರುವುದು.' ನ-ನ- ನುಡಿದ ಆ ಭಗವದ್ವಾಣಿಯನ್ನು ಕೇಳಿ ನನ್ನ ಚದುರಿದ ಮನಸ್ಸು ಸ್ವಲ್ಪಮಟ್ಟಿಗೆ ಸಮಾಧಾನಗೊಂಡಿತು. ತರುವಾಯ ನನಗೆ ಲೋಕದ ಯಾವ ವಿಚಾರದಲ್ಲಿಯೂ ಇಚ್ಛೆಯುಂಟಾಗದಂತೆ ಮನಸ್ಸು ಪರಮ ವೈರಾಗ್ಯಸ್ಥಿತಿಯನ್ನಡರಿತು. ವಾಸುದೇವನಿಂದ ಅನ್ಯವಾದ ವಸ್ತುವೇ ಲೋಕದಲ್ಲಿದ್ದಂತೆ ನನ್ನ ಬುದ್ಧಿಗೆ ಗೋಚರಿಸದಾಯಿತು. ಹಾಗೆ ಜಗತ್ತಿನಲ್ಲಿದ್ದರೂ ತಾವರ ಎಲೆಯಲ್ಲಿನ ನೀರಿನಂತೆ ಯಾವ ರೀತಿಯಲ್ಲೂ ಜಗತ್ತಿಗೆ ಅಂಟದೆ, ಗಾಳಿಯಂತೆ ಯಾವುದರ ಸಂಬಂಧವೂ ಇಲ್ಲದೆ, ಸೂರ್ಯರಶ್ಮಿಯಂತೆ ಯಾವುದನ್ನೂ ನನಗಾಗಿ ಗ್ರಹಿಸದೆ, ಶಬ್ದಸ್ಪರ್ಶ ರುಚಿ ಗಂಧ ನೋಟಗಳ ಆಕರ್ಷಣೆಗಳಿಗೆ ವಶನಾಗದೆ ಅವುಗಳನ್ನು ಮೀರಿ, ನಿರ್ಮಮನಾಗಿ, ಸಂಕಲ್ಪಶೂನ್ಯನಾಗಿ ಕೆಲಕಾಲ ಭೂಮಿಯಲ್ಲಿ ವಾಸಿಸಿದ್ದೆನು. ಮುಂದೆ ಕೆಲವು ದಿನಗಳೊಳಗಾಗಿಯೇ, ಅಂತರಿಕ್ಷದಿಂದ ಮಿಂಚಿನಂತಹ ಒಂದು ದಿವ್ಯ ಪ್ರಕಾಶವು ಬಂದು ಧ್ಯಾನಾಸಕ್ತನಾಗಿ ಕುಳಿತಿದ್ದ ನನ್ನ ದೇಹವನ್ನು ಸೋಕಲು, ಅದು ಬಿದ್ದುಹೋಗಿ ನನಗೂ ಅದಕ್ಕೂ ವಿಯೋಗವುಂಟಾಯಿತು. ಸಕಲವಿಧ ವ್ಯಾಧಿಗಳಿಗೂ ಜನನ ಮರಣಾದಿ ದುಃಖಗಳಿಗೂ ಆಕರವಾದ ಈ ಪಾಂಚ ಭೌತಿಕ

ದೇಹವು ಈ ಕಾರಣದಿಂದ ಬಿದ್ದುಹೋಗಲು, ಭಗವದನುಗ್ರಹದಿಂದ ನನಗೆ ಭಗವದ್ದತ್ತವಾದ ಸತ್ವಮಯ ಶರೀರವುಂಟಾಯಿತು.

ಆ ವೇಳೆಗೆ ಕಲ್ಪಪ್ರಳಯವುಂಟಾಗಲು, ಚತುರ್ಮುಖ ಬ್ರಹ್ಮನೊಂದಿಗೆ ನಾನೂ ನನ್ನಂತೆ ಇದ್ದ ಅನಂತಾನಂತಜೀವರೂ ನಾರಾಯಣಮೂರ್ತಿಯ ಉದರವನ್ನು ಪ್ರವೇಶಿಸಿದೆವು. ಕಲ್ಪಾಂತ್ಯದಲ್ಲಿ ಶ್ರೀಮನ್ನಾರಾಯಣನ ನಾಭೀಕಮಲದಿಂದ ಬ್ರಹ್ಮದೇವನು ಉದ್ಭವಿಸಲು, ಶ್ರೀಮನ್ನಾರಾಯಣನು ಆತನನ್ನು ಜಗತ್ಸೃಷ್ಟಿ ಕಾರ್ಯದಲ್ಲಿ ನಿಯಮಿಸಿದನು. ಒಡನೆ ತಪಸ್ಸಿನಿಂದ ಸಿದ್ಧಿಯನ್ನು ಪಡೆದು ಜಗತ್ತಿನ ಸೃಷ್ಟಿಕಾರ್ಯದಲ್ಲಿ ತೊಡಗಿದ ಆತನ ವಿವಿಧಾಂಗಗಳಿಂದ ಮರೀಚಿ, ಅತ್ರಿ, ಆಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ದಕ್ಷ ಎಂಬ ನವಬ್ರಹ್ಮರು ಉದಯಿಸಿದರು. ಆಗಲೇ ನಾನೂ ಆತನ ತೊಡೆಯಿಂದ ಆವಿರ್ಭವಿಸಿದೆನು. ಸೃಷ್ಟಿವಿಚಾರವು, ಅನಿರ್ವಚನೀಯವಾದುದು. ಪಾಮರ ದೃಷ್ಟಿಗೆ ಅಗೋಚರವಾದ, ಆ ಭಗವದ್ರಹಸ್ಯವನ್ನು ಕುರಿತು ಪಾಮರರು ತಮ್ಮ ಅಲ್ಪಮತಿಯಿಂದ ವಿಮರ್ಶಿಸಿ, ಟೀಕೆಮಾಡಿ, ತೀರ್ಮಾನಕ್ಕೆ ಬರುವುದು ನಿರರ್ಥಕವು.



## ಅಧ್ಯಾಯ ೪ "ಲೋಕಸಂಗ್ರಹಣಕಾರ್ಯ"

ಬ್ರಹ್ಮಪುತ್ರರಾಗಿ ಜನಿಸಿದ ನವಬ್ರಹ್ಮರೂ ಮತ್ತು ನಾನೂ, ಆತನಿಂದಲೇ ಜ್ಞಾನೋಪದೇಶಹೊಂದಿ, ಲೋಕ ಸಂಗ್ರಹಣ ಕಾರ್ಯದಲ್ಲಿ ನಿರತರಾಗಿರಲು ಆತನಿಂದ ಆಜ್ಞಪ್ತರಾದೆವು. ನಾನು ಮಹಾವಿಷ್ಣುವಿನ ಅನುಗ್ರಹ ವಿಶೇಷದಿಂದ ಶಬ್ದ ಬ್ರಹ್ಮರೂಪವಾದ ಮಹತಿ ಎಂಬ ಈ ವೀಣೆಯನ್ನು ಧಾರಣಮಾಡಿ ಅಂದಿನಿಂದ ಶ್ರೀಹರಿಯ ಕಲ್ಯಾಣಗುಣಮಾಲೆಯನ್ನೂ, ಆತನ ಅಮೋಘ ಚರಿತ್ರೆಯನ್ನೂ ಗಾನಮಾಡುತ್ತ ಮೂರು ಲೋಕಗಳಲ್ಲೂ ತಡೆಬಡೆಯಿಲ್ಲದೆ ಸಂಚರಿಸುತ್ತಿರುವೆನು. ನಿಯತ ಬ್ರಹ್ಮಚರ್ಯವುಳ್ಳವನೂ, ಜಿತೇಂದ್ರಿಯನೂ, ಸದಾ ಲೋಕಕ್ಷೇಮಾಕಾಂಕ್ಷಿಯೂ ಆದುದ

ರಿಂದ ನನಗೆ ದೇವತೆಗಳೆನ್ನದೆ ದೈತ್ಯರೆನ್ನದೆ ಮಾನವರೆನ್ನದೆ ಸಾಗರೆನ್ನದೆ ಸರ್ವಸ್ಥಳಗಳಲ್ಲೂ ಸ್ವಾಗತವುಂಟು. ಅನುಪಮ ಚರಿತ್ರನಾದ ಶ್ರೀಹರಿಯ ಗುಣವನ್ನು ಕೀರ್ತನಮಾಡಿದಾಗಲೆಲ್ಲ; ಈಗ ಆತನು ತನ್ನ ದಿವ್ಯಸುಂದರ ವಿಗ್ರಹದಿಂದ ನನಗೆ ದರ್ಶನ ಕೊಡುತ್ತಿರುವನು. ಶ್ರೀಹರಿಯ ನಾಮಮಹಿಮೆಯನ್ನು ಸರ್ವಕಾಲದಲ್ಲೂ ಧ್ಯಾನಮಾಡುತ್ತಿರುವ - ಗಾನಮಾಡುತ್ತಿರುವ ನನ್ನ ಸುಕೃತ ವಿಶೇಷವನ್ನು ಏನೆಂದು ಹೇಳಲಿ! ಪಂಚೇಂದ್ರಿಯಗಳಿಂದ ಲಬ್ಧವಾಗುವ ವಿಷಯಗಳನ್ನು ಅನುಭವಿಸಬೇಕೆಂಬ ಆಸೆಯು ಯಾವನನ್ನು ಪೀಡಿಸುತ್ತಿರುವುದೋ, ಅಂಥವನು ಸಂಸಾರ ಸಮುದ್ರದ ದುಃಖಮಯ ಜೀವಿತದಿಂದ ಪಾರಾಗಬೇಕೆಂದು ಅಪೇಕ್ಷಿಸಿದರೆ ಅವನಿಗೆ ಶ್ರೀಮನ್ನಾರಾಯಣನ ಚರಿತ್ರೆಯೇ ನಾವೆಯಾಗಿದ್ದು ಸಹಾಯಮಾಡುವುದು. ಯಾವ ದುರ್ದೈವಿಯು ಕಾಮಕ್ರೋಧ ಲೋಭ ಮೋಹ ಮದಮಾತ್ಸರ್ಯಗಳೆಂಬ ಷಡ್ವೈರಿಗಳ ಉಪಟಳಕ್ಕೆ ಸಿಕ್ಕಿ ಬಾಧೆಪಡುತ್ತಿರುವನೋ ಅವನು ಮನಶ್ಶಾಂತಿಯನ್ನು ಹೊಂದಲು ಷಡ್ಗುಣೈಶ್ವರ್ಯ ಸಂಪನ್ನನೂ ಲಕ್ಷ್ಮೀಪತಿಯೂ ಆದ ಶ್ರೀಮನ್ನಾರಾಯಣನ ಚರಿತ್ರೆಯ ಕೀರ್ತನೆಗೆ ಸಮಾನವಾದ ಸಾಧನವು ಮತ್ತೊಂದಿಲ್ಲ. ವ್ಯಾಸಮಹರ್ಷೇ, ಹೆಚ್ಚೇನು ಹೇಳಲಿ, ಯಮ ನಿಯಮಾದಿ ಅಷ್ಟಾಂಗ ಯೋಗಸಿದ್ಧಿಯಿಂದ ಪ್ರಾಪ್ತವಾಗಲು ಅಸಾಧ್ಯವೆನ್ನಿಸುವ ಮನಶ್ಶಾಂತಿಯು ಭಗವದ್ಭಜನದಿಂದ ಸುಲಲಿತವಾಗಿ ಪ್ರಾಪ್ತವಾಗುವುದು. ಕಲಿಯುಗದಲ್ಲಂತೂ, ಯಜ್ಞ ತಪಸ್ಸು ದಾನ ಯೋಗಸಾಧನ ಮುಂತಾದ ಸಕಲವಿಧ ಪ್ರಯತ್ನಗಳಿಗಿಂತಲೂ ಹರಿಭಜನೆಯೊಂದೇ ಭವತಾರಕವಾದುದೆಂದು ಭಗವದಾದೇಶವುಂಟು. ಆದುದರಿಂದ ಮಹರ್ಷೇ, ನಾನು ಈ ಮೊದಲೇ ವಿಜ್ಞಾಪಿಸಿಕೊಂಡಂತೆ ಭಗವದ್ಗುಣಗಾನ ರೂಪವಾದ ಗ್ರಂಥರಚನೆಗೆ ಸಂಕಲ್ಪಮಾಡಿರಿ. ನಿಮ್ಮ ಈವರೆಗಿನ ಅಗಾಧ ಗ್ರಂಥರಚನೆಯಿಂದ ನಿಮಗೆ ಪ್ರಾಪ್ತವಾಗದಿರುವ ಮನಶ್ಶಾಂತಿಯು ಅದರಿಂದ ಲಭ್ಯವಾಗುವುದು. ನನಗೆ ಬ್ರಹ್ಮದೇವನು, ಭಗವತ್ಕಥಾಸಾರವನ್ನು ನಾಲ್ಕು ಶ್ಲೋಕಗಳಿಂದ ಬೋಧಿಸಿರುವನು. ಅದು ಆತನಿಗೆ ಭಗವಂತನಿಂದಲೇ ಉಪದೇಶಿಸಲ್ಪಟ್ಟು ಚತುಃಶ್ಲೋಕೀಭಾಗವತವೆಂದು ಪ್ರಸಿದ್ಧವಾಗಿರುವುದು. ಅದು ನಿಮ್ಮಿಂದ ರಚಿತವಾಗಲಿರುವ ಬೃಹದ್ಗ್ರಂಥಕ್ಕೆ ಬೀಜಭೂತವಾಗಿ

ದಲಿ-ಎಂದು ನುಡಿದು, ಉಭಯರೂ ಆಚಮನಾದಿಗಳಿಂದ ಶುದ್ಧರಾದ ತರುವಾಯ, ನಾರದರು ಅವರಿಗೆ *ಚತುಃಶ್ಲೋಕೀ ಭಾಗವತವನ್ನು ಉಪದೇಶ ಮಾಡಿ, ಅವರ ಅನುಜ್ಞೆಯನ್ನು ಪಡೆದು, ಸ್ವೇಚ್ಛೆಯಿಂದ ಭಗವದ್ಗುಣ ರತ್ನಮಾಲೆಯನ್ನು ಜಪಿಸಿಕೊಳ್ಳುತ್ತ, ಭಕ್ತಿ ಪಾರವಶ್ಯತೆಯಿಂದ ಉಚ್ಚಸ್ವರದಿಂದ ಆ ದೇವದೇವನ ದಿವ್ಯಚರಿತ್ರೆಯನ್ನು ಕೀರ್ತಿಸಿಕೊಳ್ಳುತ್ತ ಅಂತರಿಕ್ಷಮಾರ್ಗವನ್ನಡರಿ ಹೊರಟುಹೋದರು.

ಹೀಗೆ ಬ್ರಹ್ಮಪುತ್ರರಾಗಿ ಅವತರಿಸಿ ಲೋಕಸಂಗ್ರಹಣ ಕಾರ್ಯಕ್ಕೆ ಸಿದ್ಧರಾದ ತರುವಾಯ ನಾರದರು ಒಂದು ಸ್ಥಳದಲ್ಲಿ ನಿಲ್ಲದೆ ಸದಾ ಸಂಚರಿಸುತ್ತಲೇ ಇರುವುದಕ್ಕೆ ಕಾರಣವೇ ಎನ್ನುವಂತೆ, ವ್ಯಾಸ ಪ್ರೋಕ್ತ ಶ್ರೀಮನ್ಮಹಾವಿಷ್ಣು ಭಾಗವತದ ಷಷ್ಠಸ್ಕಂಧದಲ್ಲಿ, ಅವರಿಗೆ ದಕ್ಷನಿಂದ ಶಾಪವುಂಟಾಯಿತೆಂದು ಒಂದು ಐತಿಹ್ಯವಿದೆ. ದಕ್ಷನಿಗೆ ಪಾಂಚಜನಿಯಲ್ಲಿ ಜನಿಸಿದ ಹರ್ಯಶ್ವರೆಂಬ ಹತ್ತುಸಾವಿರಮಂದಿ ಮಕ್ಕಳಿಗೆ ಪ್ರಜೋತ್ಪಾದನ ಮಾಡಿರೆಂದು ತಂದೆಯು ಆಜ್ಞಾಪಿಸಿದನು. ಅವರು ತಂದೆಯ ಆಜ್ಞೆಯನ್ನು ಕೈಕೊಂಡು 'ನಾರಾಯಣ' ಎಂಬ ಒಂದು ಕ್ಷೇತ್ರಕ್ಕೆ ನಡೆದು ಅಲ್ಲಿ ತಪಸ್ಸುಮಾಡುತ್ತಿರಲು, ಅಲ್ಲಿಗೆ ನಾರದರು ಬಂದು, ಮೋಕ್ಷಕ್ಕೆ ಅಧಿಕಾರಿಗ

---

*ಚತುಃಶ್ಲೋಕೀ ಭಾಗವತ

ಶ್ರೀ ಭಗವಾನುವಾಚ:—

ಅಹಮೇವಾಸಮೇವಾಗ್ರೇ ನಾನ್ಯದ್ಯತ್ಸದಸತ್ಪರಮ್.
ಪಶ್ಚಾದಹಂ ಯದೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಮ್ ।
ಋತೇಽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ
ತದ್ವಿದ್ಯಾದಾತ್ಮನೋ ಮಾಯಾಂ ಯಥಾಽಽಭಾಸೋ ಯಥಾ ತಮಃ॥
ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷ್ವನು
ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್॥
ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾಽಽತ್ಮನಃ
ಅನ್ವಯ ವ್ಯತಿರೇಕಾಭ್ಯಾಂ ಯತ್ಸ್ಯಾತ್ಸರ್ವತ್ರ ಸರ್ವದಾ॥

ಳಾದ ಇವರು ಕರ್ಮಮಾರ್ಗದ ಸೆಳೆವಿಗೆ ಬಿದ್ದು ನಾಶಹೊಂದುವರಲ್ಲಾ ಎಂಬ ಕನಿಕರದಿಂದ ಅವರಿಗೆ ಜ್ಞಾನೋಪದೇಶಮಾಡಲಾಗಿ, ಅವರು ತಮ್ಮ ತಂದೆಯು ಆಜ್ಞಾಪಿಸಿದ್ದ ಕಾರ್ಯವನ್ನು ಮಾನಸಿಕಮಾಡಿ, ನಿವೃತ್ತಿಮಾರ್ಗವನ್ನು ಹಿಡಿದು ಹೊರಟುಹೋದರು. ಆ ಸಂಗತಿಯನ್ನು ಕೇಳಿದ ದಕ್ಷನು ಕುಪಿತನಾಗಿ, ಪುನಃ ಶಬಲಾಶ್ವರೆಂಬ ಮಕ್ಕಳನ್ನು ಪಡೆದು, ಅವರಿಗೂ ಪೂರ್ವವಂತೆಯೇ ಆಜ್ಞಾಪಿಸಿದನು. ಆಗಲೂ ನಾರದರು ಬಂದು, ಆ ದಕ್ಷಪುತ್ರರಿಗೆ ಜ್ಞಾನೋಪದೇಶ ಮಾಡಲು ಅವರೂ ನಿವೃತ್ತಿಮಾರ್ಗವನ್ನೇ ಹಿಡಿದರು. ಆಗ ದಕ್ಷನು ಕ್ರೋಧಾ ಸಂತಪ್ತ ಮಾನಸನಾಗಿ ನಾರದರನ್ನು ಕುರಿತು - 'ನಾರದಾ, ನೀನು ಸಾಧುವೇಷದಿಂದ ನನ್ನ ಸಣ್ಣ ಹುಡುಗರಿಗೆ ಸನ್ಯಾಸ ದೀಕ್ಷೆಯನ್ನು ಕೊಟ್ಟು, ಋಣತ್ರಯದಿಂದ ಮುಕ್ತರಾಗದ ಅವರಿಗೆ ಜ್ಞಾನೋಪದೇಶಮಾಡಿ ಸಂಸಾರದಿಂದ ಬಿಡಿಸಿದೆಯಲ್ಲಾ, ಇದು ನ್ಯಾಯವೇ? ಸಂಸಾರದಲ್ಲಿದ್ದು ಕಷ್ಟ ಸುಖಾನುಭವ ಮಾಡದ ಅವರಿಗೆ ಬಾಯಿಮಾತಿನ ಬೋಧೆಯಿಂದ ಸ್ನೇಹಪಾಶವು ಹರಿದು, ವೈರಾಗ್ಯವುತ್ಪನ್ನವಾಗಿ ಜ್ಞಾನವುಂಟಾಗುವುದು ಸಾಧ್ಯವೇ? ಈ ಬಗೆಯಿಂದ ನಮ್ಮ ವಂಶಕಂಟಕನಾದುದರಿಂದ ನೀನು ಒಂದು ಸ್ಥಳದಲ್ಲಿ ನಿಲ್ಲದಂತೆ ಸರ್ವದಾ ಹೀಗೆಯೇ ಸಂಚರಿಸುತ್ತಿರು ಎಂದು ಶಾಪಕೊಟ್ಟನು. ನಾರದರಾದರೋ, ಅದನ್ನು ನಿವಾರಿಸಿಕೊಳ್ಳಲು ಸಮರ್ಥರಿದ್ದರೂ, ತಮ್ಮ ಲೋಕಸಂಗ್ರಹಣ ಕಾರ್ಯಕ್ಕೆ ಶ್ರೀಹರಿಯ ಆಜ್ಞೆಯಿಂದ ದೊರೆತ ಆ ಶಾಪವೂ ಸಹಾಯಕವಾಗಿರಬಲ್ಲುದೆಂದು ತಿಳಿದು-'ತಥಾಸ್ತು' ಎಂದು, ದಕ್ಷನ ಆ ಶಾಪವಚನವನ್ನೂ ಸಮಾಧಾನದಿಂದಲೇ ಸ್ವೀಕರಿಸಿದರು.

ಶ್ರೀ ವೇದವ್ಯಾಸಪ್ರೋಕ್ತ ಭಾಗವತದಲ್ಲಿ ನಾರದ ಮುನೀಂದ್ರರು ಭಗವತ್ಕಾರ್ಯ ಸಾಧಕರಾಗಿ ಹಲವೆಡೆಗಳಲ್ಲಿ ದೃಷ್ಟಿಗೋಚರರಾಗುತ್ತಾರೆ. ಯೋಗ್ಯಜೀವರು ಮೋಕ್ಷಮಾರ್ಗದಲ್ಲಿ ನಡೆಯಲಿಚ್ಛಿಸಿ ಸರಿಯಾದ ಮಾರ್ಗದರ್ಶಕರಿಲ್ಲದೆ ತೊಂದರೆಪಡುತ್ತಿರುವ ಸಂದರ್ಭಗಳಲ್ಲೆಲ್ಲ ನಾರದರು ಅಪ್ರಾರ್ಥಿತರಾಗಿ ಪ್ರಾಪ್ತರಾಗಿ ಅವರಿಗೆ ಸಹಾಯಕರಾಗಿ, ಜ್ಞಾನೋಪದೇಶ ಮಾಡಿ, ಅವರಿಗೆ ಶ್ರೀಮನ್ನಾರಾಯಣಮೂರ್ತಿಯ ಪರಮಾನುಗ್ರಹವು ಪ್ರಾಪ್ತವಾಗಲು ಕಾರಣರಾಗಿದ್ದಾರೆ. ಭಾಗವತದ ಚತುರ್ಥ ಸ್ಕಂಧದಲ್ಲಿ ಬರುವ

ಧ್ರುವಮಹಾರಾಜನ ಚರಿತ್ರೆಯಲ್ಲಿ ನಾರದರು ಮಾಡಿರುವ ಈ ಬಗೆಯ ಸಹಾಯವು ಚೆನ್ನಾಗಿ ವ್ಯಕ್ತವಾಗುತ್ತದೆ. ಉತ್ತಾನಪಾದರಾಜನ ಹಿರಿಯ ಹೆಂಡತಿ ಸುನೀತಿದೇವಿಯ ಮಗನಾದ ಧ್ರುವನನ್ನು, ಕಿರಿಯ ಹೆಂಡತಿಯಾದ ಸುರುಚಿಯು ರಾಜನ ಅಂಕವನ್ನೇರಗೊಡದೆ ಸಿಂಹಾಸನದಿಂದ ತಳ್ಳಲಾಗಿ ಐದುವರ್ಷದ ಬಾಲಕನಾದ ಧ್ರುವನು ಆ ಅಪಮಾನವನ್ನು ಸಹಿಸಲಾರದೆ, ತಾಯಿಯ ಬಳಿಗೆ ಹೋಗುವನು. ತಾಯಿಯು, ರಾಜನು ತನ್ನೆದುರಿಗೇ ನಡೆದ ಈ ಅತ್ಯಾಚಾರವನ್ನು ನೋಡಿಯೂ ನಿವಾರಿಸದೆಯೂ ಹಸುಬಾಲಕನೂ ತನ್ನ ಸ್ವಂತಮಗನೂ ಆದ ಧ್ರುವನನ್ನು ಸುರುಚಿಗೆ ಕೋಪಬಂದೀತೆಂಬ ಭಯದಿಂದ ಕರೆದು ಆದರಿಸದೆಯೂ ಇದ್ದುದಕ್ಕಾಗಿ ರೋಸಿ, ಮಗೂ ಧ್ರುವ, ಶ್ರೀಮನ್ನಾರಾಯಣನ ಪಾದವನ್ನೇ ನೆರೆನಂಬು. ನಮ್ಮ ಕಷ್ಟಕ್ಕಾಗಿ ಯಾರನ್ನೂ ನಿಂದಿಸಬೇಡ. ಅನಾಥ ಬಾಂಧವನಾದ ಶ್ರೀಹರಿಯೇ ನಿನ್ನೀ ಕಷ್ಟವನ್ನು ಕಳೆದು ಉದ್ಧಾರಮಾಡಲು ಸಮರ್ಥನು ಎಂದು ಹೇಳಿ ಸಮಾಧಾನಪಡಿಸಲೆತ್ನಿಸಿದಳು. ಆದರೆ ಧ್ರುವನು ಮಹಾತೇಜಸ್ವಿಯಾದುದರಿಂದ ಆ ಅಪಮಾನವನ್ನು ಸಹಿಸಿಕೊಂಡು ಸುಮ್ಮನಿರಲಿಷ್ಟಪಡದೆ, - ದೇವಾದಿದೇವನನ್ನು ಮೆಚ್ಚಿಸಿ, ತಾನು ಇಷ್ಟಪಟ್ಟಂತೆ ರಾಜಸಿಂಹಾಸನವನ್ನು ಏರುವ ಯೋಗ್ಯತೆಯನ್ನು ಆ ಜನ್ಮದಲ್ಲೇ ಪಡೆದುಕೊಂಡು ಬರುವೆನೆಂದು ಛಲಗೊಂಡು ತಾಯಿಯನ್ನು ಬಿಟ್ಟು ಹೊರಹೊರಟನು. ಕಾಡಿನಲ್ಲಿ ಕಲ್ಲುಮುಳ್ಳುಗಳನ್ನು ತುಳಿಯುತ್ತಾ ಉರಿವ ಬಿಸಿಲಿನ ತಾಪಕ್ಕೆ ಬಳಲಿ ಬೆಂಡಾಗಿ ಆದರೂ ನಿಲ್ಲದೆ ತನ್ನಧ್ಯೇಯಸಾಧನೆಯಲ್ಲೇ ಮುಂದರಿದು ಹೋಗುತ್ತಿದ್ದ ಆ ಹಸುಕಂದನಮೇಲೆ ನಮ್ಮ ಕಥಾನಾಯಕರು ಕನಿಕರಗೊಂಡು, ವನಾಂತರ ಮಾರ್ಗದಲ್ಲಿ ದೃಷ್ಟಿಗೋಚರರಾದರು.

ಧ್ರುವನ ಎಳೆಪ್ರಾಯವನ್ನು ಕಂಡು ನಾರದರು - ಅವನಿಗೆ ಪ್ರಾರಂಭದಲ್ಲಿ ಕೆಲವು ಸಮಾಧಾನದ ಮಾತುಗಳನ್ನು ಹೇಳಿಯೂ, ತರುವಾಯ ಕಾಡಿನ ಕಠಿನ ಜೀವನ ದುಷ್ಟಮೃಗಗಳ ಬಾಧೆ ಮುಂತಾದ ಕಷ್ಟಗಳನ್ನು ಕುರಿತು ಹೇಳಿಯೂ ಅವನನ್ನು ಪುನಃ ಊರಿಗೆ ಕರೆದೊಯ್ಯಲು ಯತ್ನಿಸಿದರು. ಆದರೆ, ಧ್ರುವನು ಅವರು ತೋರಿಸಿದ ಬೆದರಿಕೆಗಳಿಗೆಲ್ಲ ಜಗ್ಗದೆ ಏನಾದರಾಗಲಿ ಭಗವದ್ದರ್ಶನವಾದಲ್ಲದೆ ಹಿಂದಿರುಗಲಾರೆನೆಂದು ನುಡಿದು ಮುಂದರಿಸಿ

ದನು. ಅವನ ನಿಶ್ಚಲ ಚಿತ್ತವೃತ್ತಿಯನ್ನು ಕಂಡು ನಾರದರಿಗೆ ಪರಮಾನಂದವಾಯಿತು. ಒಡನೆ ಅವರು, –'ಮಗೂ, ಬೆದರಬೇಡ. ಭಗವಂತನು ಭಕ್ತಜನ ಸುಲಭನು. ಯಾರು ಆತನನ್ನು ಅನನ್ಯ ಶರಣರಾಗಿ ನಂಬುವರೋ ಅವರಿಗೆ ತಪ್ಪದೆ ಒಲಿಯುವನು' ಎಂದು ಧೈರ್ಯವಿತ್ತು, ಆ ಬಾಲಕನಿಗೆ ತಪಸ್ಸು ಮಾಡುವ ವಿಧಾನವನ್ನು ಕುರಿತು ತಿಳಿಯಹೇಳಿ, ಭಗವಂತನ ರೂಪ ಪರಿಚಯ ಮಾಡಿಕೊಟ್ಟುದಲ್ಲದೆ, – ಓಂ ನಮೋ ಭಗವತೇ ವಾಸುದೇವಾಯ – ಎಂಬ ಮಹಾಮಂತ್ರದ ಉಪದೇಶವನ್ನೂ ಮಾಡಿದರು. ಧ್ರುವನು ಪರಮದಯಾಳುಗಳಾದ ಅವರ ಆಜ್ಞೆಯಂತೆಯೇ ಆಚರಿಸಿ, ಅತ್ಯಲ್ಪಕಾಲದಲ್ಲೇ ಶ್ರೀಮನ್ನಾರಾಯಣನನ್ನು ಮೆಚ್ಚಿಸಿ, ಮಹಾ ಯೋಗಿಗಳಿಗೂ ಅಸಾಧ್ಯವೆನ್ನಿಸುವಂತಹ ನಕ್ಷತ್ರ ಲೋಕಾಧಿಪತ್ಯವನ್ನೂ, ಸಾಯುಜ್ಯಪದವಿಯನ್ನೂ ಸಂಪಾದಿಸಿಕೊಂಡನು. ಯೋಗ್ಯ ಅಧಿಕಾರಿಗಳೆಂದು ತೋರಿದವರಿಗೆ ನಾರದರು ಮಾಡುವ ಸಹಾಯವು ಅಪ್ರತಿಮವಾದುದು.

ಭಾಗವತದ ಷಷ್ಠಸ್ಕಂಧದಲ್ಲಿಯೂ ನಾರದರ ಪ್ರಸಂಗವಿರುವುದು. ಪುತ್ರ ಮರಣದಿಂದ ದುಃಖಿತನಾದ ಚಿತ್ರಕೇತು ರಾಜನ ಬಳಿಗೆ ಈ ಸಾಧುವರ್ಯರು ಅಂಗಿರಸಮಹರ್ಷಿಗಳೊಂದಿಗೆ ದಯಮಾಡಿಸಿ ಆತನಿಗೆ ಜ್ಞಾನೋಪದೇಶ ಮಾಡುವರು. ಆಗ ಅವರ ಯೋಗಸಾಮರ್ಥ್ಯದಿಂದ, ವಿಷಪ್ರಯೋಗದಿಂದ ಮೃತವಾಗಿದ್ದ ಚಿತ್ರಕೇತುವಿನ ಮಗುವು ಪುನರುಜ್ಜೀವಿಸಿ–'ಜೀವನು ಕರ್ಮಾಧೀನನಾಗಿ ಹಲವು ಜನ್ಮಗಳಲ್ಲಿ ಸುತ್ತುತ್ತಿರುವನು. ಅದರಂತೆ ಈ ಜನ್ಮದಲ್ಲೂ ಈ ತಂದೆತಾಯಿಗಳಲ್ಲಿ ಋಣವಿಶೇಷವಿದ್ದುದರಿಂದ ಜನಿಸಲಾಯಿತು. ಸಂತೆಯೊಳಗಿನ ನಾಣ್ಯವು ಒಬ್ಬನ ಕೈಯೊಳಗಿನಿಂದ ಮತ್ತೊಬ್ಬನ ಕೈಗೆ ಹೋಗುವಂತೆ ಜೀವನ ಸ್ಥಿತಿಯೂ ಸಹ, ಯಾವ ತಂದೆತಾಯಿಗಳ ಉದರದಲ್ಲಿ ಹುಟ್ಟಿ, ಬದುಕಿ, ಬಳಕೆ ಮಾಡುತ್ತಿರುವವರಿಗೆ ಮಾತ್ರ ಅವರೊಂದಿಗಿದ್ದು ಋಣಶೇಷವು ಕಳೆಯಿತೆಂದೊಡನೆಯೇ ತಪ್ಪಿ ಹೋಗುವುದು. ಇದಕ್ಕಾಗಿ ವ್ಯಥೆಪಟ್ಟು ಪ್ರಯೋಜನವಿಲ್ಲ'ವೆಂದುಹೇಳಿ ಪುನಃ ಮೃತವಾಗುವುದು. ರಾಜನು ಮೋಹಪಾಶದಿಂದ ಮುಕ್ತನಾಗಿ, ತನಗೆ ಉಪದೇಶಮಾಡಿ ಜನ್ಮಸಾರ್ಥಕವಾಗುವ ಮಾರ್ಗವನ್ನು ತೋರಿಸಬೇಕೆಂದು ಬೇಡುವನು. ಆಗ ನಾರದ ಮಹರ್ಷಿಗಳು, ಆತನಿಗೆ ಬ್ರಹ್ಮೋ

ಪದೇಶ ಮಾಡಿದರು. ಆತನು ಅವರ ಬೋಧನೆಯನ್ನನುಸರಿಸಿ, ಪರಮ ನಿಷ್ಠನಾಗಿ ಮಂತ್ರಜಪಮಾಡಲು, ಶೇಷಶಾಯಿಯಾದ ಶ್ರೀಮನ್ನಾರಾಯ ಣನ ಸಂದರ್ಶನವಾಗಿ ಆತನು ಪರಮಸಂತುಷ್ಟನಾದನು.

ಸಪ್ತಮಸ್ಕಂಧದಲ್ಲಿ ಬರುವ ಪ್ರಹ್ಲಾದ ಚರಿತ್ರೆಯಲ್ಲಿ, ನಾರದ ಮಹ ರ್ಷಿಗಳು ಮತ್ತೊಮ್ಮೆ ದರ್ಶನಕೊಡುವರು. ಹಿರಣ್ಯಕಶಿಪುವು, ಮಂದರ ಪರ್ವತಕ್ಕೆ ತಪಸ್ಸಿಗಾಗಿ ತೆರಳಿದ್ದ ಸಂದರ್ಭದಲ್ಲಿ, ಇಂದ್ರನು ಆ ಸಮಯ ವನ್ನು ಸಾಧಿಸಿ, ಗರ್ಭಿಣಿಯಾದ ಆತನ ಪತ್ನಿ ಕಯಾದುವನ್ನು ಅಪಹರಿಸಿ ಕೊಂಡೊಯ್ದು ಗರ್ಭಸ್ಥ ಶಿಶುವನ್ನು ಕೊಲ್ಲಲು ಉದ್ದೇಶಿಸಿದ್ದನು. ಆಗ ಶ್ರೀ ನಾರದ ಮಹರ್ಷಿಗಳು ಪ್ರತ್ಯಕ್ಷನಾಗಿ - 'ತ್ರಿಲೋಕೇಶ್ವರಾ, ನಿರಪರಾಧಿ ಸ್ತ್ರೀಯನ್ನು ಆಕೆಯ ಪತಿಯು ಇಲ್ಲದಿರುವಾಗ ಹೀಗೆ ಕೊಂಡೊಯ್ಯುವುದು ಉಚಿತವಲ್ಲ ಅಲ್ಲದೆ ಈಕೆಯ ಗರ್ಭದಲ್ಲಿ ಪರಮ ವಿಷ್ಣುಭಕ್ತನು ವಾಸಿಸು ತ್ತಿರುವನು' ಎಂದು ತಿಳಿಯ ಹೇಳಿ, ಆಕೆಯನ್ನು ತಮ್ಮ ಆಶ್ರಮಕ್ಕೆ ಕರೆ ದೊಯ್ದು, ಹಿರಣ್ಯಕಶಿಪುವು ತಪಸ್ಸನ್ನು ಮುಗಿಸಿಕೊಂಡು ಬರುವವರೆಗೆ ಕಾಪಾಡಿದರು. ಆ ಸಂದರ್ಭದಲ್ಲಿ ಅವರು ಗರ್ಭಸ್ಥ ಚೇತನನನ್ನುದ್ದೇಶಿಸಿ, ಆತನ ತಾಯಿಗೆ ಮಾಡಿದ ಬೋಧನೆಯೇ, ಪ್ರಹ್ಲಾದನು ಅಷ್ಟು ಚಿಕ್ಕ ವಯ ಸ್ಸಿನಲ್ಲೇ ಪರಮ ವಿಷ್ಣುಭಕ್ತನಾಗಲೂ, ತನ್ನನ್ನು ಕೊಲ್ಲಲು ಪ್ರಯತ್ನಿಸಿದ ದೈತ್ಯೇಶ್ವರನ ಭಯಲೇಶವೂ ಇಲ್ಲದೆ, ಶ್ರೀಹರಿಮಹಿಮೆಯನ್ನು ತನ್ನ ಒಡ ನಾಡಿಗಳಾದ ಬಾಲಕರೆಲ್ಲರಿಗೂ ಉಪದೇಶಿಸಿದುದಕ್ಕೂ, ಅನನ್ಯ ಭಕ್ತಿಭಾವ ದಿಂದ ಶ್ರೀಮನ್ನಾರಾಯಣನನ್ನು ಉಕ್ಕಿನ ಕಂಭದಲ್ಲಿ ಶ್ರೀಮನ್ನಾರಸಿಂಹ ರೂಪದಿಂದ ಪ್ರತ್ಯಕ್ಷೀಕರಿಸಿಕೊಂಡುದಕ್ಕೂ ಕಾರಣವಾಯಿತು. ಆ ಸಂದ ರ್ಭದಲ್ಲಿ ನಾರದರು, ಮಾಡಿದ ಬೋಧನೆಯು ಮನನಶೀಲವಾಗಿರುವುದರಿಂದ ಅದರ ಸಾರಾಂಶವನ್ನು ಇಲ್ಲಿ ಕೊಡುವುದು ಆವಶ್ಯಕವೆನ್ನಿಸುತ್ತದೆ-'ಆತ್ಮನು ದೇಹದಿಂದ ಭಿನ್ನನಿರುವನು. ಉತ್ಪತ್ತಿ, ಸ್ಥಿತಿ, ವೃದ್ಧಿ, ಪರಿಣಾಮ, ಸಂ ಕೋಚ, ನಾಶ ಈ ಆರು ವಿಕಾರಗಳೂ ದೇಹಕ್ಕಾಗುವುವಲ್ಲದೆ ಆತ್ಮನಿಗಲ್ಲ. ಆತ್ಮನು ನಿತ್ಯನು, ನಿರ್ವಿಕಾರನು, ನಿರ್ಮಲನು, ಅದ್ವಿತೀಯನು, ದೇಹಸಾಕ್ಷಿ ಯು, ದೇಹಧಾರಿಯು, ಕ್ರಿಯಾಶೂನ್ಯನು, ಸ್ವಯಂಪ್ರಕಾಶನು, ಸರ್ವೋತ್ಪಾ ದಕನು, ಸರ್ವವ್ಯಾಪಿಯು, ಅಲಿಪ್ತನು, ಅವೇಷ್ಟಿತನು. ಈ ಹನ್ನೆರಡು ಲಕ್ಷ

ಣಗಳಿಂದ ಆತ್ಮನು ದೇಹದಿಂದ ಭಿನ್ನನಿರುವನೆಂದು ತಿಳಿದು, ಮೋಹ ದಿಂದ ಉತ್ಪನ್ನವಾಗುವ ದೇಹದ ದುರಭಿಮಾನವನ್ನು ಬಿಟ್ಟುಬಿಡಬೇಕು. ಮಣಿಗಳ ಸರದಲ್ಲಿ ಪೋಣಿಸಿದ ದಾರವು ಒಂದೇ ಇದ್ದು, ಅದು ಎಲ್ಲಾ ಮಣಿಗಳನ್ನೂ ವ್ಯಾಪಿಸಿರುವಂತೆ ಆತ್ಮನು ಒಬ್ಬನೇ ಇದ್ದು ಸರ್ವವನ್ನೂ ವ್ಯಾಪಿಸಿರುವನು. ದಾರವು ಮಣಿಗಳಲ್ಲಿದ್ದರೂ ಅವುಗಳೊಂದಿಗೆ ಬೆರೆಯದೆ ಅಲಿಪ್ತವಾಗಿರುವುದು. ಆತ್ಮನ ಈ ನಿಶ್ಚಯ ಸ್ಥಿತಿಯನ್ನು ತಿಳಿದು, ಭವಸಾಗರದಿಂದ ದಾಟಲಿಚ್ಛಿಸುವವರು, ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮ ನಲ್ಲಿ ದೃಢಭಕ್ತಿಯು ಉತ್ಪನ್ನವಾಗುವ ಧರ್ಮಗಳನ್ನು ಆಚರಿಸಬೇಕು. ಗುರುಗಳನ್ನು ಸೇವಿಸಬೇಕು. ಸಾಧುಗಳನ್ನು ಗೌರವಿಸಬೇಕು. ಸರ್ವೇಶ್ವರ ನಾದ ಶ್ರೀಮನ್ನಾರಾಯಣನಲ್ಲಿ ಅನನ್ಯ ಭಕ್ತಿಯನ್ನಿಟ್ಟು, ಸರ್ವತ್ರಲ್ಲೂ, ಸರ್ವ ವಸ್ತುಗಳಲ್ಲೂ ಆತನ ಸಾನ್ನಿಧ್ಯವಿದೆಯೆಂದು ನಂಬಿ ಸದಾ ಹರಿಭಜನ ತತ್ಪರರಾಗಿರಬೇಕು.' ಈ ಬೋಧನೆಯೇ ಭಕ್ತ ಪ್ರಹ್ಲಾದನನ್ನು ಬಾಲ್ಯ ವಯಸ್ಸಿನಲ್ಲೂ, ಅನನ್ಯ ಭಾವದಿಂದ ಹರಿಭಜನದಲ್ಲಿ ತೊಡಗುವಂತೆ ಪ್ರೇರೇ ಪಿಸಿದುದು.

ಮುಂದೆ ಭಾಗವತ ದಶಮಸ್ಕಂಧದಲ್ಲಿ, ಭಗವಾನನು ಶ್ರೀ ಕೃಷ್ಣಾವತಾರ ಮಾಡಿದಾಗ್ಗೆ ಭಗವತ್ಕಾರ್ಯಸಾಧನೆಗಾಗಿ ನಾರದರು ಹಲವುವೇಳೆ ಪ್ರಯತ್ನಿಸಿದ್ದಾರೆ. ಮಹಾ ದುರುಳನಾದ ಕಂಸನ ಅಳಿವನ್ನು ಶೀಘ್ರವಾಗಿ ಆಗಗೊಳಿಸಿ, ಲೋಕಕ್ಷೇಮವನ್ನು ಸಾಧಿಸುವ ನಿಮಿತ್ತವಾಗಿ, ಅವನಿಗೆ ಅವನ ಶತ್ರುವೂ ಪ್ರಾಣಾಂತಕನೂ ಕೃಷ್ಣರೂಪದಿಂದ ಜನಿಸಿ ವೃಂದಾವನ ದಲ್ಲಿ ಬೆಳೆಯುತ್ತಿರುವನೆಂದು ಸೂಚಿಸಿ, ತನ್ಮೂಲಕ ಪ್ರಚೋದಿತನಾಗಿ ಅವ ನಿಂದ ಕಳುಹಿಸಲ್ಪಟ್ಟ ಹಲವುಮಂದಿ ದೈತ್ಯರು ಶ್ರೀ ಕೃಷ್ಣ ಬಲರಾಮರ ಕೈಯಿಂದ ಮೃತರಾಗಲು ಕಾರಣರಾದರು. ಶ್ರೀ ಕೃಷ್ಣನು ದ್ವಾರಕೆಯಲ್ಲಿ ವಾಸಿಸುತ್ತಿದ್ದಾಗ್ಗೆ, ಆತನ ಸರ್ವವ್ಯಾಪ್ತತೆಯನ್ನು ಲೋಕಕ್ಕೆ ಪ್ರಚುರಗೊ ಳಿಸುವ ಉದ್ದೇಶದಿಂದ ಅವರು ಆತನಲ್ಲಿಗೆ ನಡೆದು ತಮಗೊಬ್ಬ ಪತ್ನಿ ಯನ್ನು ದಯಪಾಲಿಸಬೇಕೆಂದು ಯಾಚಿಸಿದ ಕಥೆಯೂ, ನಿಶ್ಚಯವಾದ ಪಾತಿವ್ರತ್ಯ ಪ್ರಭಾವವನ್ನು ನಿರೂಪಿಸುವುದಕ್ಕಾಗಿ, ಅವರು ಸತ್ಯಭಾಮೆ ಯಿಂದ ಕೃಷ್ಣನನ್ನು ದಾನವಾಗಿ ಪಡೆದು, ಅವನ ತೂಕ ಸುವರ್ಣವನ್ನು

ಕೊಟ್ಟು ಅವನನ್ನು ಹಿಂದಿರುಗಿ ಪಡೆಯಬೇಕೆಂದು ಹೇಳಿದುದೂ, ಆ ಸಂದರ್ಭದಲ್ಲಿ ಸಮಸ್ತರ ಮನೆಯಲ್ಲಿದ್ದ ಚಿನ್ನವನ್ನು ತಂದು ಹಾಕಿದರೂ, ಹದಿನಾಲ್ಕು ಲೋಕಗಳನ್ನು ಉದರಭಾಂಡದಲ್ಲಿ ಧರಿಸಿದ ಶ್ರೀ ಕೃಷ್ಣನು ಕುಳಿತ ತಕ್ಕಡಿಯ ತಟ್ಟೆಯು ಏಳದಿದ್ದಾಗ, ಪರಮ ಪತಿವ್ರತೆಯಾದ ರುಕ್ಮಿಣೀದೇವಿಯು ಬಂದು ಚಿನ್ನವನ್ನೆಲ್ಲ ತೆಗೆಯಿಸಿ, ಪರಮ ಭಕ್ತಿಯಿಂದ ತುಳಸಾರ್ಚನೆಮಾಡಿ, ಒಂದು ದಳ ತುಳಸಿಯನ್ನು ಆ ತಟ್ಟೆಯಲ್ಲಿಡಲು, ಶ್ರೀ ಕೃಷ್ಣನ ತಟ್ಟೆಯು ಮೇಲಕ್ಕೆದ್ದ ವಿಚಿತ್ರ ಕಥೆಯೂ ಜನಜನಿತವಾಗಿ ಹೇಳಿಕೊಳ್ಳಲ್ಪಡುತ್ತಿವೆ. ನಾರದ ಮಹರ್ಷಿಗಳು ಹೀಗೆ ಭಗವಂತನು ಅಣೋರಣೀಯನೂ ಮಹತೋಮಹೀಯನೂ ಎಂಬ ಪರಮಾತ್ಮ ತತ್ವ ಸ್ವರೂಪವನ್ನು ಪ್ರಪಂಚಕ್ಕೆ ತಿಳಿಸಲಾಗಿ ಭಗವದಿಷ್ಟವನ್ನನುಸರಿಸಿ ನಡೆಸಿ ತೋರಿಸಿರುವ ಹಲವು ಕಾರ್ಯಗಳು ವಿಚಿತ್ರ ದೃಷ್ಟಿಯಿಂದ ಲೋಕಕ್ಕೆ ಕಂಡು ಬರುತ್ತವಾದರೂ, ಪ್ರಾಜ್ಞರು ಅವುಗಳಿಂದ ವ್ಯಕ್ತವಾಗುವ ತತ್ವವನ್ನು ಗ್ರಹಿಸಬೇಕಲ್ಲದೆ, ನಾರದರು ಕಲಹಶೀಲರೆಂದೂ ಚಾಡಿಕೋರರೆಂದೂ ದೂಷಿಸುವರಾದರೆ, ಅದು ಅವರ ಅಜ್ಞಾತೆಯನ್ನು ವ್ಯಕ್ತಗೊಳಿಸುವಲ್ಲದೆ, ಮತ್ತೆ ಬೇರೆಯಿಲ್ಲ.

ನಾರದರ ಜನ್ಮವು ಅತ್ಯಂತ ಪುರಾತನವಾದುದೆಂದು ಕಂಡುಬಂದಿದ್ದರೂ, ರಾಮಾಯಣದಲ್ಲಿ ಅವರ ಪ್ರವೇಶವೇ ಕಂಡುಬರುವುದಿಲ್ಲ ಮಹಾಭಾರತದಲ್ಲಿ, ಯುಧಿಷ್ಠಿರನು ಇಂದ್ರಪ್ರಸ್ಥದಲ್ಲಿ ನೂತನ ಸಭಾ ಭವನವನ್ನು ರಚಿಸಿ, ಅದರಲ್ಲಿ ಕುಳಿತು ಆಧಿಪತ್ಯ ಮಾಡುತ್ತಿದ್ದ ಒಂದು ಕಾಲದಲ್ಲಿ, ನಾರದರು ಬಂದು ಆತನ ಸಭೆಯನ್ನು ಪ್ರವೇಶಿಸಿದ್ದ ಹಾಗೂ, ಹಲವು ರಾಜನೀತಿಗಳನ್ನು ಕುರಿತು ಆತನನ್ನು ಪ್ರಶ್ನಿಸುವುದರ ಮೂಲಕ ಆತನಿಗೆ ಬೋಧನೆಯನ್ನಿತ್ತ ಹಾಗೂ ಉಲ್ಲೇಖವಿದೆ. ಮತ್ತು ಆ ಸಂದರ್ಭದಲ್ಲೇ ಅವರು ದೇವೇಂದ್ರ ಸಭೆಯಲ್ಲಿ ಹರಿಶ್ಚಂದ್ರಾದಿಗಳು ಇಂದ್ರನ ಅರ್ಧ ಸಿಂಹಾಸನದಲ್ಲಿ ಕುಳಿತು ಗೌರವಿಸಲ್ಪಟ್ಟಿರುವಲ್ಲಿ, ಪಾಂಡವರ ತಂದೆಯಾದ ಪಾಂಡುರಾಜನು ಮಾತ್ರ ಆ ಗೌರವಕ್ಕೆ ಪಾತ್ರನಾಗದಿರುವುದಕ್ಕೆ ಆತನು ರಾಜಸೂಯ ಯಾಗ ಮಾಡದಿದ್ದುದೇ ಕಾರಣವೆಂದೂ, ಈಗ ಆತನ ಮಕ್ಕಳಾದರೂ, ಆ ಯಾಗ ಮಾಡಿ ಅದರ ಫಲವನ್ನು ತಮ್ಮ ತಂದೆಗೆ ಸಮರ್ಪಿಸುವರಾದರೆ ತತ್ಫಲದಿಂದ ಆತನು ಇಂದ್ರ ಸಭೆಯಲ್ಲಿ ಮಹಾ ಗೌರವಕ್ಕೆ ಪಾತ್ರನಾಗುವ

ನೆಂದೂ ತಿಳಿಸುವರು. ಅದನ್ನನುಸರಿಸಿಯೇ ರಾಜಸೂಯಯಾಗಕ್ಕೆ ಪ್ರಯತ್ನನಡೆಯುವುದು. ಆ ಪ್ರಯತ್ನವನ್ನನುಸರಿಸಿಯೇ ಜರಾಸಂಧಾದಿಗಳ ವಧೆಯೂ ನಡೆದು ಪಾಂಡವರು ಜಗದ್ವಿಖ್ಯಾತರಾಗುವರು. ಆ ಸಂದರ್ಭದಲ್ಲೇ ಅಗ್ರಪೂಜಾವ್ಯಾಜದಿಂದ ಶಿಶುಪಾಲಾದಿ ದೈತ್ಯರ ವಧೆಯೂ ಶ್ರೀ ಕೃಷ್ಣನಿಂದ ನಡೆಯುವುದು, ಮಾತ್ರವಲ್ಲ - ಈ ರಾಜಸೂಯಯಾಗದ ಸಂದರ್ಭವನ್ನನುಸರಿಸಿಯೇ ಕೌರವ ಪಾಂಡವರಿಗೆ ಶಾಶ್ವತವಾದ ವೈಮನಸ್ಯವು ಉಂಟಾಗಿ, ಅದು ಘೋರವಾದ ಭಾರತ ಯುದ್ಧದೊಂದಿಗೇ ಪರಿಣಾಮ ಹೊಂದುವುದು.

ನಾರದ ಮಹರ್ಷಿಗಳು ದೇವಲೋಕ ಅಥವ ಮನುಷ್ಯ ಲೋಕಗಳಿಗೆ ಮಾತ್ರವಲ್ಲ, ದೈತ್ಯಾವಾಸಯೋಗ್ಯವಾದ ಪಾತಾಳಾದಿ ಲೋಕಗಳಿಗೂ ಹೋಗಿ, ಅವರಿಗೆ ಮುಂದೆ ಬರಲಿರುವ ಆಪತ್ತನ್ನು ತಿಳಿಸಿಯೋ, ಅಥವ ಅವರು ದೇವಲೋಕದಮೇಲೆ ಧಾಳಿ ಮಾಡಬೇಕೆಂದಿರುವ ಸಂದರ್ಭದಲ್ಲಿ ಅವರ ಮನೋಪ್ರವೃತ್ತಿಯನ್ನು ಕಂಡುಹಿಡಿದು ಅದನ್ನು ದೇವಲೋಕಕ್ಕೆ ತಿಳಿಸಿಯೋ ಎಂತೂ, ಹೆಚ್ಚು ಕಡಮೆ, ವಿವಿಧ ಲೋಕಗಳ ಮಧ್ಯದ ವಾರ್ತಾವಾಹಕರೋ ಎಂಬಂತೆ ಹಲವು ವೇಳೆಗಳಲ್ಲಿ ವರ್ತಿಸಿರುವರು. ಅವರ ಸಂಬಂಧದಲ್ಲಿ ಬರುವ ಯಾವ ಪುರಾಣದ ಯಾವ ಉಲ್ಲೇಖವನ್ನು ನೋಡಿದರೂ, ಅವರಿಗೆ ಸ್ವಾಗತವಿಲ್ಲದಿದ್ದ ಸ್ಥಳವಾಗಲೀ, ದೇವ ದೈತ್ಯ ದಾನವರು ಯಕ್ಷ ರಾಕ್ಷಸರು, ನಾಗ ಗಂಧರ್ವ ಮಾನವರು ಮುಂತಾದ ಯಾವಲ್ಲಾಗಲೀ ಅವರನ್ನು ಗೌರವಿಸಿ, ಅವರಲ್ಲಿ ನಮ್ರತೆಯಿಂದ ನಡೆದು ಸಲಹೆಗೊಳ್ಳಲು ಒಪ್ಪದಿದ್ದವರಾಗಲೀ ಇದ್ದಂತೆ ತೋರುವುದಿಲ್ಲ. ತನ್ನ ಕೆಲಸವನ್ನು ಹೇಗೆ, ಯಾವ ಉಪಾಯದಿಂದ ನಡೆಯಿಸುವುದು ಸಾಧುವೆಂದು, ಅವರನ್ನು ಇಂದ್ರನೂ ಕೇಳುವನು, ಕಂಸನೂ ಕೇಳುವನು, ಹಿರಣ್ಯಾಕ್ಷನೂ ಕೇಳುವನು, ಶಂಕರನೂ ಕೇಳುವನು! ಅವರಾದರೂ ಶಿಶುರೂಪಿಯಾದ ಶ್ರೀ ಕೃಷ್ಣನನ್ನು ಕೊಲ್ಲಲಿರುವನೆಂದು ಕಂಸನಿಗಾಗಲೀ, ವರಾಹ ರೂಪಿಯಾಗಿ ಭೂಮಿಯನ್ನು ಉದ್ಧರಿಸಿ ತರಲು ಹೋಗಿರುವ ಶ್ರೀ ಹರಿಯ ಕಾರ್ಯಕ್ಕೆ ವಿಘ್ನಕಾರಿಯಾದಾನೆಂದು ಹಿರಣ್ಯಾಕ್ಷನಿಗಾಗಲೀ, ಅವರ ಇಷ್ಟಕ್ಕೆ ವಿರೋಧವಾದುದೆಂದು ತೋರುವ ಸಲಹೆಯನ್ನು ಹೇಳದೆ, ಅವರ ಪ್ರಯ

ತ್ಮಕ್ಕೆ ಸಾಧಕವೆನ್ನಿಸುವ ಉಪಾಯಗಳನ್ನೇ ಸೂಚಿಸುವರು. ತ್ರಿಕಾಲಜ್ಞಾನಿಗಳೂ ತ್ರಿಲೋಕ ಸಂಚಾರಿಗಳೂ ಆದ ಅವರ ದೃಷ್ಟಿಗೆ ಮರೆಯಾದುದಾವುದೂ ಇರಲು ಸಾಧ್ಯವಿಲ್ಲವಾದುದರಿಂದ, ಪ್ರತಿಯೊಂದು ಕಾರ್ಯದ ಫಲ ಪರಿಣಾಮಗಳನ್ನೂ ಆದ್ಯಂತವಾಗಿ ಚಿಂತಿಸಿ, ಸಕಲ ಕಾರ್ಯಗಳೂ ಯಾರ ತಡೆಗೂ ನಿಲ್ಲದೆ ಶ್ರೀ ಹರಿಚಿತ್ತವಿದ್ದಂತೆ ನಡೆಯುವುದೆಂದು, ಯಾವುದಕ್ಕೂ ಅಂಟದೆ, ಯಾವುದರೊಂದಿಗೂ ಬೆರೆಯದೆ ಆ ಮಹಾಮಹಿಮರು—'ನಾಹಂ ಕರ್ತಾ ಹರಿಃಕರ್ತಾ ತತ್ಪೂಜಾ ಕರ್ಮಚಾಖಿಲಂ' ಎಂಬ ಪರಮ ಧ್ಯೇಯವನ್ನು ಸದಾ ತಮ್ಮ ಕಣ್ಣುಮುಂದೆ ಇಟ್ಟುಕೊಂಡು ಲೋಕ ಸಂಗ್ರಹಣ ತತ್ಪರರಾಗಿರುತ್ತಿದ್ದರು.—ಇದ್ದಾರೆ-ಇರುವರು.



## ಅಧ್ಯಾಯ ೫ "ಭಕ್ತಿಸೂತ್ರ"

ಸೃಷ್ಟಿಯಲ್ಲಿ, ಮನುಷ್ಯನು ಜ್ಞಾನವಂತ ಪ್ರಾಣಿಗಳಲ್ಲಿ ಉತ್ತಮ ಜೀವಿಯಾಗಿದ್ದಾನಾದುದರಿಂದ, ಜನ್ಮವನ್ನೆತ್ತಿದುದಕ್ಕೆ ಸಾರ್ಥಕ್ಯವೇನು ಎಂದು ಯೋಚಿಸಲು, ಅವನಿಗೆ ಮಾತ್ರವೇ ಸಾಧ್ಯವಿರುವುದು. ಪುರುಷಾರ್ಥಸಾಧನವೇ ಮಾನುಷಜನ್ಮಕ್ಕೆ ಸಾರ್ಥಕ್ಯವನ್ನುಂಟು ಮಾಡತಕ್ಕುದೆಂದೂ, ಅದರಲ್ಲೂ, ಪರಮಾತ್ಮಪ್ರಾಪ್ತಿಯೂ ಮತ್ತು ಪರಮಪುರುಷಾರ್ಥವೂ ಆದ ಮೋಕ್ಷಪ್ರಾಪ್ತಿಯೂ ಎಲ್ಲಕ್ಕಿಂತಲೂ ಉನ್ನತವಾದ ಮತ್ತು ಆವಶ್ಯಕವಾದ ಕರ್ತವ್ಯವೆಂದೂ, ಸಕಲ ಸಜ್ಜನರೂ ಏಕಕಂಠದಿಂದ ಒಪ್ಪಿಕೊಂಡಿದ್ದಾರೆ. ಮಹನೀಯರು ಮೋಕ್ಷಪ್ರಾಪ್ತಿಗೆ ಆವಶ್ಯಕವೆಂದು ಏರ್ಪಡಿಸಿರುವ ಮಾರ್ಗಗಳಲ್ಲಿ ಕರ್ಮ ಭಕ್ತಿ ಜ್ಞಾನಗಳೆಂಬ ಮೂರು ಮಾರ್ಗಗಳು ಸರ್ವಸಮ್ಮತವಾದುವೆನ್ನಿಸಿವೆ. ಈ ಮೂರು ಮಾರ್ಗಗಳಲ್ಲಿ ಕರ್ಮ ಮತ್ತು ಜ್ಞಾನಮಾರ್ಗಗಳು ಅಧಿಕ ಶ್ರಮಸಾಧ್ಯವಾದುವು. ಅವುಗಳನ್ನನುಸರಿಸಲು ಸಾಧಕನಿಗೆ, ಹಲವು ಗೊತ್ತಾದ ಯೋಗ್ಯತೆಗಳಿರಬೇಕಾದುದು ಆವಶ್ಯಕ. ಆದರೆ ಭಕ್ತಿಮಾರ್ಗದ ವಿಚಾರವು ಹಾಗಲ್ಲ. ಭಕ್ತಿ

ಯೆಂಬುದು ಪರಮ ಪ್ರೇಮರೂಪವಾದುದು. ಮನುಷ್ಯನ ಮನೋಧರ್ಮಕ್ಕೆ ಸಹಜವಾದುದು. ಪ್ರತಿಯೊಂದು ಪ್ರಾಣಿಯ ಮನಸ್ಸಿನಲ್ಲೂ ಪ್ರೇಮವೆಂಬ ಒಂದು ನೈಜಭಾವವು ಸ್ವಾಭಾವಿಕವಾಗಿ ಇದ್ದೇ ಇದೆ. ಈ ಪ್ರೇಮಭಾವವಿರುವುದರಿಂದಲೇ, ಈ ಪ್ರೇಮಪಾಶಬದ್ಧವಾಗಿರುವುದರಿಂದಲೇ ಪ್ರಾಣಿವರ್ಗವು ಜಗತ್ತಿನ ಸಕಲಕಾರ್ಯಗಳೂ ನಡೆಯುತ್ತಿರುವುವು. ಪಕ್ಷಿಗಳು ಎಲ್ಲೆಲ್ಲೋ ತಿರುಗಿ, ಕಾಳುಗಳನ್ನು ಸಂಗ್ರಹಿಸಿ, ಎಷ್ಟೋ ದೂರದಲ್ಲಿರುವ ತಮ್ಮ ಗೂಡಿಗೆ ಬಂದು, ಅಲ್ಲಿ ತಮಗಾಗಿ ಕಾಯುತ್ತಿರುವ ಮರಿಹಕ್ಕಿಗಳನ್ನು ಪಕ್ಕಗಳಲ್ಲಿ ಹುದುಗಿಸಿಕೊಂಡು, ಅವುಗಳಿಗೆ ತಾವು ತಂದ ಗುಟುಕನ್ನಿತ್ತು ಪೋಷಿಸುತ್ತಿರುವುದಕ್ಕೆ, ಆ ಅಜ್ಞಪ್ರಾಣಿಗಳಲ್ಲಿ ಈ ಪ್ರೇಮವೆಂಬ ಭಾವವು ಸಹಜ ಸ್ವರೂಪದಿಂದ ಇರುವುದೇ ಕಾರಣವು. ಕಾಡಿನಲ್ಲಿ ಬೇಟೆಗಾರನ ಬಾಣಕ್ಕೆ ಮೈಯೊಡ್ಡಿ, ತನ್ನ ಮರಿಯನ್ನು ಕಾಪಾಡಲೆಳಸುವ ಮೃಗದ ಹೃದಯದಲ್ಲಿ ಈ ಪ್ರೇಮಭಾವವು ರೂಪುಗೊಂಡಿಲ್ಲದಿದ್ದರೆ ಅದು ಹಾಗೆ ಮಾಡಲು ಕಾರಣವಿಲ್ಲ. ಹುಲಿ, ಹುಲ್ಲೆ-ಆಡುಆನೆಗಳೂ ತಮ್ಮತಮ್ಮ ಮರಿಗಳನ್ನೂ, ಜೊತೆಯ ಸ್ತ್ರೀಮೃಗಗಳನ್ನೂ ಪ್ರೀತಿಸಿ, ಅವುಗಳ ರಕ್ಷಣೆಗಾಗಿ ತಮ್ಮ ಶತ್ರುವರ್ಗದ ಮೃಗಗಳೊಂದಿಗೆ ಹೋರಾಡಿ ಹಲವುವೇಳೆ ಪ್ರಾಣಕೊಡಲಿಕ್ಕೂ ಹಿಂದೆಗೆಯದೆ ಇರುವುದಕ್ಕೆ, ನೈಸರ್ಗಿಕವಾಗಿ ಅವುಗಳ ಹೃದಯ ಕುಹರದಲ್ಲಿ ಪರಮಾತ್ಮನಿಂದ ಇರಿಸಲ್ಪಟ್ಟಿರುವ ಈ ಪ್ರೇಮಬೀಜವೇ ಕಾರಣವು. ಇರುವೆಯಿಂದ - ಅಣುಪ್ರಾಣಿಯಿಂದ ಬ್ರಹ್ಮಪರ್ಯಂತವಾದ ಈ ಪೃಥ್ವಿಯ ಜೀವರಾಶಿಯೆಲ್ಲವೂ, ಈ ಪ್ರೇಮಸೂತ್ರದಿಂದಲೇ ಕಟ್ಟಲ್ಪಟ್ಟಿದೆ,- ಅದರ ಬಂಧನಕ್ಕೊಳಪಟ್ಟೇ ಜೀವಿಸುತ್ತಿದೆ; ಮತ್ತು, ಈ ಪ್ರೇಮಬಂಧನಕ್ಕೊಳಪಟ್ಟೇ ಲಯಗೊಳ್ಳುತ್ತಿದೆ. ಪರಮಾತ್ಮನು ಈ ಪ್ರೇಮಪಾಶವೆಂಬೊಂದು ಸಾಧನವನ್ನು ಕಲ್ಪಿಸಿರದಿದ್ದಲ್ಲಿ ಸೃಷ್ಟಿಸ್ಥಿತಿಲಯಾದಿ ಕಾರ್ಯಗಳು ಸುರಕ್ಷಿತವಾಗಿ ನಡೆಯಲು ಸಾಧ್ಯವೇ ಇರುತ್ತಿರಲಿಲ್ಲವೆಂದು ಊಹಿಸಬಹುದಾಗಿದೆ.

ಆದುದರಿಂದ ಇಹದ ಸಕಲ ಪುರುಷಾರ್ಥಸಾಧನೆಗಳಿಗೂ, ಪಾರಲೌಕಿಕವಾದ ಮೋಕ್ಷಾರ್ಥಸಾಧನೆಗೂ ಇತರ ಮಾರ್ಗಗಳನ್ನು ಅನುಸರಿಸುವುದಕ್ಕಿಂತಲೂ, ಮನುಷ್ಯ ಸ್ವಭಾವಕ್ಕೆ ಸಹಜವಾದ ಈ ಪ್ರೇಮಮಾರ್ಗ

ವನ್ನನುಸರಿಸುವುದೇ, ಸರ್ವ ಸುಲಭವೂ-ಸಹಜವೂ ಆದ ಮಾರ್ಗವೆಂದು ಸಕಲ ಋಷಿಮುನಿಗಳೂ, ಸ್ಮೃತಿಕರ್ತರೂ, ಜ್ಞಾನಿಗಳೂ, ಆಚಾರ್ಯ ಪುರುಷರೂ ಅಭಿಪ್ರಾಯಪಟ್ಟಿದ್ದಾರೆ. ಪ್ರೇಮವೆಂಬ ಪದವನ್ನು ನಾವು ಮೇಲಿನಿಂದ ಹೇಳಿಕೊಂಡು ಬಂದ, ಸಹಜಭಾವದಲ್ಲೇ ಅರ್ಥಮಾಡಿ ಕೊಳ್ಳಬೇಕಲ್ಲದೆ, ಕಾಂತಾಜನಕ್ಕೆ ವಿಟನಲ್ಲಿರುವ ಅಥವ ಕಾಮುಕನಿಗೆ ತನ್ನ ಪ್ರೇಯಸಿಯಲ್ಲಿರುವ ಹೇಯವಾದ ಕಾಮವನ್ನೇ ಪ್ರೇಮವೆಂದು ಅಭಿ ಪ್ರಾಯಮಾಡಿಕೊಳ್ಳಬಾರದು. ಕಾಮವೆಂಬುದರಲ್ಲೂ ಪ್ರೇಮದ ಗಂಧವಿ ಲ್ಲದೆ ಇಲ್ಲ. ಇದೆ ಆದರೆ ಕಾಮವೆಂಬುದು, ಗಿಡದ ಬುಡಕ್ಕೆ ಹಾಕಿರುವ ಗೊಬ್ಬರದ ಸಾರ; ಪ್ರೇಮವೆಂಬುದು ಪಕ್ವಫಲದಲ್ಲಿರುವ ರುಚಿಕರವಾದ ರಸ ಗೊಬ್ಬರದ ಸಾರವು, ವೃಕ್ಷದ ನಾಳನಾಳಗಳಲ್ಲೂ ಪ್ರವೇಶಿಸಿ, ಸೂರ್ಯ ಕಿರಣಗಳಿಂದಲೂ, ಪ್ರಕೃತಿ ಧರ್ಮದಿಂದಲೂ ಅಸಂಖ್ಯಬದಲಾವಣೆಗಳನ್ನು ಹೊಂದಿದರಲ್ಲದೆ ಹಣ್ಣಿನಲ್ಲಿನ ಪಕ್ವರಸವಾಗಲು ಹೇಗೆ ಸಾಧ್ಯವಾದೀತು? ಹಾಗೆಯೇ ಕಾಮವೇ ಪ್ರೇಮವಾಗಬೇಕಾದರೂ ಅದು ಅನೇಕಾನೇಕ ಸಂ ಸ್ಕಾರಗಳಿಗೆ ಒಳಪಡದಿದ್ದರೆ ಸಾಧ್ಯವಿಲ್ಲ. ತಿರ್ಯಕ್ಪ್ರಾಣಿಗಳಿಂದ ಪ್ರಾರಂ ಭಿಸಿ ಪಶುವರ್ಗದವರೆಗೂ ಈ ನೈಸರ್ಗಿಕವಾದ ಪ್ರೇಮವು ಕಾಮವೆಂಬ ಕೇವಲ ತನ್ನ ಅಸಂಸ್ಕೃತಸ್ಥಿತಿಯಲ್ಲೇ ಇದ್ದುಬಿಡುವುದು. ಜ್ಞಾನಪ್ರಧಾನ ವಾದ ಮನುಷ್ಯಜನ್ಮದಲ್ಲಿಯಾದರೂ, ಈ ಕಾಮವು ಪ್ರೇಮವಾಗಿ ಮಾರ್ಪ ಡಬೇಕು. ಹಾಗಲ್ಲದಿದ್ದರೆ ಜ್ಞಾನಶೂನ್ಯ ಪಶುವಿಗೂ ಜ್ಞಾನವಂತ ಮಾನ ವನಿಗೂ ಏನು ವ್ಯತ್ಯಾಸವಿದ್ದಂತಾಯಿತು.

ಕಾಮ ಪ್ರೇಮಗಳಿಗಿರುವ ಅಂತರವನ್ನು ಮೇಲೆ ಸ್ವಲ್ಪಮಟ್ಟಿಗೆ ಹೇಳಿದ್ದಾಯಿತಲ್ಲವೆ? ಇನ್ನು ಪ್ರೇಮಕ್ಕೂ ಪರಮಾತ್ಮಪ್ರಾಪ್ತಿಗೆ ಆವಶ್ಯಕ ವಾದ ಅನನ್ಯಭಕ್ತಿಗೂ ಇರುವ ಅಂತರವನ್ನು ಕುರಿತೂ ಸ್ವಲ್ಪ ವಿಚಾರ ಮಾಡಬೇಕಾಗುತ್ತದೆ. ಪ್ರೇಮ ಭಕ್ತಿಗಳೆರಡೂ, ಒಂದೇ ವಸ್ತುವಿನ ಆದಿ ಅಂತ್ಯಸ್ಥಿತಿಗಳಷ್ಟೇ! ಪ್ರೇಮವು ಆಗತಾನೆ ಪುಷ್ಪಪಾತ್ರೆಯ ಪತ್ರಗಳುದುರಿ, ದೃಷ್ಟಿಗೋಚರವಾಗುವ ಎಳೆಯ ಹೀಚಿನಂತೆ, ಭಕ್ತಿಯು ಪಕ್ವಫಲದಂತೆ; ಪ್ರೇಮವು ರಕ್ಷಾಪತ್ರಗಳಿಂದ ಆವೃತವಾಗಿರುವ ಮೊಗ್ಗಿನಂತಿದ್ದರೆ, ಭಕ್ತಿ ಯು ಪೂರ್ಣವಿಕಸಿತವಾದ ಮನೋಹಾರಕ ಪುಷ್ಪದಂತಿರುವುದು, ಅಷ್ಟೆ!

ಕುಟುಂಬದಲ್ಲಿ ತಾಯಿತಂದೆಗಳು ಗುರು ಸ್ವಾಮಿ ಇವರ ವಿಷಯದಲ್ಲಿರುವ ಈ ಪ್ರೇಮವೇ, ಮಾತಾಪಿತೃಭಕ್ತಿ, ಗುರುಭಕ್ತಿ, ಸ್ವಾಮಿಭಕ್ತಿಯೆನ್ನಿಸಿಕೊಳ್ಳುವುದು. ಮಾತಾಪಿತೃಗಳಿಗೂ, ಗುರುಗಳಿಗೂ, ತಮ್ಮ ಮಕ್ಕಳಲ್ಲಿಯೂ ಶಿಷ್ಯರಲ್ಲಿಯೂ ಇರುವ ಪ್ರೇಮವು ವಾತ್ಸಲ್ಯವೆನ್ನಿಸಿಕೊಳ್ಳುವುದು. ಮಾನಸ ಸ್ವಭಾವಕ್ಕೆ ಸಹಜವಾದ, ಇಂತಹ ಪ್ರೇಮವನ್ನೇ ಅಭಿವೃದ್ಧಿಗೊಳಿಸಿ, ಸಕಲ ಲೋಕಸಂರಕ್ಷಕನೂ, ಪರಮ ಬಂಧುವೂ, ದೇವಾದಿದೇವನೂ ಆಪದುದ್ಧಾರಕನೂ ಆದ ಸ್ವಾಮಿಯ ಪಾದಕಮಲಗಳಲ್ಲಿ ನಿರಂತರವಾಗಿ ಪ್ರವಹಿಸುವಂತೆ ಮಾಡಿಬಿಟ್ಟರೆ ಅದೇ ಭಕ್ತಿಯೆನ್ನಿಸಿಕೊಂಡು ಮೋಕ್ಷಾದಿ ಪರಮಪುರುಷಾರ್ಥಗಳನ್ನು ಕೈಗೂಡಿಸಿಕೊಡಲು ಪರಮ ಸಾಧನವಾಗಿರುವುದು. ತಂದೆತಾಯಿ ಅಣ್ಣತಮ್ಮ ಅಕ್ಕತಂಗಿ, ಹೆಂಡಿರು ಮಕ್ಕಳು ಧನಕನಕಗಳು ಎಂಬ ನಶ್ವರವಾದ ವಸ್ತುಗಳಲ್ಲಿರುವ ನಮ್ಮ ಪ್ರೇಮವು ಆ ವಸ್ತುಗಳ ನಷ್ಟದಲ್ಲಿ ನಷ್ಟವಾಗುವುದು ಮಾತ್ರವಲ್ಲದೆ, ಅಧಿಕ ದುಃಖವನ್ನು ಪ್ರಾಪ್ತಮಾಡುವುದಾಗುವುದು. ಆದರೆ ಶಾಶ್ವತನೂ ಸನಾತನನೂ ಆದ ವೈಕುಂಠಾಧಿಪತಿಯ ಪಾದಾರವಿಂದಗಳಲ್ಲಿ ಮಾಡುವ ಪ್ರೇಮವು-ಭಕ್ತಿಯು ಎಂದಿಗೂ ಚ್ಯುತಿಯಿಲ್ಲದೆ ಇರುವುದು ಮಾತ್ರವಲ್ಲದೆ, ದಿನದಿನಕ್ಕೂ ಬೆಳೆದು, ಬೆಳೆಯುತ್ತ ಬೆಳೆಯುತ್ತ ಆನಂದಪ್ರದವಾಗಿ, ಕೊನೆಯಲ್ಲಿ ಪರಮಾನಂದ ಸಾಮ್ರಾಜ್ಯವನ್ನೇ ಹಸ್ತಗತಮಾಡಿಕೊಡುವುದು. ಭಕ್ತಿಯೆಂಬುದು ಜ್ಞಾನ ಮತ್ತು ಕರ್ಮಗಳಂತಲ್ಲದೆ, ಹಟಯೋಗಾದಿ ಸಾಧನಗಳಂತಲ್ಲದೆ ಸಿರಪಾಯ ಸಾಧನವಾಗಿರುವುದು. ಇತರ ಮಾರ್ಗಗಳನ್ನನುಸರಿಸುವವನಿಗೆ ತನ್ನ ಸ್ಥಾನದಿಂದ ಚ್ಯುತನಾಗುವ ಭಯವುಂಟು! ಆದರೆ, ಸರ್ವಸುಲಭವಾದ ಈ ಮಾರ್ಗದಲ್ಲಿ ಯಾವಭಯಕ್ಕೂ ಆಸ್ಪದವಿಲ್ಲ. ಅಶಕ್ತರೂ, ಅಂಧರೂ, ಬಧಿರರೂ, ದೀರ್ಘರೋಗಬಾಧಾಪೀಡಿತರೂ, ಬಾಲಕರೂ, ವೃದ್ಧರೂ, ಅಪ್ರಬುದ್ಧರೂ, ಸ್ತ್ರೀಯರೂ, ಅಕ್ಷರಸ್ಥರೂ, ನಿರಕ್ಷರಿಗಳೂ, ಇವರವರೆನ್ನದೆ ಸಕಲರೂ ಈ ಮಾರ್ಗವನ್ನನುಸರಿಸಿ ಭಗವಂತನಲ್ಲಿ ಶರಣುಬಿದ್ದು ಜನ್ಮಸಾರ್ಥಕ್ಯದ ಉಪಾಯವನ್ನು ಕಂಡುಕೊಳ್ಳಲು ಅವಕಾಶವುಂಟು. ಆದುದರಿಂದ ದಯಾನಿಧಿಯಾದ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ:—

ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಸತ್ಯಂತೇ ಪ್ರತಿಜಾನೇಪ್ರಿಯೋಸಿಮೇ ।
ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥

ಎಂದರೆ, ನನ್ನ ಸ್ಮರಣೆಯುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನು ಆರಾಧಿಸು, ನನಗೆ ನಮಸ್ಕರಿಸು, ನೀನು ನನ್ನನ್ನೇ ಹೊಂದುವೆ. ಇದು ನಿಜವು. ನಾನು ಖಂಡಿತವಾಗಿ ನಿನಗೆ ಹೇಳುವೆನು. ನೀನು ನನಗೆ ಪ್ರಿಯನಾಗಿರುತ್ತೀಯೆ,—ಇತರ ಸಮಸ್ತ ಧರ್ಮಗಳನ್ನೂ ಪರಿತ್ಯಾಗಮಾಡಿ ನನ್ನನ್ನೇ ಶರಣುಹೊಂದು. ನಾನು ನಿನ್ನನ್ನು ಸಮಸ್ತ ಪಾಪಗಳ ದೆಸೆಯಿಂದಲೂ ಬಿಡಿಸುವೆನು. ವ್ಯಸನಪಡಬೇಡ.

ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾಪ್ರಯಚ್ಛತಿ
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ

ಯಾವನು ನನಗೋಸ್ಕರ ಭಕ್ತಿಯಿಂದ ತುಲಸಿಯೇ ಮೊದಲಾದ ಪತ್ರವನ್ನಾದರೂ, ಪುಷ್ಪವನ್ನಾದರೂ, ಫಲವನ್ನಾದರೂ, ನೀರನ್ನಾದರೂ ಕೊಡುತ್ತಾನೆಯೋ, ಶುದ್ಧ ಮನಸ್ಕನಾದ ಆ ಭಕ್ತನು, ಸಮರ್ಪಣೆಮಾಡಿದ ಅದನ್ನು ನಾನು ಪ್ರೇಮದಿಂದ ಸ್ವೀಕರಿಸುವೆನು ಎಂದು ನುಡಿದು, ಭಕ್ತಿಯ ಪ್ರಶಸ್ತಿಯನ್ನು ಕೊಂಡಾಡಿರುವನು.

ಇಷ್ಟುಮಟ್ಟಿನ ವಿವರಣೆಯಿಂದ ಭಕ್ತಿಯೇ ಭವರೋಗದಿಂದ ಮುಕ್ತರಾಗಲು ಸಾಧುವಾದ ಮಾರ್ಗವೆಂಬ ವಿಚಾರವು ಲೇಶಮಾತ್ರವಾದರೂ ಗೋಚರವಾಗಬಹುದಷ್ಟೆ! ಇಂತಹ ಭಕ್ತಿಮಾರ್ಗವನ್ನು ಸ್ಥಾಪಿಸಿದ ಆಚಾರ್ಯರೇ ನಮ್ಮ ಕಥಾನಾಯಕರಾದ ನಾರದ ಮಹರ್ಷಿಗಳು. ಇದನ್ನು ದಾಸಶ್ರೇಷ್ಠರಾದ ಶ್ರೀ ಪುರಂದರದಾಸಾರ್ಯರು:—

"ನಾರಾಯಣನೆಂಬ ನಾಮದ ಬೀಜವ ನಾರದಬಿತ್ತಿದ ಧರೆಯೊಳಗೆ"

ಎಂದು ಹಾಡಿ, ಭಕ್ತಿ ವೃಕ್ಷವು ಬೆಳೆಯಲು ಬೀಜಭೂತವಾದ ನಾರಾಯಣನೆಂಬ ಭಗವನ್ನಾಮವನ್ನು ಜಪಿಸಬೇಕಾದುದರ ರಹಸ್ಯವನ್ನು ಸೂಚಿಸಿ

ದ್ವಾರೆ. ಭಕ್ತಿಯೋಗ ರಹಸ್ಯಗಳನ್ನೂ, ಭಕ್ತನ ಸ್ಥಿತಿಯನ್ನೂ ಕರ್ತವ್ಯಗಳನ್ನೂ ಚೆನ್ನಾಗಿಯೂ ವಿಸ್ತಾರವಾಗಿಯೂ, ಶ್ರೀಮದ್ಭಾಗವತ, ಭಗವದ್ಗೀತಾ, ಶ್ರೀಶಾಂಡಿಲ್ಯ ಭಕ್ತಿಸೂತ್ರ, ರಾಮಾಯಣ ಭಾರತಾದಿ ಇತಿಹಾಸಗಳು ಮುಂತಾದುವು ವಿಸ್ತಾರವಾಗಿ ವಿವರಿಸುತ್ತಿರುವುವು. ನಮ್ಮ ಕಥಾನಾಯಕರೂ ಒಂದು ಭಕ್ತಿಸೂತ್ರವನ್ನು ರಚಿಸಿರುವರು. ನಾರದರಿಂದ ಪ್ರಣೀತವಾದ ಭಕ್ತಿಸೂತ್ರವು *ಶ್ರೀನಾರದ ಭಕ್ತಿಸೂತ್ರವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು. ಇದರಲ್ಲಿ ಎಂಭತ್ನಾಲ್ಕು ಸೂತ್ರಗಳಿದ್ದು ಅವುಗಳಲ್ಲಿ ಭಕ್ತಿಮಾರ್ಗವನ್ನನುಸರಿಸಲು ಆವಶ್ಯಕವೆನ್ನಿಸುವ ಸಕಲ ಸಾಧನಗಳನ್ನೂ ಶ್ರೀಮನ್ನಾರದ ಮಹರ್ಷಿಗಳು, ವಿಸ್ತಾರವಾಗಿ ವರ್ಣಿಸಿರುವರು. ಅವುಗಳಲ್ಲಿ ಕೆಲವನ್ನು ಮಾದರಿಗಾಗಿ, ಮೇಲ್ಕಂಡ ಗ್ರಂಥದಿಂದಲೇ ಉದ್ಧರಿಸಿ, ಇಲ್ಲಿ ಕೊಡುತ್ತೇನೆ.

ಸೂತ್ರ ೧ ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ

ಈಗ ನಾವು ಭಕ್ತಿಯನ್ನು ವಿವರಿಸುವೆವು.

೨ ಸಾ ತಸ್ಮಿನ್ ಪರಮಪ್ರೇಮರೂಪಾ

ಅದು ಅವನಲ್ಲಿ (ಭಗವಂತನಲ್ಲಿ) ಪರಮ ಪ್ರೇಮರೂಪವಾದುದು.

೩ ಅಮೃತ ಸ್ವರೂಪಾಚ

ಅದು ಅಮೃತದ ಸ್ವಭಾವವನ್ನುಳ್ಳುದಾಗಿರುವುದು.

೪ ಯಲ್ಲಬ್ಧ್ವಾ ಪುಮಾನ್ ಸಿದ್ಧೋಭವತಿ, ಅಮೃತೋಭವತಿ, ತೃಪ್ತೋಭವತಿ

ಅದನ್ನು ಹೊಂದಿದಮೇಲೆ ಮನುಷ್ಯನು ಸಿದ್ಧನಾಗುವನು, ಅಳಿವಿಲ್ಲದವನಾಗುವನು, ತೃಪ್ತನಾಗುವನು.

---

*ಈ ಉತ್ಕೃಷ್ಟ ಗ್ರಂಥವು ವಿಶೇಷ ವಿವರಣೆಗಳೊಂದಿಗೆ ರಿ| ಅ| ಕಮಿಷನರ್ ಶ್ರೀ. ಎಂ. ಎ. ತಿರುಮಲಾಚಾರ್ಯರಿಂದ ಪ್ರಕಟಿಸಲ್ಪಟ್ಟಿರುವುದು. ಬೆಲೆ. ೨ ಆಣೆ.

೫ ಯತ್ಪ್ರಾಪ್ಯ ನ ಕಿಂಚಿದ್ವಾಂಛತಿ, ನಶೋಚತಿ, ನದ್ವೇಷ್ಟಿ, ನರಮತೇ, ನೋತ್ಸಾಹೀ ಭವತಿ.

ಅದನ್ನು ಹೊಂದಿದವನು ಆವುದನ್ನೂ ಬಯಸನು, ದುಃಖಪಡೆನು, ದ್ವೇಷಿಸನು, ರಮಿಸನು, ಲೌಕಿಕ ವಿಚಾರಗಳಲ್ಲಿ ಉತ್ಸಾಹಗೊಳ್ಳನು.

೬ ಯದ್ಜ್ಞಾತ್ವಾ ಮತ್ತೋಭವತಿ, ಸ್ತಬ್ಧೋಭವತಿ, ಆತ್ಮಾರಾಮೋಭವತಿ.

ಅದನ್ನು ಅರಿತಮೇಲೆ ಅವನು ಮತ್ತನಾಗುವನು. ಸ್ತಬ್ಧನಾಗುವನು, ಆತ್ಮನಲ್ಲಿ ತೃಪ್ತಿಯುಳ್ಳವನಾಗುವನು.

ಭಕ್ತಿಯೋಗವನ್ನು ಪಡೆದ ಭಕ್ತನ ಸ್ವರೂಪವನ್ನು ವರ್ಣಿಸಿದ ತರುವಾಯ, ಭಕ್ತಿಯ ನಿಶ್ಚಯ ಸ್ವರೂಪವೆಂಥದೆಂಬುದನ್ನು ವರ್ಣಿಸುತ್ತಾರೆ.

೭ ಸಾ ನ ಕಾಮಯಮಾನಾ ನಿರೋಧರೂಪತ್ವಾತ್

ಅದು (ಭಕ್ತಿಯು) ಆಶಾಯುಕ್ತವಾದುದಲ್ಲ; ಅದು ಸಕಲ ಆಸೆಗಳನ್ನೂ ಅಡಗಿಸುವುದು.

೮ ನಿರೋಧಸ್ತು ಲೋಕವೇದ ವ್ಯಾಪಾರನ್ಯಾಸಃ

'ಆಸೆಗಳನ್ನು ಅಡಗಿಸುವುದು' ಎಂದರೆ ಸಮಸ್ತವಾದ ಲೌಕಿಕ ವೈದಿಕ ವ್ಯಾಪಾರಗಳನ್ನೂ ಭಗವಂತನಲ್ಲಿ ಸಮರ್ಪಣೆಮಾಡುವುದು.

೯ ತಸ್ಮಿನ್ನನನ್ಯತಾ, ತದ್ವಿರೋಧಿಷು ಉದಾಸೀನತಾ ಚ

ಭಗವಂತನಲ್ಲಿ ಏಕಮನಸ್ಕತೆ, ಅವನಿಗೆ ಹಗೆಯಾದುವುಗಳಲ್ಲಿ ಉದಾಸೀನತೆ.

೧೦ ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ

ಮತ್ತಾವ ವಿಧವಾದ ಅವಲಂಬನಗಳನ್ನೂ ಬಿಟ್ಟುಬಿಡುವುದು ಅನನ್ಯತೆಯೆನಿಸುವುದು.

೧೧ ಲೋಕವೇದೇಷು ತದನುಕೂಲಾಚರಣಂ, ತದ್ವಿರೋಧಿಷು ಉದಾಸೀನತಾ

ಲೌಕಿಕ ವೈದಿಕ ವಿಷಯದಲ್ಲಿಯೂ, ಅವನಿಗೆ (ಭಗವಂತನಿಗೆ) ಅನುಕೂಲವಾದುದನ್ನು (ಇಷ್ಟವಾದುದನ್ನು) ಮಾಡಬೇಕು ; ಅಲ್ಲದುದರಲ್ಲಿ ಔದಾಸೀನ್ಯವನ್ನು ತೋರಿಸಬೇಕು. ಭಕ್ತಿಯ ನಿಶ್ಚಯ ಸ್ವರೂಪವನ್ನು ವಿವರಿಸಿದ ತರುವಾಯ, ಆ ಮಾರ್ಗವನ್ನನುಸರಿಸಿದವರು ಶಾಸ್ತ್ರದೃಷ್ಟಿಯಿಂದ ಹೇಗೆ ನಡೆಯಬೇಕೆಂಬುದನ್ನು ವಿವರಿಸುತ್ತಾರೆ.

೧೨ ಭವತು ನಿಶ್ಚಯದಾರ್ಢ್ಯಾದೂರ್ಧ್ವಂ ಶಾಸ್ತ್ರರಕ್ಷಣಂ

ಭಗವಂತನಲ್ಲಿ ದೃಢವಾದ ಭಕ್ತಿಯು ಉಂಟಾಗುವವರೆಗೂ ಶಾಸ್ತ್ರದ ಕಟ್ಟಳೆಗಳನ್ನು ನಡೆಯಿಸಬೇಕು.

೧೩ ಅನ್ಯಥಾಪಾತಿತ್ಯ ಶಂಕಯಾ

ಇಲ್ಲದಿದ್ದರೆ ಪಾತಿತ್ಯ ಶಂಕೆಯುಂಟು.

೧೪ ಲೋಕೋಪಿತಾವದೇವ ; ಭೋಜನಾದಿ ವ್ಯಾಪಾರಸ್ತ್ವಾಶರೀರ ಧಾರಣಾವಧಿ

ಲೋಕಮರ್ಯಾದೆಗಳೂ ಅಲ್ಲಿಯವರೆಗೆ ನಡೆಯಿಸಲ್ಪಡತಕ್ಕದು. ಆದರೆ ಭೋಜನಾದಿಕಾರ್ಯಗಳು ದೇಹವಿರುವವರೆಗೂ ನಡೆಯಬೇಕು.

ಭಕ್ತಿಯನ್ನು ಹೇಗೆ ಆಚರಿಸಬೇಕೆಂಬುದನ್ನು ಕುರಿತು ಕೆಲವು ಸೂತ್ರಗಳನ್ನು ಹೇಳಿದ್ದಾರೆ.

೨೧ ಯಥಾ ವ್ರಜಗೋಪಿಕಾನಾಂ

ಬೃಂದಾವನದ ಗೋಪಸ್ತ್ರೀಯರಂತೆ.

೨೨ ನ ತತ್ರಾಪಿ ಮಾಹಾತ್ಮ್ಯಜ್ಞಾನ ವಿಸ್ಮೃತ್ಯಪವಾದಃ
ಅಲ್ಲಿ ಕೂಡ ಭಗವಂತನ ಮಾಹಾತ್ಮ್ಯ ಜ್ಞಾನವನ್ನು ಮರೆತಿರುವ ಅಪವಾದವಿಡುವುದಿಲ್ಲ

೨೩ ತದ್ವಿಹೀನಂ ಜಾರಾಣಾಮಿವ
ಭಗವನ್ಮಾಹಾತ್ಮ್ಯಜ್ಞಾನದ ಅರಿವಿಲ್ಲದಿದ್ದರೆ ಜಾರರ ಪ್ರೀತಿಯಂತಾಗುವುದು.

ಭಕ್ತಿಪ್ರಾಪ್ತಿಯ ಮಾರ್ಗವನ್ನು ಹೇಳುತ್ತಾ—

೩೫ ತತ್ತು ವಿಷಯತ್ಯಾಗಾತ್, ಸಂಗತ್ಯಾಗಾಚ್ಚ
ಅದು ವಿಷಯಗಳನ್ನು ಬಿಡುವಿಕೆಯಿಂದಲೂ, ಲೌಕಿಕ ಜನರ ಸಂಗವನ್ನು ತೊರೆಯುವುದರಿಂದಲೂ—

೩೬ ಅವ್ಯಾವೃತ್ತ ಭಜನಾತ್
ಎಡೆಬಿಡದೆ ಯಾವಾಗಲೂ ಭಗವಂತನನ್ನು ಭಜಿಸಿಕೊಂಡಿರುವುದರಿಂದಲೂ—

೩೭ ಲೋಕೋಽಪಿ ಭಗವದ್ಗುಣಶ್ರವಣ ಕೀರ್ತನಾತ್
ಜನರ ಗುಂಪಿನಲ್ಲಿದ್ದರೂ, ಭಗವಂತನ ಗುಣಗಳನ್ನು ಕೇಳುವುದರಿಂದಲೂ ಕೊಂಡಾಡುವುದರಿಂದಲೂ

೩೮ ಮುಖ್ಯತಸ್ತು ಮಹತ್ಕೃಪಯೈವ ಭಗವತ್ಕೃಪಾಲೇಶಾದ್ವಾ
ಆದರೆ ಮುಖ್ಯವಾಗಿ, ಭಕ್ತಿಯು ದೊಡ್ಡವರ ಅನುಗ್ರಹದಿಂದ ಅಥವ ಭಗವಂತನ ಕೃಪಾಲೇಶದಿಂದಲೇ ಪ್ರಾಪ್ತವಾಗುವುದು. ಎಂದು ಅಪ್ಪಣೆ ಕೊಡಿಸಿದ್ದಾರೆ.

ಭಕ್ತಿಸಾಧನೆಗೆ ವಿರೋಧಗಳಾದ ಆಚರಣೆಗಳನ್ನು ಕುರಿತು ಹೇಳುತ್ತಾ,

೪೩ ದುಸ್ಸಂಗಃ ಸರ್ವಥೈವ ತ್ಯಾಜ್ಯಃ
ಕೆಟ್ಟ ಸಹವಾಸವು ಎಲ್ಲಾ ವಿಧದಿಂದಲೂ ಬಿಡಲ್ಪಡಬೇಕು.

೪೪ ಕಾಮ ಕ್ರೋಧ ಮೋಹ ಸ್ಮೃತಿಭ್ರಂಶಬುದ್ಧಿನಾಶ ಸರ್ವನಾಶ ಕಾರಣತ್ವಾತ್
ಏಕೆಂದರೆ ಅದರಿಂದ ಕಾಮವೂ, ಕೋಪವೂ, ಮೋಹವೂ, ಮರವೆಯೂ ಬುದಿನಾಶವೂ, ಇಹಪರ ಸಂಬಂಧವಾದ ಸರ್ವ ಸುಖನಾಶವೂ ಉಂಟಾಗುವುದು,

೬೩ ಸ್ತ್ರೀಧನನಾಸ್ತಿಕ ಚರಿತ್ರಂ ನಶ್ರವಣೀಯಂ

ಹೆಂಗಸು, ಹಣ, ನಾಸ್ತಿಕನು, ಇವರ ವಿಷಯವನ್ನು ಶ್ರವಣ ಮಾಡಕೂಡದು.

೬೪ ಅಭಿಮಾನ ದಂಭಾದಿಕಂ ತ್ಯಾಜ್ಯಂ
ಅಹಂಕಾರ ದಂಭ ಮುಂತಾದುವು ಬಿಡಲ್ಪಡಬೇಕು.
ಎಂದು ಎಚ್ಚರಿಸಿದ್ದಾರೆ.
ತರುವಾಯ ಭಕ್ತರ ಪಾವಿತ್ರ್ಯತೆಯನ್ನು ವರ್ಣಿಸುತ್ತಾರೆ.

೬೯ ತೀರ್ಥೀಕುರ್ವಂತಿ ತೀರ್ಥಾನಿ, ಸುಕರ್ಮೀಕುರ್ವಂತಿಕರ್ಮಾಣಿ. ಸಚ್ಛಾಸ್ತ್ರೀಕುರ್ವಂತಿ ಶಾಸ್ತ್ರಾಣಿ
ಭಕ್ತರು ಕ್ಷೇತ್ರಗಳಿಗೆ ಪರಿಶುದ್ಧತೆಯನ್ನೂ, ಮಾಡುವ ಕಾರ್ಯಗಳಿಗೆ ಪವಿತ್ರತೆಯನ್ನೂ ಉಂಟುಮಾಡುತ್ತಾರೆ. ಶಾಸ್ತ್ರಗಳನ್ನು ಒಳ್ಳೆಯ ಶಾಸ್ತ್ರಗಳನ್ನಾಗಿ ಮಾಡುತ್ತಾರೆ.

೭೦ ತನ್ಮಯಾಃ—
ಭಕ್ತರು ಒಳಗೂ ಹೊರಗೂ ಎಲ್ಲೆಲ್ಲಿಯೂ ಭಗವಂತನನ್ನೇ ನೋಡುತ್ತಲೂ ಅನುಭವಿಸುತ್ತಲೂ ಇರುವರು.

೭೧ ಮೋದಂತೆ ಪಿತರೋ ನೃತ್ಯಂತಿ ದೇವತಾಸ್ಸನಾಥಾ ಚೇಯಂ ಭೂರ್ಭವತಿ
ಅವರ ಹಿರಿಯರು ಸಂತೋಷಿಸುವರು, ದೇವತೆಗಳು ಕುಣಿಯುವರು, ಈ ಭೂಮಿಯೂ ಕೂಡ ಯಜಮಾನನುಳ್ಳದ್ದಾಗುವುದು.

೭೨ ನಾಸ್ತಿತೇಷು ಜಾತಿ ವಿದ್ಯಾರೂಪ ಕುಲ ಧನ ಕ್ರಿಯಾದಿ ಭೇದಃ
ಅವರಲ್ಲಿ ಜಾತಿ, ವಿದ್ಯೆ, ರೂಪ, ವಂಶ, ಧನ, ಕ್ರಿಯೆ ಮುಂತಾದ ವ್ಯತ್ಯಾಸಗಳೇನೂ ಇರುವುದಿಲ್ಲ.

ಎಂದು ಹೇಳಿ, 'ವಾದೋ ನಾವಲಂಬ್ಯಃ' ಎಂದರೆ ಭಕ್ತಿ ವಿಷಯದಲ್ಲಿ ಸುಮ್ಮನೆ ಚರ್ಚೆಮಾಡಲಾಗದು, ಎಂದೆಚ್ಚರಿಸಿ,

೭೬ ಭಕ್ತಿ ಶಾಸ್ತ್ರಾಣಿ ಮನನೀಯಾನಿ, ತದ್ವರ್ಧಕ ಕರ್ಮಾಣಿ ಕರಣೀಯಾನಿ.
ಭಕ್ತಿಬೋಧಕವಾದಶಾಸ್ತ್ರಗಳನ್ನು ಚೆನ್ನಾಗಿಚಿಂತನೆಮಾಡಬೇಕು ಭಕ್ತಿಯನ್ನುವೃದ್ಧಿಪಡಿಸುವ ಕರ್ಮಗಳನ್ನು ಮಾಡಬೇಕು.

೭೭ ಸುಖದುಃಖೇಚ್ಛಾ ಲಾಭಾದಿತ್ಯಕ್ತೇ ಕಾಲೇಪ್ರತೀಕ್ಷಮಾಣೇ ಕ್ಷಣಾರ್ಧಮಪಿ ವ್ಯರ್ಥಂ ನನೇಯಂ

ಸುಖ ದುಃಖ ಆಸೆ ಲಾಭ ಮುಂತಾದುವುಗಳಿಗೋಸ್ಕರ ಕಳೆದು ಹೋಗಿ ಉಳಿಯುವ ಕಾಲವು ಸ್ವಲ್ಪವಾಗಿರುವುದರಿಂದ ಅರ್ಧ ನಿಮಿಷವನ್ನೂ ಕೂಡ ಭಗವಧ್ಯಾನಮಾಡದೆ ವ್ಯರ್ಥವಾಗಿ ಕಳೆಯ ಬಾರದೆಂದು ಆದೇಶ ಕೊಡುತ್ತಾರೆ. ಸುತ್ತ

೮೦ ಸಂಕೀರ್ತ್ಯಮಾನಶ್ಶೀಘ್ರಮೇವಾವಿರ್ಭವತ್ಯನುಭಾವಯತಿ ಭಕ್ತಾನ್

ಈ ರೀತಿಯಾಗಿ ಭಕ್ತರಿಂದ ಸ್ತೋತ್ರಮಾಡಲ್ಪಟ್ಟ ಭಗವಂತನು ಬೇಗದಿಂದ ಅವರಿಗೆ ಪ್ರತ್ಯಕ್ಷನಾಗಿ ತನ್ನನ್ನು ಅನುಭವಿಸುವಂತೆ ಮಾಡುತ್ತಾನೆ.

೮೧ ತ್ರಿಸತ್ಯಸ್ಯ, ಭಕ್ತಿರೇವ ಗರೀಯಸೀ, ಭಕ್ತಿರೇವಗರೀಯಸೀ

ಭೂತಭವಿಷ್ಯದ್ವರ್ತಮಾನಗಳಲ್ಲಿಯೂ ಭಕ್ತಿಯೇ ದೊಡ್ಡದು, ಭಕ್ತಿಯೇ ದೊಡ್ಡದು ಎಂದು ಸ್ಥಾಪಿಸಿ, ಮುಂದಿನ ಸೂತ್ರದಿಂದ ಅದರಲ್ಲಿ ಎಷ್ಟು ವಿಧಗಳುಂಟೆಂದೂ ನಿರೂಪಿಸುತ್ತಾರೆ.

೮೨ ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯಾಸಕ್ತಿ, ಪರಮವಿರಹಾಸಕ್ತಿ ರೂಪ್ಯೈಕಧಾ ಪ್ಯೇಕಾದಶಧಾ ಭವತಿ

ಭಕ್ತಿಯು ಒಂದೇ ಆಗಿದ್ದರೂ-ಭಗವಂತನ ಗುಣಗಳಲ್ಲೂ ಮಹಾತ್ಮ್ಯೆಗಳಲ್ಲೂ ಪ್ರೀತಿ, ಅವನ ಸೌಂದರ್ಯದಲ್ಲಿ ಪ್ರೀತಿ, ಅವನನ್ನು ಪೂಜಿಸುವುದರಲ್ಲಿ ಪ್ರೀತಿ, ಅವನ ಧ್ಯಾನದಲ್ಲಿ ಪ್ರೀತಿ, ಅವನ ಸೇವೆ ಮಾಡುವುದರಲ್ಲಿ ಪ್ರೀತಿ, ಅವನ ಸ್ನೇಹದಲ್ಲಿ ಪ್ರೀತಿ, ಅವನಲ್ಲಿ ವಾತ್ಸಲ್ಯಪ್ರೀತಿ, ಅವನಲ್ಲಿ ಪತಿಪ್ರೀತಿ, ಆತ್ಮನಿವೇದನ ಪ್ರೀತಿ, ತನ್ಮಯವಾಗಿರುವ ಪ್ರೀತಿ, ಅವನಲ್ಲಿ ಅಗಲಿಕೆಯನ್ನು ಹೊಂದದಿರುವ ಪರಮಪ್ರೀತಿ, ಈ ರೀತಿ ಹನ್ನೊಂದು ಬಗೆಯಾಗಿರುವುದು.

೮೩ ನೆಯ ಸೂತ್ರದಲ್ಲಿ ಭಕ್ತಿಮಾರ್ಗಕ್ಕೆ ಆಚಾರ್ಯರುಗಳಾದ ಸನತ್ಕುಮಾರ, ವ್ಯಾಸ, ಶುಕ, ಶಾಂಡಿಲ್ಯ, ಗರ್ಗ, ವಿಷ್ಣು, ಕೌಂಡಿನ್ಯ, ಶೇಷ, ಉದ್ಧವ, ಅರುಣಿ, ಬಲಿ, ಹನುಮಾನ್, ವಿಭೀಷಣ ಮುಂತಾದವರು ಜನರ ಕೂಗಿನ ಭಯವಿಲ್ಲದೆ - ಭಕ್ತಿಯೇ ಪರಮಾತ್ಮಪ್ರಾಪ್ತಿಗೆ ಸರ್ವೋತ್ತಮ

ಸಾಧನವೆಂಬ ಮಾತನ್ನು ಸಾರಿ ಸಾರಿ ಹೇಳಿರುವರು. ಶ್ರೀ ನಾರದಮಹರ್ಷಿ ಪ್ರೋಕ್ತವಾದ ಈ ಭಕ್ತಿಸೂತ್ರದ ಕಟ್ಟಳೆಗಳನ್ನು ಯಾರು ಶ್ರದ್ಧೆಯಿಂದ ಭಾವಿಸುವರೋ, ವಿಶ್ವಾಸದಿಂದ ಅನುಸರಿಸುವರೋ ಅವರು ತಪ್ಪದೆ ಇಷ್ಟಾರ್ಥಸಿದ್ಧಿಯನ್ನು ಹೊಂದಲು, ಅವರಿಗೆ, ದೇವರ್ಷಿಗಳ ಆಶೀರ್ವಾದವೂ-ಪರಿಪೂರ್ಣ ಕಟಾಕ್ಷವೂ ಉಂಟಾಗುವುದರಲ್ಲಿ ಸಂದೇಹವಿಲ್ಲ.

## ಉ ಪ ಸಂ ಹಾ ರ

ಭಗವಾನನು — 'ಮದ್ಭಕ್ತಾಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ' ಎಂದು ನಮ್ಮ ಕಥಾನಾಯಕರನ್ನುದ್ದೇಶಿಸಿಯೇ, ತನ್ನ ಪ್ರಾಪ್ತಿಯಸಾಧನವನ್ನು ನಿರೂಪಿಸಿರುವನಾದುದರಿಂದ, ಭಗವತ್ಪ್ರಾಪ್ತಿಗಾಗಿ ಹಂಬಲಿಸುವವರು, ಶ್ರೀ ನಾರದ ಮಹರ್ಷಿಗಳಿಂದ ಉಕ್ತವಾದ ಭಕ್ತಿಪಂಥದಲ್ಲಿ ನಡೆದರೆ ತಪ್ಪದೆ ಕೃತಾರ್ಥರಾಗುವರೆಂದು ನಿಸ್ಸಂದೇಹವಾಗಿ ಹೇಳಬಹುದು. ಶಾಸ್ತ್ರಜ್ಞಾನವು ಮನುಷ್ಯನಿಗೆ ಭಗವನ್ಮಹಿಮೆಯನ್ನು ಸ್ಪಷ್ಟರೀತಿಯಿಂದ ತಿಳಿಸಿಕೊಡಲು ಮಾತ್ರ ಸಹಾಯಕವಾಗಬೇಕಲ್ಲದೆ, ಶಾಸ್ತ್ರಜ್ಞಾನವನ್ನು ಹೊಂದಿದುದೇ ಪುರುಷಾರ್ಥಸಿದ್ಧಿಯೆಂದು ಭಾವಿಸಿ ಯಾರ ತಲೆಗಾದರೂ ಸಿರುಗಿ ಹೋಗಬಾರದು. ಶಾಸ್ತ್ರಜ್ಞಾನವು ಮನುಷ್ಯನನ್ನು ತರ್ಕವಾದಕ್ಕೆ ಸಿದ್ಧಪಡಿಸಲು ಮಾತ್ರ ಸಹಕಾರಿಯಾದರೆ, ಟಗರು ಕಾಳಗದಂತೆ ವೃಥಾ ನೆತ್ತಿಯನ್ನು ಒಡೆದುಕೊಳ್ಳುವುದು ಮಾತ್ರವಲ್ಲದೆ, ಅದರಿಂದ ಮತ್ತಾವ ಪ್ರಯೋಜನವೂ ಉಂಟಾಗಲಾರದು. ಆದುದರಿಂದ ಪ್ರಾಜ್ಞರು, ಶಾಸ್ತ್ರ ಇತಿಹಾಸ ಪುರಾಣಾದಿಗಳ ಸಹಾಯದಿಂದ ಭಗವನ್ಮಾಹಾತ್ಮ್ಯದ ನಿಶ್ಚಯ ಜ್ಞಾನವನ್ನು ಸಂಪಾದಿಸಿಕೊಂಡು, ಅದನ್ನು ಪರಮಾತ್ಮಪ್ರಾಪ್ತಿಗೆ ಅತಿಮುಖ್ಯಸಾಧನವಾದ ಭಕ್ತಿಯಿಂದ ಪಕ್ವಗೊಳಿಸಿಕೊಂಡು ಮಾನುಷ ಜನ್ಮದ ಸಾರ್ಥಕ್ಯಮಾಡಿಕೊಳ್ಳುವುದು ಅತ್ಯಾವಶ್ಯಕವು. ಲೋಕದಲ್ಲಿ ನಾಸ್ತಿಕತೆಯು ನಾಶವಾಗಿ, ಪರಮಾಸ್ತಿಕತೆಯು ವ್ಯಾಪಿಸಿ, ಸಕಲರೂ ಭಗವತ್ಪಾದಾರವಿಂದಗಳಲ್ಲಿ ಅನನ್ಯ ಭಕ್ತಿಭಾಗ್ಯವನ್ನು ಸಂಪಾದಿಸಿಕೊಂಡು, ಮೋಕ್ಷಾದಿ ಸಕಲ ಪುರುಷಾರ್ಥಗಳನ್ನೂ ಹೊಂದಲು, ಶ್ರೀ ನಾರದ ಮಹರ್ಷಿಗಳ ಪರಿಪೂರ್ಣ ಆಶೀರ್ವಾದ ಅನುಗ್ರಹಗಳೂ ಶ್ರೀ ವರನ ಕಟಾಕ್ಷವೂ ಉಂಟಾಗಲಿ.

|| ಸರ್ವೇ ಜನಾಃ ಸುಖಿನೋ ಭವಂತು ||

**ತಥಾಸ್ತು.**



॥ ಶ್ರೀ ರಾಮಸಹಾಯಃ ॥

# ಪ್ರಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

ಮುನ್ನುಡಿ:—

ಪ್ರಕೃತ ಚರಿತ್ರೆಯು, ರಾಜಪುತಾನಕ್ಕೆ ವಳಿತವಾದ ಸಂಸ್ಥಾನಗಳಿಗೆಲ್ಲ ಶಿರೋಭೂಷಣಪ್ರಾಯವಾದ, ಮೇವಾರು ಸಂಸ್ಥಾನದ ಒಬ್ಬಾನೊಬ್ಬ ವೀರರಾಣಿಯ ಜೀವಿತವನ್ನು ಕುರಿತು ವರ್ಣಿಸಲುಳ್ಳುದು. ರಜಪೂತ ರಮಣಿಯರ ಶೌರ್ಯವೀರ್ಯಗಳು ಅಪ್ರತಿಮವಾದುವು. ಮಹಾಸ್ವಾಭಿಮಾನಶೀಲರಾದ ಆ ನಾರೀಮಣಿಯರು ಹಲವು ಸಂದರ್ಭಗಳಲ್ಲಿ ಪ್ರಾಣವನ್ನು ಬೆಲೆಯಾಗಿಕೊಟ್ಟು ಮಾನವನ್ನು ಕಾಯ್ದುಕೊಂಡ ಉದಾಹರಣೆಗಳು ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿವೆ. ತಮ್ಮ ಸ್ತ್ರೀಜನ್ಮಕ್ಕೆ ಪ್ರಾಪ್ತವಾಗುವ ಲೇಶಮಾತ್ರ ಅಪಮಾನವನ್ನೂ ಸಹನೆಮಾಡದೆ, ಅವರ ಮಾನಸಂರಕ್ಷಣೆಗಾಗಿ ತಮ್ಮ ರಾಜ್ಯವನ್ನೂ ಸರ್ವಸ್ವವನ್ನೂ ಮೀಸಲಾಗಿಟ್ಟು ಮರಣಪರ್ಯಂತವೂ ಕಾದಿ, ಅದಕ್ಕಾಗಿಯೇ ಪ್ರಾಣಕೊಡುತ್ತಿದ್ದವರು ರಜಪೂತಯೋಧರು. ರಾಜಪುತಾನದ- ಮುಖ್ಯವಾಗಿ ಮೇವಾರು ಸಂಸ್ಥಾನದ ಚರಿತ್ರೆಯೆಲ್ಲವೂ ಇಂತಹ ಸಾಹಸ ಪ್ರಧಾನರಾದ ಯೋದ್ಧರ ಮತ್ತು ವೀರನಾರೀಮಣಿಯರ ಪವಿತ್ರ ಯಶಸ್ಸಿನಿಂದಲೇ ವಿಭೂಷಿತವಾಗಿದೆ. ಆದರೆ ಇಂದು ಅದು ಕಾಲಕರ್ಮ ಸಂಯೋಗದಿಂದ ಕಳಂಕಿತವಾಗಿದ್ದರೆ, ಅದಕ್ಕಾಗಿ, ಕಾಲವನ್ನೂ ಅದಕ್ಕೆ ಬಲಿಬಿದ್ದು ಆ ಪ್ರವಾಹದಲ್ಲಿ ತೇಲಿಹೋಗುತ್ತಿರುವ ಕಾಮಿನೀ ಕಾಂಚನದಾಸರಾದ ಇಂದಿನ ಅಶಕ್ತವ್ಯಕ್ತಿಗಳನ್ನೂ ಕುರಿತು ಪರಿತಾಪಪಡಬೇಕಲ್ಲದೆ- ಹಿಂದಿನ ಆ ಪವಿತ್ರ ವ್ಯಕ್ತಿಗಳನ್ನು ದೂರಲಾಗದು.

ಅವರು ಕೇವಲ ಅಮಾನುಷವೆಂಬಂತಹ ಅಂತಹ ಕಾರ್ಯಗಳನ್ನು ನೆರವೇರಿಸುತ್ತಿದ್ದುದಕ್ಕೂ ಇಂದು ಅವರ ಸಂತಾನರು, 'ಏನು ಈ ಕಾರ್ಯಗಳನ್ನು ಮನುಷ್ಯಮಾತ್ರನು ಮಾಡಲು ಸಾಧ್ಯವೇ' ಎಂದು ಆಶ್ಚರ್ಯಪಡು

ವಂತಾಗಲಿಕ್ಕೂ ಕಾರಣವೇನೆಂದು ತೋರಬಹುದು. ಅದಕ್ಕೆ ಅವರ ಮನಸ್ಥಿತಿಯೇ ಮುಖ್ಯವಾದ ಕಾರಣವಾಗಿದೆ. ಹಿಂದಿನ ಅವರ ಮನೋದಾರ್ಢ್ಯವು ಅಸಾಮಾನ್ಯವಾದುದಾಗಿದ್ದಿತು. ಕವಿಯು

ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ
ಲೋಕೋತ್ತರಾಣಾಂ ಚೇತಾಂಸಿ ಕೋಹಿ ವಿಜ್ಞಾತುಮರ್ಹಸಿ.

ಎಂದರೆ, ಲೋಕೋತ್ತರ ಚರಿತ್ರೆಯುಳ್ಳ ಮಹನೀಯರ ಮನಸ್ಸು, ಕೆಲವು ಸಂದರ್ಭಗಳಲ್ಲಿ ವಜ್ರಕ್ಕಿಂತಲೂ ಕಠಿಣವಾಗಿಯೂ, ಮತ್ತೆ ಕೆಲವುವೇಳೆಗಳಲ್ಲಿ ಕುಸುಮಕ್ಕಿಂತಲೂ ಮೃದುವಾಗಿಯೂ ಇರುವಂತೆ ಕಂಡುಬರುವುದು. ಅದರ ನಿಶ್ಚಯ ಸ್ವಭಾವವನ್ನು ಯಾರು ಕಂಡುಹಿಡಿಯಲಾಗುವುದು, ಎಂದು ನುಡಿದಿರುವಂತೆ ಸ್ಥಿತಪ್ರಜ್ಞರಾದ ಆ ಮಹನೀಯರು ಕೇವಲ ನ್ಯಾಯ ಸತ್ಯ ಧರ್ಮ ಮಾನ ಮುಂತಾದುವುಗಳ ರಕ್ಷಣೆಯಲ್ಲೇ ಸ್ಥಿರಸಂಕಲ್ಪವುಳ್ಳವರಾಗಿರುವರೇ ವಿನಾ, ಅವರನ್ನು ನಾಲ್ಕೆಂಟು ನಾಣ್ಯಗಳ ಲಾಭನಷ್ಟಗಳಾಗಲೀ, ಧನಕನಕಾದಿಗಳು, ವಸ್ತ್ರಭೂಷಣಾದಿಗಳು, ತಿಂಡಿತೀರ್ಥಗಳು ಮುಂತಾದುವುಗಳಿಂದ ಪ್ರಾಪ್ತವಾಗುವ ಸುಖಸಂತೋಷಗಳಾಗಲೀ ಭ್ರಾಂತಿಗೊಳಿಸಲಾರವಾಗಿದ್ದುವು. ಆ ಗುಣಧರ್ಮಗಳಿಗೆ ಲೋಪಬರುವುದನ್ನು ನೋಡಿ ಅವರು ಸಹಿಸಲಾರರು. ಆದುದರಿಂದಲೇ ಅವರ ಮನಸ್ಸು ಅವುಗಳ ರಕ್ಷಣೆಯಲ್ಲಿ ವಜ್ರಕ್ಕಿಂತಲೂ ಕಠಿಣವಾಗಿರುವಂತೆ ಕಂಡುಬರುವುದು ಮತ್ತು ಅನ್ಯಾಯ ಅಸತ್ಯ ಮೋಸ ಕಾಪಟ್ಯಾದಿಗಳಿಗೂ, ದುರುಳರ ನಿರ್ಬಂಧಕ್ಕೂ ಕಾರಣಾಂತರಗಳಿಂದ ಸಿಕ್ಕು ನರಳುತ್ತಿರುವವರ ವಿಷಯದಲ್ಲಿ ಅವರ ಮನಸ್ಸು ಕುಸುಮಕೋಮಲವಾಗಿದ್ದು ಬೆಣ್ಣೆಯಂತೆ ಕರಗಿ, ತಮ್ಮ ಸರ್ವಸ್ವನೂ ನಾಶವಾಗುವಂತಿದ್ದರೂ, ಅವರ ಕಷ್ಟದಲ್ಲಿ ಭಾಗಿಗಳಾಗಿ, ಶ್ರಮಿಸುವರು. ಇದಕ್ಕೆ ಕಾರಣವೇನು? ಎಂಬಂತಿಲ್ಲ. ಇದು ಸ್ವಾಭಾವಿಕವಾದುದು. ಮಹನೀಯರ ಮನಸ್ಥಿತಿಯೇ ಅಂಥಾದ್ದು. ಅವರು ತಮ್ಮ ಕಣ್ಣೆದುರಿಗೆ, ಸತ್ಯಕ್ಕೆ ಹಾನಿಯೂ, ಅನ್ಯಾಯಕ್ಕೆ ಉತ್ಕರ್ಷವೂ ಉಂಟಾಗುವುದನ್ನು ಕಂಡು ಸಹಿಸರು

ರಜಪೂತ ರಮಣಿಯರಲ್ಲಿ ಕಂಡುಬರುತ್ತಿದ್ದ ಈ ಬಗೆಯ ಶೌರ್ಯ

ಪ್ರತಾಪಗಳಿಗೆ ಮುಖ್ಯಕಾರಣವು ಅವರಿಗಿದ್ದ ಪತಿಭಕ್ತಿ.- ಸಾಧ್ವಿಯರಿಗೆ ಭೂಷಣವಾದ ಪತಿವ್ರತಾಧರ್ಮ ಪರಿಪಾಲನೆಗಾಗಿ ಅವರು ಮೃತ್ಯುವನ್ನು ಪ್ರೇಮದಿಂದ ಆಲಂಗಿಸುತ್ತಿದ್ದರು. ಆರ್ಯಸ್ತ್ರೀ ಜನರಿಗೆ ಈ ಪತಿಭಕ್ತಿಯು ಸಹಜವಾಗಿ ಬಂದುದು. ಆದರೆ ಇದನ್ನು ಈಚೆಗೆ ಕೆಲವುಂದಿ ಕುಹಕಿಗಳು,—ತಮ್ಮ ಸ್ತ್ರೀಯರು ತಮ್ಮ ವಿಷಯದಲ್ಲಿ ಅನಾದರವಾಡಿ ಬಿಟ್ಟು ಹೋಗದಿರುವಂತೆ, ಅವರಿಗೆ ಪ್ರತಿವ್ರತಾಧರ್ಮವೆಂಬ ಈ ಧಾರ್ಮಿಕ ಸ್ವರೂಪದ ಕೆಲವು ನಿರ್ಬಂಧಗಳನ್ನು ಕಲ್ಪಿಸಿ, ತಮ್ಮ ಸ್ವಾರ್ಥಸಾಧನೆಗಾಗಿಯೇ ಅವರನ್ನು ಉಪಯೋಗಿಸಿಕೊಳ್ಳುತ್ತಿದ್ದ ಪುರುಷರ ಕಪಟವೃತ್ತಿಯೆಂದು-ದೂಷಿಸತೊಡಗಿರುವರು. ಇದಕ್ಕೆ ಅವರ ಅಜ್ಞಾನವೂ ಅದೂರದರ್ಶಿತ್ವವೂ ಮಾತ್ರವೇ ಕಾರಣವೆನ್ನಬೇಕು. ಏಕೆಂದರೆ, ಪುತ್ರ, ಶಿಷ್ಯ, ಆರಾಧಕ ಮುಂತಾದವರಲ್ಲಿ ತಮ್ಮ ಪಿತೃ, ಗುರು, ದೇವರು ಇವರಲ್ಲಿ ಉಂಟಾಗುವ ಪರಮ ಪ್ರೇಮದ ಪರಾಕಾಷ್ಟ ಸ್ಥಿತಿಯಂತೆ, ಪತ್ನಿಗೆ ತನ್ನ ಪತಿಯಲ್ಲಿ ಸ್ವಾಭಾವಿಕವಾಗಿ ಉಂಟಾಗುವ ಪರಮಪ್ರೇಮದ ಪರಾಕಾಷ್ಟಸ್ಥಿತಿಯೇ ಪತಿಭಕ್ತಿಯೆನ್ನಿಸಿಕೊಳ್ಳುವುದಲ್ಲದೆ, ಯಾವನೊಬ್ಬನು ಸ್ವಾರ್ಥಸಾಧನೆಯ ಉದ್ದೇಶದಿಂದ ಅವರ ಮನಸ್ಸಿನಲ್ಲಿ ತುಂಬಿದ ಬೋಧನೆಯಲ್ಲ.—ಹಾಗಾಗುವುದಾದರೆ, ಇಂದು ಬೋಧನೆಮಾಡಲು ಯಾರಿಗೆ ಬರುವುದಿಲ್ಲ, ಬೋಧನ ಸೂತ್ರಗಳು ಯಾರಿಗೆ ತಿಳಿಯವು? ಆದರೂ ಏಕೆ, ನಮ್ಮ ಭಾರತ ಸ್ತ್ರೀಜನರಲ್ಲಿ ಅನೇಕಾನೇಕರು, ಈ ಪವಿತ್ರ ಸ್ತ್ರೀಧರ್ಮದಿಂದ ಚ್ಯುತರಾಗುತ್ತಿರುವರು! ಎಂದರೆ, ಅದಕ್ಕೆ ಪಾಶ್ಚಾತ್ಯನಾಗರಿಕತೆಯ ಅನುಕರಣವೇ ಮುಖ್ಯಕಾರಣವೆಂದು ನಿಸ್ಸಂದೇಹವಾಗಿ ಹೇಳಬಹುದು. ಪಾಶ್ಚಾತ್ಯನಾಗರಿಕತೆಯು ನಮ್ಮ ದೇಶಕ್ಕೆ ಮಾಡಿದ ಅಗಾಧವಾದ ನಷ್ಟವೆಂದರೆ, ನಮ್ಮ ದೇಶಕ್ಕೆ ಸ್ವಾಭಾವಿಕವಾಗಿದ್ದ ಈ ಭಕ್ತಿಭಾವವನ್ನು ಹಾಳುಮಾಡಿ, ಆ ಸ್ಥಾನದಲ್ಲಿ ಅಪಭ್ರಂಶ ಸ್ವರೂಪದ ಒಂದು ಬಗೆಯ ವಿಚಾರ ಮನಸ್ಕತೆಯನ್ನುಂಟುಮಾಡಿದುದು! ವಿಚಾರಪರವಾದ ಮನಸ್ಕತೆಯು ತಪ್ಪೆಂದು ಅರ್ಥವಲ್ಲ. ಯಾವುದೊಂದು ವಸ್ತುವನ್ನೂ ವಿಚಾರಮಾಡಿಯೇ ನಂತರ ಸ್ವೀಕರಿಸತಕ್ಕುದು ಯುಕ್ತವಾದುದು. ಆದರೆ ಒಂದುಸಾರಿ, ಸ್ವೀಕರಿಸಿದ ತರುವಾಯ ಅದನ್ನು ಅನುಸರಿಸಬೇಕಲ್ಲದೆ, ಪುನಃಪುನಃ ವಿಚಾರಕ್ಕೆ ಎಡೆಗೊಟ್ಟು ಚಿತ್ತ

ಚಾಂಚಲ್ಯವನ್ನು ಹೊಂದುವುದಾದರೆ, ಜೀವಿತವೇ ದುಃಖಮಯವಾಗುವುದು. ಈ ಅಪೂರ್ಣವಿಚಾರ ಮನಸ್ಕತೆಯಿಂದ ನಮ್ಮಲ್ಲಿದ್ದ ಸ್ವಾಭಾವಿಕ ಪ್ರೇಮಭಾವಕ್ಕೆ ಶೈಥಿಲ್ಯವುಂಟಾಯಿತು. ಯಾವುದೊಂದರ ವಿಷಯದಲ್ಲೂ ನಂಬಿಕೆಯೆಂಬುದೇ ಇಲ್ಲದೆ, ಸಂಶಯ ಬುದ್ಧಿಯುದಯಿಸಿತು. ತಂದೆಗೆ ಮಗನಲ್ಲಿ ಸಂಶಯ, ಮಗನಿಗೆ ತಂದೆಯಲ್ಲಿ ನಂಬಿಕೆಯಿಲ್ಲ. ಪತಿಗೆ ಪತ್ನಿಯಲ್ಲಿ ನಂಬಿಕೆಯಿಲ್ಲ. ಪತ್ನಿಗೆ ಪತಿಯಲ್ಲಿ ಸಂಶಯ. ಯಾರೊಬ್ಬರನ್ನು ಯಾರೂ ನಂಬರು. ಹೀಗೆ ಸಂಶಯಸಮ್ರಾಜ್ಯವೇ ಆಧಿಪತ್ಯಮಾಡುತ್ತಿರುವಲ್ಲಿ ಯಾವನಿಗೆ ತಾನೇ ಸೌಖ್ಯವಿದ್ದೀತು! 'ಸಂಶಯಾತ್ಮಾವಿನಶ್ಯತಿ' ಎಂದು ಭಗವದ್ವಾಕ್ಯವಿಲ್ಲವೆ? ಮನುಷ್ಯನು ವಿಚಾರಶೀಲನಾಗಿರದೆ, ಮೂಢ ಭಾವನೆಯಿಂದ ಎಲ್ಲವನ್ನೂ ನಂಬುತ್ತಾ ಹೋಗಬೇಕೆಂದು ಯಾರೂ ಹೇಳುವುದಿಲ್ಲ. ಆದರೆ, ಲೋಕಧರ್ಮವು ಸಾಗುವುದಕ್ಕಾಗಿ, ಒಬ್ಬ ಮನುಷ್ಯನು ಮತ್ತೊಬ್ಬನಲ್ಲಿ ಸ್ವಲ್ಪಮಟ್ಟಿನ ನಂಬಿಕೆಯನ್ನೂ ವಿಶ್ವಾಸವನ್ನೂ ಪ್ರೇಮವನ್ನೂ ಇಟ್ಟುಕೊಂಡಿರದಿದ್ದರೆ ಸಾಧ್ಯವೇ ಇಲ್ಲ. ಹೀಗಿರುವಲ್ಲಿ, ಅನುಗಾಲವೂ ಒಬ್ಬರನ್ನೊಬ್ಬರು ಅಗಲದೆ, ಒಂದೇ ಮನೆಯಲ್ಲಿ ಆಮರಣವಾಗಿ ವಾಸಿಸಬೇಕಾದ ಪತಿಪತ್ನಿಯರಲ್ಲಿ ಪರಸ್ಪರ ನಂಬಿಕೆಯೂ ಪ್ರೀತಿವಿಶ್ವಾಸಗಳೂ ಇಲ್ಲದಿದ್ದರೆ ಆ ಮನೆಯು ಬದುಕಿ ಊರ್ಜಿತವಾಗುವ ಪರಿಯೆಂತು! ಇಂತಹ ನಂಬಿಕೆ ವಿಶ್ವಾಸಗಳೇ ಅತಿಶಯ ಪ್ರಮಾಣದಿಂದ ಇದ್ದರೆ ಅದು ಭಕ್ತಿಯೆಂಬ ಪವಿತ್ರನಾಮದಿಂದ ಸಂಬೋಧಿಸಲ್ಪಡುವುದು. ಒಂದು ಮನೆಗೆ ಇಬ್ಬರ ಯಾಜಮಾನ್ಯವಿರುವುದೂ, ಒಂದು ರಾಜ್ಯಕ್ಕೆ ಇಬ್ಬರು ರಾಜರಿರುವುದೂ, ಒಂದು ದೇಶಕ್ಕೆ ಎರಡುಬಗೆಯ ರಾಜ್ಯಭಾರವಿರುವುದೂ ಅಸ್ವಾಭಾವಿಕವಾದುದರಿಂದ ಮನೆಗೆ, ಪುರುಷನು ಯಜಮಾನನೂ ಸ್ತ್ರೀಯು ಆತನ ಆಜ್ಞಾಧಾರಕಳೂ ಎಂದು ನಮ್ಮ ಆರ್ಷೇಯ ನಾಗರಿಕತೆಯು ಏರ್ಪಡಿಸಿದ್ದುದು. ಆ ಸ್ಥಿತಿಯಲ್ಲಿ ಪತ್ನಿಯು ಪತಿಯಲ್ಲಿ ವಿಶೇಷ ಭಕ್ತಿ ವಿಶ್ವಾಸಗಳನ್ನಿಟ್ಟುಕೊಂಡು ಅನುಸರಿಸುತ್ತಿದ್ದಳು. ಅಂತಹ ವಿಶ್ವಾಸಪಾತ್ರಳಾದ ಪತ್ನಿಯಲ್ಲಿ ಪತಿಯಾದರೂ ಯುಕ್ತರೀತಿಯಿಂದಲೇ ನಡೆಯುತ್ತಿದ್ದನು. ಇಂದು ಅದು ಪಲ್ಲಟವಾಗಿದ್ದರೆ, ಅದಕ್ಕೆ, ಅದರ ಮೂಲಸ್ವರೂಪಕ್ಕೆ ಪ್ರಾಪ್ತವಾಗಿರುವ ಶೈಥಿಲ್ಯವೇ ಕಾರಣವಲ್ಲದೆ ಮತ್ತೆ ಬೇರೆಯಲ್ಲ. ಸಂಸಾರ

ದಲ್ಲಾಗಲೀ, ಲೋಕದಲ್ಲಾಗಲೀ ಶಾಂತಿಯು ನಷ್ಟವಾಗಿದ್ದರೆ, ನಮ್ಮಲ್ಲಿ ಪರಾನುಕರಣೆಯಿಂದ ಈ ಪ್ರೇಮಕ್ಕೆ ಭಂಗವು ಪ್ರಾಪ್ತಿಸಿರುವುದೇ ಮುಖ್ಯ ಕಾರಣವು. ಪುನಃ ಈ ಪ್ರೇಮಕ್ಕೆ ಎಂದು ಯೋಗ್ಯಸ್ಥಾನವು ಕೊಡಲ್ಪಡುವುದೋ ಅಂದು ಗೃಹಜೀವನವೂ, ಲೋಕಜೀವನವೂ ಸುಖಮಯವಾಗುವುದು.

ಗ್ರಂಥಮಾಲೆಯು, ಭಾರತ ದೇಶಕ್ಕೆ ಸ್ವಾಭಾವಿಕವೆನ್ನಿಸಿ ಅನಾದಿಕಾಲದಿಂದಲೂ, ರೂಢಿಯಲ್ಲಿದ್ದು ನಡೆದುಬಂದ ಈ ಗುಣ ನಡತೆ ಆಚಾರ ವ್ಯವಹಾರಗಳನ್ನು ತಮ್ಮ ಸತ್ಯಾಚರಣೆಯಲ್ಲಿ ತಂದು ಲೋಕಜೀವಿತವನ್ನು ಸುಖಮಯವೆನ್ನಿಸಿದ್ದ ಮಹನೀಯ ವ್ಯಕ್ತಿಗಳ ಜೀವಿತಗಳನ್ನು ಒದಗಿಸುವ ಧ್ಯೇಯದಿಂದಲೇ ಜೀವಿಸಿ - ಶ್ರಮಿಸುತ್ತಿದೆ. ಭಾಷಾಭಿಮಾನಿಗಳು-ಸ್ವಹಸ್ತ ಪರಹಸ್ತ ಇದನ್ನು ಪೋಷಿಸಿ, ಪ್ರೋತ್ಸಾಹಗೊಳಿಸಬೇಕೆಂಬುದೇ ನಮ್ಮ ಪ್ರಾರ್ಥನೆ.

ಬೆಂಗಳೂರು
ತಾ. ೬—೨—೧೯೩೨

ಇತಿ ಸುಜನವಿಧೇಯ,
**ಯಂ. ರಾಮರಾವ್.**



|| ಶ್ರೀರಾಮಸಹಾಯಂ ||

ಚಿತ್ತೂರಿನ ವೀರನಾರೀಮಣಿ

# ರಾಣೀ ರಾಮಾಬಾಯಿ

ಅಧ್ಯಾಯ ೧ "ಶತ್ರುಸೈನ್ಯ ಮಧ್ಯಕ್ಕೆ"

ನಮ್ಮ ಮಾತೃಭೂಮಿಯಾದ ಭಾರತದೇಶವು, ಸಂಪೂರ್ಣ ಸ್ವಾತಂತ್ರ್ಯಸುಖವನ್ನು ಅನುಭವಿಸುತ್ತಿದ್ದ ಕಾಲವೊಂದಿದ್ದಿತು. ಈಗ ಅದು ಕನಸಿನಲ್ಲಿನ ಮಾತೆಂಬಂತೆ ಕಂಡುಬಂದರೂ, ಹಿಂದೆ ನಮ್ಮ ದೇಶವು ಅಂತಹ ಸಂಪೂರ್ಣ ಸ್ವಾತಂತ್ರ್ಯಸುಖಾನುಭವ ಮಾಡುತ್ತಿದ್ದಿತೆಂದು ನಮ್ಮ ಪೂರ್ವ ಪುರಾಣಗಳೂ ಇತಿಹಾಸಗಳೂ ಮುಕ್ತಕಂಠದಿಂದ ವರ್ಣಿಸುತ್ತವೆ. ದೇಶವು ಹಾಗೆ ಸ್ವಾತಂತ್ರ್ಯವಾತಾವರಣದಿಂದ ವ್ಯಾಪ್ತವಾಗಿದ್ದಾಗ್ಗೆ, ದೇಶೀಯರೂ ಧೈರ್ಯೋತ್ಸಾಹಸಂಪನ್ನರೂ, ಕಾರ್ಯಶೂರರೂ, ಸಾಹಸ ಪ್ರತಾಪನಿಧಿಗಳೂ ಆಗಿದ್ದರು. ಯಶಃಕಾಮರಾಗಿದ್ದರು. ಆದರೆ ದುಷ್ಕರ್ಮವಶವಾಗಿಯೋ ಎಂಬಂತೆ, ಪರಧರ್ಮೀಯರ ಆಕರ್ಷಣೆಗೆ ವಶರಾಗಿ ಸ್ವದೇಶೀಯ ಕೆಲಮಂದಿ ಕ್ಷುದ್ರಜೀವಿಗಳು ಎಂದು ಅವರ ಕೈ ಬೊಂಬೆಗಳಾಗಿ ಕುಣಿಯ ತೊಡಗಿದರೋ, ಅವರ ಉಪಕರಣವಾಗಿ ತಮ್ಮ ಸ್ವದೇಶೀಯರನ್ನೇ ಹಿಂಸಿಸ ತೊಡಗಿದರೋ ಅಂದಿನಿಂದ - ಕುಲಕ್ಕೆ ಮೃತ್ಯು ಕೊಡಲಿಯ ಕಾವು - ಎಂಬಂತಾಗಿ ಭಾರತ ದೇಶೀಯರ ಬಾಳು ನಾಯಿಬಾಳಾಗಿ ಪರಿಣಮಿಸಿತು. ಕಡಿಯಲು ಸಿದ್ಧವಾಗಿದ್ದ ಕೊಡಲಿಗೆ ಕಾವೊಂದು ದೊರೆತಮೇಲೆ ಮುಂದೆ ಕೇಳುವುದೇನು, ಕಾಡೆಲ್ಲವೂ ನಿರ್ನಾಮವಾಗಿ ಧ್ವಂಸವಾದಂತೆ, ಪ್ರಾರಂಭಕ್ಕೆ ಎಂದರೆ ಈಗ್ಗೆ ಸುಮಾರು ಸಾವಿರ ವರ್ಷಗಳ ಕೆಳಗೆ ಕೆಲಮಂದಿ ಕ್ಷತ್ರಿಯಾಧಮರು ಪರಕೀಯರಿಗೆ ತಮ್ಮ ಮನೆಯನ್ನು ದೋಚಲು ಬನ್ನಿರೆಂದು ವೀಳ್ಯವಿತ್ತು ಕರೆತಂದು ಮನೆಕೊಗಿಸಿಕೊಂರು. ಅವರು ಪ್ರಾರಂಭಿಸಿದ

ಕೊಳ್ಳೆಯು ಈ ಸಾವಿರ ವರ್ಷಕಾಲ ಅವಿಚ್ಛಿನ್ನವಾಗಿ ನಡೆಯುತ್ತಾ ಬಂದಿದೆ. ಕೊಳ್ಳೆ ಸಿಕ್ಕುವುದೆಂದರೆ ಯಾರಿಗೆ ಬೇಡ! ಬೀದಿಯಲ್ಲಿ ಬಿದ್ದ ಸಂಪತ್ತನ್ನು ದೋಚಿಕೊಳ್ಳಲು ವಿರಕ್ತನಾದರೂ ಮುಂದಾಗಬಹುದು. ಹಾಗಿರುವಲ್ಲಿ ಸರ್ವಸಂಪತ್ಸಮೃದ್ಧವಾಗಿ ಚಿನ್ನದ ಹೊಗೆಯನ್ನು ಹಾಯಿಸುತ್ತಿದ್ದ ನಮ್ಮ ಮಾತೃಭೂಮಿಯು, ಬಾಗಿಲು ತೆರೆದ ಭಂಡಾರದಂತೆ ಇದ್ದುದನ್ನು ಕಂಡು ಪ್ರಪಂಚದ ವಿವಿಧ ದೇಶಗಳವರು ಇಲ್ಲಿಗೆ ಬಂದು, ಉಂಡು ತಿಂದು ತೇಗಿ, ಹಲವು ವಿಧದಿಂದ ಇಲ್ಲಿಯ ನಿವಾಸಿಗಳನ್ನು ಪೀಡಿಸಿ ಗೋಳಾಡಿಸಿ ಅವರ ಸರ್ವಸ್ವವನ್ನೂ ಅಪಹರಿಸಿ, ತಮ್ಮ ಬೊಜ್ಜು ಬೆಳೆಸಿಕೊಂಡು ಹಿಂದಿರುಗಿದರು. ಹಾಗೆ ಈ ದೇಶದ ಸುಲಿಗೆಗಾಗಿ ಬಂದವರಲ್ಲಿ ಮೊದಲನೆಯವರು ಮಹಮ್ಮದೀಯರು. ತರುವಾಯ ಅವರಲ್ಲೇ ಒಂದು ಪಂಗಡವಾದ ಮೊಗಲರು. ತರುವಾಯ ಪಾಶ್ಚಾತ್ಯದೇಶದವರು. ಈ ಸಾವಿರ ವರ್ಷಗಳ ದುರಂತ ಅನುಭವದಿಂದಲಾದರೂ ಬುದ್ಧಿಗಲಿತು ಭಾರತೀಯರು ಸ್ವನಾಶಕಾರ್ಯದಲ್ಲಿ ಪರಕೀಯರ ಉಪಕರಣವಾಗುವುದನ್ನು ಬಿಡದಿರುವವರೆಗೂ ಭಾರತ ದೇಶಕ್ಕೆ ಕ್ಷೇಮವಿಲ್ಲ. ರಾಜ್ಯದಲ್ಲಿನ ಕೊಳ್ಳೆಕೊಲೆಗಳು ಕೊನೆಗಾಣುವಂತಿಲ್ಲ. ದೇಶೀಯರ ಪ್ರಾಣಮಾನಗಳು ದಕ್ಕುವಂತಿಲ್ಲ.—

ಈ ಧಾಳಿಯು ಪ್ರಾರಂಭಿಸಿದ ತರುವಾಯ ಸುಮಾರು ಐನೂರು ವರ್ಷಕಾಲ, ದೇಶದಲ್ಲಿ ಈ ಪರದೇಶೀಯ ಕೊಳ್ಳೆಗಾರ ಸೈನ್ಯಪರಂಪರೆಗಳಿಂದ ನಡೆದ ದುರಂತ ನರಹತ್ಯೆ, ನಾಶಗಳ ಕಥೆಯು ಹೃದಯದ್ರಾವಕವಾಗಿದೆ! ಹಾಗೆ ಬಂದು ದೋಚಿಕೊಂಡವರಲ್ಲಿ ಹಲ ಕೆಲವರು ಇಲ್ಲೇ ನಿಂತು ಕೆಲ ಕಾಲ ರಾಜ್ಯಭಾರ ಮಾಡಿಕೊಂಡಿದ್ದರಾದರೂ, ಅವರ ಆಳ್ವಿಕೆಯೂ ದೇಶೀಯರಿಗೆ ಯಾವ ಬಗೆಯಲ್ಲೂ ಸುಖಪ್ರದವಾಗಿರಲಿಲ್ಲ. ಹೀಗೆಯೇ ಹದಿನೈದನೆಯ ಶತಮಾನವು ಕಳೆವವರೆಗೂ ನಡೆದು ಬಂತು. ತರುವಾಯ ಹದಿನಾರನೆಯ ಶತಮಾನದ ಮಧ್ಯಭಾಗದಲ್ಲಿ ದೇಶಕ್ಕೆ ಮೊಗಲಾಯರ ಪ್ರವೇಶವಾಯಿತು. ಇವರಲ್ಲಿ ಮೊದಲನೆಯವನಾದ ಬಾಬರನು, ಅವರಿಗೆ ಬಂದ ಇತರರಂತೆ ಈ ದೇಶವನ್ನು ಕೊಳ್ಳೆಹೊಡೆದುಕೊಂಡುಹೋಗಬೇಕೆಂಬ ಇಚ್ಛೆಯಿಂದಲಲ್ಲದೆ ಇಲ್ಲಿಯೇ ನಿಂತು ರಾಜ್ಯವನ್ನು ಕಟ್ಟಿ ಆಳಬೇಕೆಂದು ಬಂದವನಾದುದರಿಂದ ಇವನ ಕಾಲದಿಂದ ದೇಶಕ್ಕೆ ಹೊರಗಿನಿಂದ ಬರುವ

ಶತ್ರುಗಳ ಕಾಟವು ಸ್ವಲ್ಪ ಮಾತ್ರ ತಪ್ಪಿದಂತಾಯಿತೆನ್ನಬಹುದು. ಆದರೆ ತಾನೇ ಏನು? ಇಲ್ಲೀಬಂದು ನೆಲೆಸಿದ ಈತನೂ ಈತನ ಸಂತತಿಯುವರೂ, ಪೂರ್ವದಿಂದಲೂ ಈ ದೇಶದಲ್ಲೇ ನೆಲೆಸಿ ಪ್ರಭುತ್ವ ಮಾಡುತ್ತಿದ್ದ ರಾಜರುಗಳೊಂದಿಗೆ ವಿರಾಮವಿಲ್ಲದೆ ಯುದ್ಧ ಮಾಡತೊಡಗಿದರು. ದೇಶದ ಯಾವುದಾದರೊಂದು ಭಾಗದಲ್ಲಿ ಯುದ್ಧವಿಲ್ಲದ ದಿನವಿಲ್ಲ. ರಕ್ತ ಪ್ರವಾಹವು ಹರಿಯದ ದಿನವಿಲ್ಲ ಕೊಳ್ಳೆ ಕೊಲೆ ಸುಲಿಗೆಗಳಿಂದ ಜನರು ಹಾಹಾಕಾರಮಾಡದ ದಿನವಿಲ್ಲ, ಇಂತಾಯಿತು ದೇಶದ ಬಾಳು. ದೇಶಕ್ಕೆ ಪ್ರಭುಗಳೆಂದು ಸ್ವಯಂಸ್ಥಾಪಿತರಾದ ಈ ಪರದೇಶೀಯರಿಗೆ ಯಾರು ತಮ್ಮ ಧನ ಪ್ರಾಣ ಮಾನಗಳನ್ನು ಅರ್ಪಿಸಿ, ಅವರ ಮನೋಽನುವರ್ತಿಗಳಾಗಿ ನಡೆಯಲು ಹಿಂಜರಿಯದೆ ಇದ್ದರೋ, ಅವರು ಯಜಮಾನನು ಕರುಣಿಸಿ ಎಸೆವ ಎಂಜಲು ರೊಟ್ಟಿಯನ್ನು ತಿಂದುಂಡು ಹೊಟ್ಟೆತುಂಬಿಕೊಂಡು ಬದುಕಿ ಬೆಳೆವ ನಾಯಿಯು ಬಳಗದಂತೆ, - ಎಂತೂ ಅನ್ನ ಬಟ್ಟೆಗಳಿಗೆ ತಾಪತ್ರಯವಿಲ್ಲದೆ ಸುಖವಾಗಿಯೇ ಜೀವಿಸಿದ್ದರೆಂದು ಹೇಳಬಹುದು. ಆದರೆ ಯಾರು ಸ್ವಾಭಿಮಾನವುಳ್ಳವರಾಗಿ ಮರ್ಯಾದೆಯಿಂದ ಬದುಕಬೇಕೆಂದು ಇಚ್ಛೆಗೊಂಡರೋ, ಯಾರಿಗೆ ಸ್ವಧರ್ಮ ರಕ್ಷಣೆಯಿಲ್ಲದೆ, ಸ್ವದೇಶ ರಕ್ಷಣೆಯಿಲ್ಲದೆ ಎಂತೋ ದೊರೆತ ಎಂಜಲುಗಳನ್ನು ತಿಂದು ಬದುಕುವಿಕೆಯೇ ಪುರುಷಾರ್ಥವಲ್ಲವೆಂಬ ಪ್ರೇರಣೆಯುಂಟಾಯಿತೋ, ಈ ಭಾವನೆಯಿಂದ ಯಾರು ಪ್ರಭುತ್ವವನ್ನು ಎದುರಿಸಿಯಾದರೂ ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಳ್ಳಬೇಕೆಂದು ಪ್ರಯತ್ನಿಸಿದರೋ ಅಂಥವರು ಅದಕ್ಕೆ ತಕ್ಕ ಬೆಲೆಯನ್ನು ಕೊಟ್ಟು ತೀರಬೇಕಾಯಿತು. ಸ್ವಾತಂತ್ರ್ಯ ಲಕ್ಷ್ಮಿಯು ಸುಲಭವಾಗಿ ಒಲಿಯತಕ್ಕವಳಲ್ಲ. ಆಕೆಯನ್ನು ಒಲಿಸಿಕೊಳ್ಳಲಿಚ್ಛಿಸುವ ಆರಾಧಕನು, ತನ್ನ ಸರ್ವಸ್ವವನ್ನೂ ಕೊನೆಗೆ ಪ್ರಾಣಗಳನ್ನೂ ಆಕೆಯ ಪಾದತಳದಲ್ಲಿ ಅರ್ಪಿಸಲು ಸಿದ್ಧನಾದರಲ್ಲದೆ ಆಕೆಯು ಪ್ರಸನ್ನಳಾಗಳು. ತನ್ನ ಹೃದಯರಕ್ತದಿಂದ ಆಕೆಯ ಚರಣಗಳನ್ನು ಅಭಿಷೇಕಿಸಲು ಸಿದ್ಧನಾದರಲ್ಲದೆ ಆಕೆಯ ಪ್ರಸಾದವು ಲಭಿಸಲಾರದು. ಹಿಂದೆ ಮೊಗಲಚಕ್ರವರ್ತಿಗಳ ಕಾಲದಲ್ಲಿ ತಮ್ಮ ಸ್ವಾಭಿಮಾನವನ್ನು ರಕ್ಷಿಸಿಕೊಳ್ಳಲು ಇಚ್ಛಿಸಿ, ತಮ್ಮ ಪ್ರಾಣಗಳನ್ನೂ ಧನಕನಕಾದಿಗಳನ್ನೂ ದೇಹರಕ್ತವನ್ನೂ ಸೂರೆಗೊಟ್ಟವರು ಮಿವಾಡಾರು ರಾಜವಂಶೀಕರು. ಮಿವಾಡಾರಿನ

ಪ್ರಾಣಸಂರಕ್ಷಣೆಯಲ್ಲಿ ಭಾಗಿಗಳಾಗಿ ಯಶಶ್ಚಿರಂಜೀವಿಗಳಾದವರು, ಕೇವಲ ಆಯುಧಧಾರಿಗಳಾದ ಪುರುಷರು ಮಾತ್ರವಲ್ಲ.-ಸೀರೆಯುಟ್ಟು ಬಳೆತೊಟ್ಟು, ಸೂರ್ಯನ ಬಿಸಿಲಿಗೆ ಬಾರದೆ ಘರದೆಯಿಂದ ತಮ್ಮ ಮುಖಗಳನ್ನು ಮುಚ್ಚಿಕೊಂಡು ಅಂತಃಪುರದಲ್ಲಿರುತ್ತಿದ್ದ ಸ್ತ್ರೀ ಜನರೂ ಸಹ, ದೇಶದ ಮಾನರಕ್ಷಣಾ ಕಾರ್ಯವು ಪರೀಕ್ಷೆಗೆ ಬಂದಿದ್ದ ಆ ಸಂದರ್ಭಗಳಲ್ಲಿ ಧೈರ್ಯ ಸಾಹಸ ಮೇರುಗಳಾಗಿ ಶತ್ರುಗಳ ಶಸ್ತ್ರಕ್ಕೆ ಎದೆಯೊಡ್ಡಿ ನಿಂತರು. ಹಾಗೆ ನಿಂತ ನರಪುಂಗವರ ನಾರೀಮಣಿಯರ ಚರಿತ್ರೆಯೇ, ಇಂದು ಈ ಬಗೆಯಿಂದ ಕೀರ್ತಿಸಲ್ಪಡಲು ಯೋಗ್ಯವಾಗಿದೆ.

ಮೊಗಲಾಯಿ ಪ್ರಭುಗಳಲ್ಲಿ ಮೂಲಪುರುಷನಾದ ಬಾಬರನೂ, ಅವನ ಮಗನಾದ ಹುಮಾಯೂನನೂ ತಮ್ಮ ಕಾಲಗಳನ್ನು ಮುಗಿಸಿಕೊಂಡು ಹೋದ ತರುವಾಯ ಅಕ್ಬರನು ಡಿಲ್ಲಿಯಲ್ಲಿ ಪ್ರಭುತ್ವ ಮಾಡತೊಡಗಿದನು. ಅಕ್ಬರನು ಮಹಾ ದಯಾಳುವೆಂದೂ ಮೊಗಲಾಯಿ ಪ್ರಭುಗಳಲ್ಲಿ ಸರ್ವೋತ್ತಮನೆಂದೂ ಚರಿತ್ರೆಯು ಹೊಗಳುತ್ತದೆ. ಅಂತಹ ಹೊಗಳಿಕೆಗೆ ಕಾರಣವಿರಬಹುದು. ಅವನು ಹಿಂದೂ ಮಹಮ್ಮದೀಯರಿಬ್ಬರನ್ನೂ ಒಂದೇ ದೃಷ್ಟಿಯಿಂದ ನೋಡಿ, ತನ್ನ ಪ್ರಜೆಗಳನ್ನು ಕ್ಷೇಮದಿಂದ ಕಾಪಾಡಿದನೆಂದು ಕೀರ್ತಿಸಲ್ಪಟ್ಟಿದ್ದಾನೆ. ಅವನ ಕಾಲದಲ್ಲಿ ದೇಶವು ಕಳ್ಳಕಾಕರ ಭಯವಿಲ್ಲದೆ, ಪರರಧಾಳಿಗೆ ಒಳಪಡದೆ - ಕೊಳ್ಳೆ ಸುಲಿಗೆಗಳ ಕಾಟವಿಲ್ಲದೆ, ಸಮಾಧಾನದಿಂದ ಜೀವಿಸಿತ್ತೆಂದು ಐತಿಹಾಸಿಕರು ಅವನ ಪ್ರಭುತ್ವವನ್ನು ಮುಕ್ತಹಸ್ತದಿಂದ ವರ್ಣಿಸಿದ್ದಾರೆ. ದೇಶವು ಹಾಗೆ ಸಮಾಧಾನಸ್ಥಿತಿಯಲ್ಲಿದ್ದುದರಿಂದಲೇ ಅವನ ಕಾಲದಲ್ಲಿ ದೇಶದಲ್ಲಿ ಹಲವು ಕಲೆ ಕವಿತೆಗಳೂ, ಶಿಲ್ಪಕಾರ್ಯಗಳೂ, ಬೆಳೆದು ದೇಶದ ಸೌಂದರ್ಯವನ್ನು ಹೆಚ್ಚಿಸಲು ಸಾಧಕವಾದುವು; ತನ್ನ ಪ್ರಜೆಗಳಲ್ಲಿ ಇವರವರೆಂದು ಪಕ್ಷಪಾತವಿಡದೆ ಎಲ್ಲರನ್ನೂ ಪ್ರೀತಿವಿಶ್ವಾಸಗಳಿಂದಲೂ ದಕ್ಷತೆಯಿಂದಲೂ ರಾಜ್ಯಭಾರ ಮಾಡಿದುದರಿಂದಲೇ ಅವನ ಕಾಲದಲ್ಲಿ ದಂಗೆ ದರೋಡೆಗಳು ಕ್ಷಾಮ ಡಾಮರಗಳು ಮುಂತಾದ ಭೀತಿಯಿರಲಿಲ್ಲವೆಂದು ಆತನು ಹೊಗಳಲ್ಪಟ್ಟಿದ್ದಾನೆ. ಆತನು ಧೀರನು, ಉದಾರನು, ರಣವೀರನು, ಶೌರ್ಯನಿಧಿಯು ಎಂದು ಹೊಗಳುವವರೂ ಉಂಟು. ಮಾತ್ರವಲ್ಲ, ಆತನು ಅರ್ಧಶತಮಾನ ಕಾಲ ಅನಿಚ್ಛಿನ್ನ

ವಾಗಿ ರಾಜ್ಯಭಾರ ಮಾಡಿದ ಸುಕೃತಜೀವಿ. ಆ ವಿಚಾರದಲ್ಲೂ ಸಂಶಯವಿಲ್ಲ. ಆದರೆ ತನ್ನಾ ಅಖಂಡ ರಾಜ್ಯಭಾರವನ್ನು ನಿರ್ವಹಿಸುವ ಕಾಲದಲ್ಲಿ ಕೆಲವು ಕಳಂಕ ಕಾರ್ಯಗಳನ್ನು ಅಕ್ಬರನು ಮಾಡಿದನು. ತನ್ನ ಆಳ್ವಿಕೆಯ ಸುರಕ್ಷಣೆಗಾಗಿ ಅವನು ಹಿಂದೂಗಳ ಬೆಂಬಲವನ್ನು ಬಯಸಿ, ಅವರೊಂದಿಗೆ ಸ್ನೇಹವಾಗಿರಲು ಇಚ್ಛಿಸಿದನು. ಸ್ನೇಹಕ್ಕಿಂತಲೂ ಬಾಂಧವ್ಯವು ಬಲವತ್ತರವಾದ ಬೆಂಬಲಸಾಧನವೆಂಬುದು ಅವನಿಗೆ ಗೋಚರವಾಗದಿರಲಿಲ್ಲ. ಆದುದರಿಂದ ಅವನು ಹಲವು ಮಂದಿ ರಜಪೂತ ರಮಣಿಯರನ್ನು ತಾನೂ ವಿವಾಹಮಾಡಿಕೊಂಡುದಲ್ಲದೆ, ತನ್ನ ಮನೆತನದಲ್ಲಿ ಹಲವರಿಗೂ ತೆಗೆದುಕೊಂಡು ರಜಪೂತರೊಂದಿಗೆ ತನಗಾದ ಬಾಂಧವ್ಯವನ್ನು ಬಲಪಡಿಸಿಕೊಂಡನು. ಈ ಮೂಲಕ ಹಲವು ಮಂದಿ ರಜಪೂತ ವೀರರು ಅವನ ಆಪ್ತಬಂಧುಗಳೂ, ಹಿತಚಿಂತಕರೂ ಸ್ನೇಹಿತರೂ ಆದರು. ಈ ಬಗೆಯಿಂದ ಹಿಂದೂ ಧರ್ಮವನ್ನು ಕಳಂಕಿತವಾಗಗೊಡಿಸಿದುದು ಮಾತ್ರವಲ್ಲ - ರೋಜಾಬಜಾರ್ ಎಂಬ ಹೆಸರಿನಿಂದ ಒಂದು ಪ್ರದರ್ಶನವನ್ನು ಏರ್ಪಡಿಸಿ, ಅದಕ್ಕೆ ತನ್ನ ರಾಜ್ಯದಲ್ಲಿನ ಉನ್ನತ ಅಧಿಕಾರವರ್ಗದವರು, ಸಾಮಂತರಾಜರು, ಸರದಾರರು, ಮುಂತಾದವರ ಕುಟುಂಬಗಳಲ್ಲಿನ ಸ್ತ್ರೀ ಜನರು ತಮ್ಮ ಕುಶಲತೆಯಿಂದ ತಯಾರಿಸಿದ ಪದಾರ್ಥಗಳನ್ನೇ ತಂದು ಪ್ರದರ್ಶಿಸಬೇಕೆಂದು ಏರ್ಪಡಿಸಿ, ಹಾಗೆ ಸ್ಫುರದ್ರೂಪಿಗಳಾದ ಹಲವು ಮಂದಿ ಸ್ತ್ರೀಯರೂ, ಯುವತಿಯರೂ ನೆರೆದಿದ್ದ ಸಮೂಹದಲ್ಲಿ ತಾನೂ ಕೆಲ ಕೆಲವು ವೇಳೆ ಸ್ತ್ರೀ ವೇಷವನ್ನು ಧರಿಸಿಕೊಂಡು ತನ್ನ ಮನಮೆಚ್ಚಿದ ಸ್ತ್ರೀ ರತ್ನವನ್ನು ಧನಕನಕಗಳಿಂದ ಮೋಹಗೊಳಿಸಿ ಸವಿಮಾತುಗಳಿಂದ ಮನವೊಲಿಸಿ ಅವಳ ಸತೀತ್ವಹರಣ ಮಾಡುತ್ತಿದ್ದನೆಂದೂ ಹೇಳಲ್ಪಟ್ಟಿದೆ. ಇಂತಹ ಒಂದೆರಡು ಕಾಮಸಂಬಂಧದ ಅನೀತಿಯ ಆಚರಣೆಗಳನ್ನು ಮಾನಸಿಕಮಾಡುವುದಾದರೆ, ಅಕ್ಬರನು ಆ ಕಾಲದ ಸರ್ವೋತ್ಕೃಷ್ಟ ರಾಜನಾಗಿದ್ದನೆಂದು ಹೇಳಲು ತಡೆಯಿಲ್ಲ. ಈ ವಿಚಾರವಂತಿರಲಿ.

ರಜಪೂತ ರಾಜವರ್ಗದಲ್ಲಿ, ಅಕ್ಬರನಿಗೆ ತಮ್ಮ ಮನೆಯ ಹೆಣ್ಣುಗಳನ್ನು ಕೊಟ್ಟು ತನ್ಮೂಲಕ ಚಕ್ರವರ್ತಿಯ ಅನುಗ್ರಹ ಸಂಪಾದನೆ ಮಾಡುವ ಕುಲನಾಶಕ ಆಚಾರವನ್ನು ಎಲ್ಲೋ ಕೆಲವು ಮನೆತನದವರು ಮಾತ್ರ ಮಾ

ಡಿದರಲ್ಲದೆ, ಮಿಕ್ಕ ರಾಜಪುತಾನದ ಅನೇಕಾನೇಕ ರಾಜವಂಶಗಳವರು ಈ ಬಗೆಯ ದುರಾಸೆಗೆ ಬಲಿಬೀಳಲಿಚ್ಛಿಸದೆ, ತಮ್ಮ ಪೂರ್ವದ ಗೌರವ ಆಚಾರಗಳನ್ನು ಕಾಪಾಡಿಕೊಳ್ಳುವುದನ್ನೇ ಪರಮ ಭಾಗ್ಯವನ್ನಾಗಿ ಎಣಿಸಿದ್ದರು. ಹಾಗೆ ಕೀರ್ತಿಕಾಮುರಾಗಿದ್ದ ರಾಜವಂಶಗಳವರಲ್ಲಿ ಚಿತ್ತೂರು ರಾಜವಂಶವು ಅತಿ ಮುಖ್ಯವಾದುದು. ಸ್ವಧರ್ಮಾಭಿಮಾನ, ಸ್ವಜಾತ್ಯಭಿಮಾನ, ಸ್ವದೇಶಾಭಿಮಾನ ಮುಂತಾದುವುಗಳಿಗಾಗಿಯೇ ತನ್ನ ಜೀವಿತವನ್ನು ಮೀಸಲಾಗಿಟ್ಟು, ಹೇಳಲಾಗದ-ನೆನೆಯಲಾಗದ ಕಷ್ಟಪರಂಪರೆಗಳನ್ನು ಅನುಭವಿಸಿದ ರಾಣಾ ಪ್ರತಾಪಸಿಂಹನು ತನ್ನ ನಾಮವನ್ನೂ, ತನ್ನ ದೇಶವಾದ ಮೇವಾರಿನ ನಾಮಧೇಯವನ್ನೂ ಅಜರಾಮರವನ್ನಾಗಿ ಮಾಡಿಟ್ಟಿದ್ದಾನೆ. ರಾಣಾ ಪ್ರತಾಪಸಿಂಹನ ಸಂಬಂಧದಿಂದ ಮೇವಾರು ಸಂಸ್ಥಾನದ ಚರಿತ್ರೆಯು ಸುವರ್ಣಾಕ್ಷರಗಳಿಂದ ಬರೆದಿಡಲ್ಪಡಲು ಅರ್ಹವಾಯಿತು. ತನ್ನ ಸರ್ವಸ್ವವನ್ನೂ ತ್ಯಜಿಸಿದರೂ ಸ್ವಧರ್ಮವನ್ನೂ ಸ್ವದೇಶಗೌರವವನ್ನೂ ತ್ಯಜಿಸಲು ಒಪ್ಪದಿದ್ದ ಪ್ರತಾಪನ ವಿಷಯದಲ್ಲಿ ಅಕ್ಬರನಿಗೆ ಭೀತಿಮಾತ್ರವಲ್ಲ-ವಿಶೇಷ ಗೌರವವೂ ಇದ್ದಿತು.

ಅಕ್ಬರನ ಸಮಕಾಲೀನನಾಗಿ ಚಿತ್ತೂರು ಸಂಸ್ಥಾನದಲ್ಲಿ ಜಗಮಲ್ ಎಂಬೊಬ್ಬ ರಜಪೂತವೀರನು ಆಧಿಪತ್ಯಮಾಡಿಕೊಂಡಿದ್ದನು. ಆತನಿಗೆ ರಾಣಿ ರಾಮಾಬಾಯಿ ಎಂಬೊಬ್ಬ ಸಾಧ್ವೀಮಣಿಯು ಪತ್ನಿಯಾಗಿದ್ದಳು. ಜಗಮಲ್ ಮಹಾರಾಜನು ಶೂರನೂ, ಸ್ವಾಭಿಮಾನಿಯೂ, ಧೈರ್ಯಶಾಲಿಯೂ ಆಗಿದ್ದುದರಿಂದ ಅಕ್ಬರನು ಅವನನ್ನು ತಗ್ಗಿಸಿ ತನಗೆ ಅಂಕಿತನನ್ನಾಗಿ ಮಾಡಿಕೊಳ್ಳದಿರತಕ್ಕುದು ಕಾಲಾನುಕಾಲದಲ್ಲಿ ತನಗೆ ಕ್ಷೇಮವಲ್ಲವೆಂದು ಬಗೆದು, ಒಂದುವೇಳೆ ಆತನ ರಾಜ್ಯದಮೇಲೆ ದಂಡೆತ್ತಿದನು. ಅಪಾರದಾದ ಮೊಗಲ್‌ಸೈನ್ಯವು ಚಿತ್ತೂರು ರಾಜಧಾನಿಯನ್ನು ಮುತ್ತಿ, ಹೊರಗಿನಿಂದ ಒಳಕ್ಕೂ ಒಳಗಿನಿಂದ ಹೊರಕ್ಕೂ ಜನಗಳನ್ನಾಗಲೀ ಯಾವುದೊಂದು ಪದಾರ್ಥವನ್ನಾಗಲೀ ಬಿಡದಂತೆ ನಿರ್ಬಂಧಿಸಿತು. ರಾಜಧಾನಿಯ ನಿವಾಸಿಗಳಿಗೆ ಹೊರಗಿನಿಂದ ನಿತ್ಯವ್ಯವಹಾರಕ್ಕೆ ಆವಶ್ಯಕವಾದ ಪದಾರ್ಥಗಳು ಬಾರದೆಯೂ, ನಿರ್ಭಾಧಕವಾಗಿ ತಮ್ಮತಮ್ಮ ಕೆಲಸಗಳನ್ನು ಮಾಡಿಕೊಳ್ಳಲು ಅವಕಾಶವಿಲ್ಲದೆಯೂ, ಬಹು ತೊಂದರೆಯುಂಟಾಯಿತು. ಜಗ

ಮಲ್ ರಾಜನು, ತನ್ನಿಂದ ಮೊಗಲ್ ಸಾಮ್ರಾಜ್ಯಕ್ಕೆ ಯಾವ ದ್ರೋಹವೂ ಆಚರಿಸಲ್ಪಡದಿದ್ದಾಗ್ಯೂ, ಹೀಗೆ ಏಕಾಏಕಿ, ತನ್ನ ರಾಜ್ಯಕ್ಕೆ ಆಪತ್ತು ಒದಗಲು ಕಾರಣವೇನೋ, ಆದಕ್ಕೆ ಪ್ರತೀಕಾರವೇನೋ ಎಂದು ಯೋಚಿಸ ತೊಡಗಿದನು. ಅಷ್ಟರಲ್ಲಿ, ಚಕ್ರವರ್ತಿಯ ಕಡೆಯ ಒಬ್ಬ ರಾಯಭಾರಿಯು ಮಹಾರಾಜನ ಆಸ್ಥಾನವನ್ನು ಹೊಕ್ಕು, ಆತನನ್ನು ಕುರಿತು—'ಮಹಾ ರಾಜರೇ, ನಮ್ಮ ಪ್ರಭುವಾದ ಅಕ್ಬರ್ ಚಕ್ರವರ್ತಿಗಳವರು ತಮಗೆ ತಿಳಿಸಿ ಪ್ರತ್ಯುತ್ತರ ತರಬೇಕೆಂದು ಹೇಳಿ ನನ್ನನ್ನು ಕಳುಹಿಸಿದ್ದಾರೆ. ದಯ ವಿಟ್ಟು ಲಾಲಿಸಬೇಕು. ರಾಜಪುತಾನದ ಹಲವು ಸಂಸ್ಥಾನಗಳವರು ಮೊಗ ಲಾಯಿ ಚಕ್ರಾಧಿಪತ್ಯಕ್ಕೆ ಸಾಮಂತರಾಗಿ, ಅದರ ಸಾರ್ವಭೌಮತ್ವವನ್ನು ಅಂಗೀಕರಿಸುತ್ತಿದ್ದಾರೆಂಬ ವಿಚಾರವು ನಿಮಗೆ ತಿಳಿಯದುದಲ್ಲ. ದೇಶದಲ್ಲಿ ಪ್ರಜಾಕ್ಷೇಮವು ಸಾರ್ವತ್ರಿಕ ಒಂದೇರೀತಿಯಾಗಿ ನೆಲೆಸಲು, ಏಕಾಧಿಪತ್ಯವು ಇರಬೇಕಾದುದು ಅತ್ಯಾವಶ್ಯಕವು. ಈಗ ನೀವು ಇತರರಂತೆಯೇ ನಮ್ಮ ಚಕ್ರಾಧಿಪತ್ಯದ ಸಾಮಂತರಾಜ ಪದ್ಧತಿಯನ್ನು ಒಪ್ಪಿಕೊಂಡು, ನಮಗೆ ಸಾಂವತ್ಸರಿಕ ಕಪ್ಪವನ್ನು ಸಲ್ಲಿಸಲೊಪ್ಪಿ, ನಿಮ್ಮ ರಾಜ್ಯದಲ್ಲಿ ಎಂದಿನಂ ತೆಯೇ ಸುಖವಾಗಿ ರಾಜ್ಯವಾಳಿಕೊಂಡಿರಬಹುದು. ಹಾಗಲ್ಲದಿದ್ದ ಸಂದ ರ್ಭದಲ್ಲಿ, ನಿಮ್ಮ ಸರ್ವಶಕ್ತಿಯೊಂದಿಗೆ ನಮ್ಮೊಂದಿಗೆ ಯುದ್ಧಕ್ಕೆ ಸಿದ್ಧ ರಾಗತಕ್ಕದು' ಎಂದು ತಮಗೆ ತಿಳಿಸಲು ಆಜ್ಞಾಪಿಸಿದ್ದಾರೆ. ಯೋಗ್ಯ ವಿಚಾರದಿಂದ ಪ್ರತ್ಯುತ್ತರ ಕೊಡಿಸಬೇಕು-ಎಂದು ವಿಜ್ಞಾಪಿಸಿದನು.

ರಾಯಭಾರಿಯಾಡಿದ ಆ ಮಾತುಗಳು ಸ್ವಾಭಿಮಾನಶೀಲನಾದ ಜಗ ಮಲ್ ಮಹಾರಾಜನ ಮನಸ್ಸಿಗೆ ವಿಶೇಷ ಸಂತಾಪವನ್ನುಂಟುಮಾಡಿದುವು. ತಕ್ಷಣವೇ ಪ್ರತ್ಯುತ್ತರವನ್ನು ಹೇಳಿ ಕಳುಹಿಸಿಬಿಡಬಹುದಾಗಿದ್ದರೂ, ತನ್ನ ಮಂತ್ರಿ ಸೇನಾಧಿಪರನ್ನೂ, ಸರದಾರರನ್ನೂ ಕರೆಯಿಸಿ ಆಪ್ತಾಲೋಚನೆ ನಡಿಸಿ ಒಂದು ತೀರ್ಮಾನಕ್ಕೆ ಬಂದು, ಮೊಗಲ್ ರಾಯಭಾರಿಯನ್ನು ಬರ ಮಾಡಿಕೊಂಡು ಆತನನ್ನು ಕುರಿತು—'ಅಯ್ಯಾ, ನಾವೀಗ ಹೇಳುವ ಮಾತು ಗಳನ್ನು ನಿಮ್ಮ ಪ್ರಭುವಿಗೆ ತಿಳಿಸು. ಚಿತ್ತೂರು ರಾಜನೂ, ಆತನ ಶೂರ ಪ್ರಜೆಗಳೂ, ಪ್ರಾಣಕ್ಕಾಗಿ ಮಾನವನ್ನು ಎರವಲಾಗಿತ್ತು ಬದುಕಲು ಜನಿಸಿ ದವರಲ್ಲ-ಅವರ ದೇಹಗಳಲ್ಲಿ ಪ್ರಾಣಗಳಿರುವವರೆಗೂ ನಿಮಗೆ ಶರಣುಬಿದ್ದು

ನಿಮ್ಮ ಸಾಮಂತರಾಗಿ ಬಾಳಲು ಇಚ್ಛಿಸತಕ್ಕವರಲ್ಲ. ಯುದ್ಧವೇ ಸಿದ್ಧ.' ಎಂದು ತಿಳುಹಿಸು, ಎಂಬದಾಗಿ ಹೇಳಿ ಅವನನ್ನು ಕಳುಹಿಸಿದರು. ಸರಿ, ಮುಂದೆ ಕೇಳಬೇಕಾದ್ದೇನು. ರಾಜಧಾನಿಯಲ್ಲಿ ಯುದ್ಧವಾರ್ತೆಯ ಕೋಲಾಹಲವೆದ್ದಿತು. ಸರದಾರರ ಮತ್ತು ಸೈನಿಕರ ಆಯುಧಗಳು ಹೊರ ಬಿದ್ದು ಪ್ರಕಾಶಿಸತೊಡಗಿದುವು. ಜಗಮಲ್ಲನ ಆಜ್ಞೆಯಿಂದ ಕೋಟೆಯ ಮಹಾದ್ವಾರವು ಬಲವಾಗಿ ಮುಚ್ಚಲ್ಪಟ್ಟಿತು. ಮಹಾರಾಜನು, ತನ್ನ ಸೈನ್ಯದೊಡನೆ ಕೋಟೆಯ ಬುರಜುಗಳಮೇಲೇರಿ, ಶತ್ರುಸೈನ್ಯದೊಂದಿಗೆ ಯುದ್ಧಮಾಡತೊಡಗಿದನು. ಆದರೆ ಮೊಗಲರ ಅಪಾರ ಸೈನ್ಯದೊಂದಿಗೆ, ಅಲ್ಪಸಂಖ್ಯೆಯ ಸೈನ್ಯವು ಸರಿಗಟ್ಟಲಾರದೆಂದು ರಾಜನಿಗೆ ಮನವರಿಕೆ ಯಾಗಿದ್ದರೂ, ತನ್ನಾ ಸೈನ್ಯವನ್ನು ಹುರಿದುಂಬಿಸಿ, ಪ್ರೋತ್ಸಾಹಿಸಿ, ಸ್ವಾತಂತ್ರ್ಯಕ್ಕಾಗಿ ಹೋರಾಡುವ ತಮಗೆ ಜಯವು ಸಿದ್ಧವೆಂದು ಉತ್ಸಾಹಕರ ವಾಕ್ಯಗಳನ್ನು ಹೇಳುತ್ತಿದ್ದುದರಿಂದ ರಜಪೂತ ಸೈನ್ಯವು ಪ್ರಾರಂಭಕ್ಕೆ ಬಹು ಪರಾಕ್ರಮದಿಂದ ಯುದ್ಧಮಾಡಿತು. ಅವರ ಬಾಣವರ್ಷಗಳೂ, ಸಿಂಹ ಗರ್ಜನೆಗಳೂ ಕೆಲಹೊತ್ತು ಭಯಂಕರವಾಗಿ ತೋರಿ, ಮೊಗಲಸೈನ್ಯವು ಹಿಂಜರಿಯುವ ಹೊತ್ತು ಬಂತೆಂದು ಚಿಂತಿಸುವಂತಾಯಿತು. ಆದರೆ ಅದರ ಅಪಾರ ಸಂಖ್ಯೆಯೂ, ಫಿರಂಗಿಯೇ ಮುಂತಾದ ಅಮಿತ ಯುದ್ಧ ಸಾಮಗ್ರಿಗಳೂ, ಕೋಟೆಯ ಎಲ್ಲಾ ಭಾಗದಲ್ಲೂ ಒಮ್ಮೆಗೇ ಬಾಣಪ್ರಯೋಗಮಾಡಿ ಯುದ್ಧವನ್ನಾರಂಭಿಸಿದುದು, ರಜಪೂತಸೈನ್ಯವನ್ನು ಬಹಳ ಕಷ್ಟಕ್ಕೆ ತಂದಿಟ್ಟಿತು. ಬುರಜುಗಳಮೇಲೆ, ಕುದುರೆಯನ್ನು ಹತ್ತಿ ತಿರುಗಾಡುತ್ತಾ, ಯುದ್ಧದ ಸ್ಥಿತಿಯನ್ನು ಪರಿಕಿಸುತ್ತಿದ್ದ ಜಗಮಲ್ ರಾಜನು ಆ ಪರಿಸ್ಥಿತಿಯನ್ನು ನೋಡಿ ಗಾಬರಿಯಾದನು. ಅಂದಿನ ಯುದ್ಧವು ಚಿತ್ತೂರಿನ ವಿನಾಶಕ್ಕಾಗಿಯೇ ಪ್ರಾಪ್ತವಾದುದೆಂದೂ, ಪುರುಷರೆಲ್ಲರೂ ಯುದ್ಧದಲ್ಲಿ ಹತರಾಗಿ, ಸ್ತ್ರೀಯರು ಮಾನಸಂರಕ್ಷಣೆಗಾಗಿ ಅಗ್ನಿಪ್ರವೇಶಮಾಡಬೇಕಾದುದೇ ಅಂದಿನ ವಿಧಿಯೆಂಬುದೂ ಆತನ ಮನಸ್ಸಿಗೆ ಖಚಿತವಾಗಿ ತೋರತೊಡಗಿತು.

ಆ ಸಂದರ್ಭದಲ್ಲಿ, ಆತನ ಭಾರ್ಯೆಯಾದ ರಾಣೀ ರಾಮಾಬಾಯಿಯು ಯುದ್ಧಸ್ಥಿತಿಯನ್ನು ಗಮನಿಸುತ್ತಾ, ಸೈನಿಕರಿಗೆ ಪ್ರೋತ್ಸಾಹ ಕೊಡುತ್ತಾ ಅಲ್ಲೇ ತಿರುಗಾಡುತ್ತಲಿದ್ದಳು. ಆಕೆಯು ತನ್ನ ಪತಿಯು

ಆತಂಕಯುಕ್ತನಾಗಿ ಚಿಂತಾಮಗ್ನನಾಗಿರುವನೆಂಬದನ್ನು ಕಂಡುಹಿಡಿದು, ಆತನ ಬಳಿಗೆ ಬಂದು-'ಆರ್ಯಪುತ್ರಾ, ತಾವು ಇಂದಿನ ಯುದ್ಧದ ಪರಿಸ್ಥಿತಿಯನ್ನು ಕುರಿತು ಇಷ್ಟು ಚಿಂತಾಕ್ರಾಂತರಾಗಬೇಕಾದುದಿಲ್ಲ. ನಮ್ಮ ಸೈನಿಕರೂ, ಶತ್ರುಸೈನ್ಯವನ್ನು ಕೊಲ್ಲುವುದರಲ್ಲಿ ಆಯಾಸಪಡಬೇಕಾದುದೂ, ಅವರು ನಮ್ಮ ಸೈನ್ಯವನ್ನು ವಧಿಸಬೇಕಾದುದೂ ವೃಥಾ ಕಾರ್ಯಗಳೆಂದೇ ನನಗೆ ತೋರುತ್ತದೆ. ನನಗೆ ಅಪ್ಪಣೆಕೊಡಿಸೋಣವಾಗಲಿ. ನಾನು ಹೋಗಿ ನಮಗೆ ಮುಖ್ಯ ಶತ್ರುವಾದ ಅಕ್ಬರನನ್ನು ಆತನ ಬಿಡಾರದಲ್ಲೇ ಕೊಂದು ಬರುತ್ತೇನೆ. ಮೊಗಲರ ಸೈನ್ಯಕ್ಕೆ ಶಿರಃಪ್ರಾಯನಾದ ಆತನು ವಧೆಯಾದನೆಂದರೆ ಮಿಕ್ಕ ಇಷ್ಟು ಸೈನ್ಯವಿದ್ದರೂ ನಾವು ಅದರಿಂದ ಹೆದರಬೇಕಾದುದಿಲ್ಲ' ಎಂದಳು. ತನ್ನ ಪತ್ನಿಯಾಡಿದ, ಆ ಸಾಹಸಯುಕ್ತವಾದ ಮಾತುಗಳು ರಾಜನಿಗೆ ಪರಮಾಶ್ಚರ್ಯವನ್ನುಂಟುಮಾಡಿದುವು. ಅಕ್ಬರನ ಅಪಾರ ಶೌರ್ಯವೂ, ಮೊಗಲಸೈನ್ಯದ ಕ್ರೌರ್ಯವೂ ಆತನ ಕಣ್ಣಿಗೆ ಕಟ್ಟಿದಂತಾಗಿ, ತನ್ನ ಪತ್ನಿಯ ಆಲೋಚನೆಯು ಅಸಾಧ್ಯವಾದುದೆಂದು ತಿಳಿದು, ಆಕೆಯನ್ನು ಕುರಿತು-ಇಂತಹ ಅಗಾಧವಾದ ಕಾರ್ಯವು ನಿನ್ನಿಂದ ಆಗಲಾರದು. ಸ್ತ್ರೀಮಾತ್ರಳೊಬ್ಬಳು, ಏಕಾಂಗಿಯಾಗಿ, ಮೊಗಲ್ ಸೈನ್ಯಸಾಗರವನ್ನು ಪ್ರವೇಶಿಸಿ. ಶೂರರಾದ ಅಂಗರಕ್ಷಕರಿಂದ ಪರಿವೇಷ್ಟಿತನಾದ ಅಕ್ಬರ್ ಚಕ್ರವರ್ತಿಯನ್ನು ವಧಿಸುವುದೆಂಬುದು ವ್ಯರ್ಥಪ್ರಲಾಪ. ಆ ಮಾತನ್ನು ಬಿಟ್ಟು, ಬೇರೆ ಯೋಚನೆಯನ್ನು ಮಾಡು' ಎಂದು ನುಡಿದನು.

ರಾಣಿಯು ಆ ಮಾತು ಕೇಳಿ - 'ಆರ್ಯಪುತ್ರನು ಆ ವಿಚಾರದಲ್ಲಿ ಚಿಂತೆಪಡಲಾಗದು. ನಾನು ಮಾಡುತ್ತೇನೆಂದು ತೊಡಗುವ ಕಾರ್ಯದ ಸಂಪೂರ್ಣ ಜವಾಬುದಾರಿಯೂ, ನನ್ನ ಮೇಲೂ ನನಗೆ ಈ ಕಾರ್ಯಕ್ಕೆ ಪ್ರೇರಣೆಯನ್ನುಂಟುಮಾಡಿದ ಈಶ್ವರನ ಮೇಲೂ ಇರಲಿ. ತಾವು ನನ್ನೊಂದಿಗೆ ಸಂಪೂರ್ಣ ಸಹಾನುಭೂತಿಯಿಂದ ಆಜ್ಞೆಮಾಡಿ ಕಳುಹಿಸೋಣವಾಗಲಿ! ತಮ್ಮ ಆಶೀರ್ವಾದ ಬಲದಿಂದ ನಾನು ಎಂತಹ ಕಠಿಣವಾದ ಕಾರ್ಯವನ್ನಾದರೂ ಮಾಡಲು ಶಕ್ತಳಾಗುವೆನು.' ಎಂದು ನುಡಿದಳು. ತನ್ನ ರಾಣಿಯ ಈ ಪ್ರಾರ್ಥನೆಯು ಜಗಮಲ್ ಮಹಾರಾಜನಿಗೆ ಆಶ್ಚರ್ಯವನ್ನುಂಟುಮಾಡಿದಷ್ಟೇ - ಆಶೋತ್ತರವನ್ನೂ ಉಂಟುಮಾಡಿತು. ಅಗಲಾ

ತನು, ಏನೋ ದೈವೇಚ್ಛೆ ಹೇಗಿದೆಯೋ ತಿಳಿಯಬಲ್ಲವರಾರು? ಎಂದು ಕೊಂಡು ತನ್ನ ರಾಣಿಯನ್ನು ಕುರಿತು -' ದೇವೀ, ನಿನ್ನ ಸುಕುಮಾರ ಹಸ್ತ ಗಳಿಂದ ಕಠಿಣ ಹೃದಯಿಗಳಾದ ಶತ್ರುಗಳ ಹೃದಯ ವಿಭೇದನ ಕಾರ್ಯವು ನಿಶ್ಚಯವಾಗಿ ನಡೆಯಬಲ್ಲುದೆಂದು ನಿನಗೆ ಧೈರ್ಯವಿದ್ದರೆ, ನಿನ್ನೀ ಕಾರ್ಯ ಕ್ಕೆ ನಾನು ಅಡ್ಡಿಬರಲು ಇಚ್ಛಿಸುವುದಿಲ್ಲ ಆದರೆ ಶತ್ರುಸೈನ್ಯ ಮಧ್ಯಕ್ಕೆ ಏಕಾಕಿನಿಯಾಗಿ ಹೋಗಲು ಇಚ್ಛಿಸುವ ನೀನು ಜೊತೆಗೊಂದು ಚಿಕ್ಕ ಕೃಪಾ ಣವನ್ನು ಗುಪ್ತವಾಗಿ ತೆಗೆದುಕೊಂಡು ಹೋಗಿರು. ಹಾಗೊಂದುವೇಳೆ ಮಾನಭಂಗವಾಗುವ ಪ್ರಸಂಗವುಂಟಾದರೆ, ಅದರಿಂದ ಆತ್ಮಹತ್ಯ ಮಾಡಿ ಕೊಂಡು ರಾಜಪುತ್ರ ಸ್ತ್ರೀಯರಿಗೆ ಯೋಗ್ಯವೆನ್ನಿಸುವಂತೆ ಮಾನವನ್ನು ಕಾಪಾಡಿಕೋ!' ಎಂದು ನುಡಿದನು.



## ಅಧ್ಯಾಯ ೨ "ಬಾದಷಹನ ಬಿಡಾರದಲ್ಲಿ"

ಹೀಗೆ ತನ್ನ ಪತಿಯು ಒಪ್ಪಿ ಹೊರಡಲು ಅನುಜ್ಞೆಯಿತ್ತೊಡನೆಯೇ ರಾಣೀ ರಾಮಾಬಾಯಿಯು, ಪರಮ ಸಂತೋಷದಿಂದ ತನ್ನ ಅಂತಃಪುರಕ್ಕೆ ನಡೆದು, ರಾಜಸ್ತ್ರೀ ಜನ ಯೋಗ್ಯವಾದ ತಾನು ಧರಿಸಿದ ದಿವ್ಯ ವಸ್ತ್ರಾಭರಣ ಗಳನ್ನು ಕಳೆದು, ಕಾವಿಯ ವಸ್ತ್ರಗಳನ್ನು ಧರಿಸಿಕೊಂಡಳು. ಹಲವು ಬಗೆ ಯ ದಿವ್ಯ ಗಂಧ ದ್ರವ್ಯಗಳಿಂದ ವಿಭೂಷಿತವಾಗಿದ್ದ ಜಡೆಯನ್ನು ಬಿಚ್ಚಿ- ಮುಕ್ತಕೇಶಿನಿಯಾದಳು. ಹಲವು ಮಣಿಯಹಾರಗಳನ್ನು ಹಾಕಿಕೊಂಡು ಮಹಮ್ಮದೀಯ ಬೈರಾಗಿಣಿಯ ವೇಷವನ್ನು ಧರಿಸಿಕೊಂಡಳು. ಉಡಿ ಯಲ್ಲಿ ಗುಪ್ತವಾಗಿ ಒಂದು ಚಿಕ್ಕ ಖಡ್ಗವನ್ನು ಸಿಕ್ಕಿಸಿಕೊಂಡು, ಅಂತಃಪುರ ದಿಂದ ಹೊರಬಿದ್ದಳು. ಮಹಾರಾಣಿಯು ಆ ವೇಷದಿಂದ ಹೊರಟ ಸಂಗ ತಿಯು, ಯಾರಿಗೂ ಪರಿಚಯವಿರಲಿಲ್ಲ.-

ಅರಮನೆಯಿಂದ ಹೊರಟ ರಾಣೀ ರಾಮಾಬಾಯಿಯು ಕೋಟೆಯನ್ನು ದಾಟಿ ಕೆಳಗಿಳಿದು ಭಯಲೇಶವೂ ಇಲ್ಲದೆ ನೇರವಾಗಿ ಮೊಗಲ್ ಸೈನ್ಯವಿದ್ದ

ಬಿಡಾರದ ಬಳಿಗೆ ಹೋದಳು. ಅಲ್ಲಿದ್ದ ಸೈನ್ಯದ ಕಾವಲಿನವರನ್ನು ಕುರಿತು-ತಾನು ಅಕ್ಬರ್ ಬಾದಷಹಾನನ್ನು ಕಂಡು ಆಶೀರ್ವದಿಸುವ ಉದ್ದೇಶದಿಂದ ಬಂದಿರುವುದಾಗಿಯೂ, ತನ್ನನ್ನು ಆತನ ಬಳಿಗೆ ಕರೆದುಕೊಂಡು ಹೋಗಬೇಕೆಂದೂ ಅಪೇಕ್ಷಿಸಿದಳು. ಆ ಭೈರಾಗಿಣಿಯ ತರುಣ ವಯಸ್ಸೂ, ಮುಖದಲ್ಲಿ ಉಕ್ಕುತಿದ್ದ ದಿವ್ಯವರ್ಚಸ್ಸೂ, ಮೃದು ಮಧುರ ಕಂಠಧ್ವನಿಯೂ, ಅಲ್ಲದೆ ಆಕೆಯು ಕೈಯಲ್ಲಿ ಹಿಡಿದಿದ್ದ ಸಿತಾರನ್ನು ಬಾರಿಸುತ್ತಾ, ಕೇವಲ ದೈವನ್ಯಸ್ತಚಿತ್ತಳಾಗಿದ್ದಂತೆ ಆಕೆಯು ಹೇಳಿಕೊಳ್ಳುತ್ತಿದ್ದ ಮನಮೋಹಕವಾದ ಗೀತರವವೂ, ಅವರ ಮನಸ್ಸನ್ನು ಹರಣಮಾಡದಿರಲಿಲ್ಲ. ಅವರೆಲ್ಲರೂ, ಚಿತ್ರಪ್ರತಿಮೆಗಳಂತೆ ಸ್ತಬ್ಧರಾಗಿ ರೆಪ್ಪೆಮುಚ್ಚದೆ ಆಕೆಯನ್ನೇ ನೋಡುತ್ತಾ ಕುಳಿತುಬಿಟ್ಟರು. ಸ್ವಲ್ಪಹೊತ್ತು ಹಾಗೆ ಕಳೆದ ತರುವಾಯ, ಭೈರಾಗಿಣಿಯು ತನ್ನನ್ನು ಶೀಘ್ರವಾಗಿ ಬಾದಷಹಾನ ಬಳಿಗೆ ಕರೆದೊಯ್ಯಿರೆಂದು ಹಿಂದಿನ ತನ್ನ ಮಾತನ್ನೇ ಮತ್ತೊಮ್ಮೆ ಸ್ಪಷ್ಟವಾಗಿ ಹೇಳಿದಳು. ಆಕೆಯ ವರ್ಚಸ್ವೀ ಆಜ್ಞೆಯನ್ನು ಉಲ್ಲಂಘಿಸಲು ಯಾರಿಗೂ ಧೈರ್ಯಸಾಲದೆ, ಆಕೆಯು ಬಾದಷಹಾನಿಗೆ ಪರಿಚಯವಿರುವ ಯಾರೋ ಒಬ್ಬ ದೊಡ್ಡ ಯೋಗಿನಿಯಿರಬಹುದೆಂದೆಣಿಸಿ, ಕಾವಲಿನ ಸಿಪಾಯಿಗಳು ಆಕೆಯನ್ನು ಬಾದಷಹಾನ ಡೇರೆಯ ಬಳಿಗೆ ಕರೆದೊಯ್ದರು. ಅಲ್ಲಿದ್ದ ದ್ವಾರರಕ್ಷಕರೂ ಸಹ, ಹಿಂದಿನವರಂತೆಯೇ ಆ ಅಪೂರ್ವವ್ಯಕ್ತಿಯನ್ನು ಕಂಡು ಆಶ್ಚರ್ಯಮಗ್ನರಾಗಿ, ನಿರೋಧಿಸಲರಿಯದೆ, ಬಾದಷಹಾನ ಡೇರೆಯೊಳಕ್ಕೆ ಕರೆದೊಯ್ದು ಭೇಟಿ ಮಾಡಿಸಿದರು. ಅಕ್ಬರನೂ, ಫಕೀರಿಣಿಯ ಆ ಅಪೂರ್ವ ರೂಪ ಸಂಪತ್ತಿಯನ್ನೂ, ವಯಸ್ಸನ್ನೂ ಅವುಗಳಿಗೆ ಅಸ್ವಾಭಾವಿಕವೆನ್ನಿಸುವಂತಿದ್ದ ಆ ಯೋಗಿನಿಯ ವೇಷವನ್ನೂ ನೋಡಿ ಪ್ರಾರಂಭಕ್ಕೆ ಅಪ್ರತಿಭನಾದನು. ಅಷ್ಟರಲ್ಲಿ ತಕ್ಕಷ್ಟು ಸಮಿಾಪಕ್ಕೆ ಬಂದಿದ್ದ ಆಕೆಯು, ಬಾದಷಹಾನ ಗೌರವಕ್ಕೆ ತಕ್ಕ ರೀತಿಯಲ್ಲಿ ಜೋಹರು (ವಂದನೆ) ಮಾಡಿ, ಆಶೀರ್ವಾದಮಾಡಲು ತನ್ನ ಸಿತಾರನ್ನು ಸರಿಪಡಿಸಿಕೊಂಡಿದ್ದಳು. ಅಕ್ಬರನು, ಆಕೆಯ ಮುಖಲಕ್ಷಣವನ್ನೂ, ಕೃತ್ರಿಮ ವೇಷವನ್ನೂ ಕಂಡು, ಇದೇನೋ ವಿಚಿತ್ರವಾಗಿದೆಯೆಂದುಕೊಂಡು -' ನೀನಾವ ಅಪೇಕ್ಷೆಯಿಂದ ಇಲ್ಲಿಗೆ ಬಂದೆ? ' ಎಂದು ಪ್ರಶ್ನಿಸಿದನು. ರಾಣಿಯು -'ಹಿಂದೂಸ್ಥಾನಕ್ಕೇ ಪ್ರಭುವಾದ ನಿಮ್ಮನ್ನು ಭಗವಂತನ ಹೆಸರಿನಲ್ಲಿ ಆಶೀ

ರ್ವದಿಸಿ, ಈಶ್ವರ ಭಜನೆಯಿಂದ ಮೆಚ್ಚಿಸಿ ಹೋಗೋಣವೆಂದು ಬಂದೆನು' ಎಂದು ನುಡಿದಳು. ಅಕ್ಬರನು, ಮೌನದಿಂದ ಸಮ್ಮತಿಯನ್ನೀಯಲಾಗಿ ಆಕೆಯು, ತನ್ನ ಸಿತಾರನ್ನು ಶ್ರುತಿಮಾಡಿಕೊಂಡು, ಗಾಯನಕ್ಕೆ ಪ್ರಾರಂಭಿಸಿ, ಒಂದು ಹಿಂದೂಸ್ಥಾನೀ ಕೀರ್ತನೆಯನ್ನು ಹಾಡಿದಳು. ಆ ಮಧುರತರ ಸ್ವರ್ಗೀಯ ಗಾಯನವು, ಆತನನ್ನು ಪರವಶನನ್ನಾಗಿಸಿತು. ಅಕ್ಬರನು, ಕಣ್ಣುಮುಚ್ಚಿಕೊಂಡು ತಲ್ಲೀನನಾದವನಂತೆ, ಕೈತಾಳಗಳನ್ನು ಹಾಕುತ್ತಾ ಕುಳಿತುಬಿಟ್ಟನು. ಸೇವಕರೆಲ್ಲರೂ ಹೊರಗಿದ್ದರು. ಡೇರೆಯೊಳಗಿದ್ದವರೆಂದರೆ, ಸಂಗೀತ ಹೇಳುತ್ತಿದ್ದ ಫಕೀರಿಣಿ ಮತ್ತು ಕಣ್ಣು ಮುಚ್ಚಿ ತದೇಕಮಾನಸನಾಗಿ ಕುಳಿತಿದ್ದ ಬಾದಷಹಾ ಈ ಇಬ್ಬರೇ! ಮಾಯವೇಷದ ಫಕೀರಿಣಿಯು ಮತ್ತೊಂದು ಮನಮೋಹಕ ಗೀತವನ್ನೂ ಹಾಡಿದಳು. ಆ ಸ್ವರ್ಗೀಯ ಗಾಯನವೂ, ಸಿತಾರು ಬಾರಿಸುವ ಮಾಧುರ್ಯವೂ ಕರ್ಣಾಪ್ಯಾಯನವಾಗಿರಲು ಅಕ್ಬರನು ಪರಮಾನಂದಮಗ್ನನಾಗಿ ಮುಚ್ಚಿದ ಕಣ್ಣುಗಳನ್ನು ತೆರೆಯದೆ ಪರವಶನಾದಂತೆ ಸುಮ್ಮನಿದ್ದನು. ಆ ಅನುಕೂಲ ಸಂದರ್ಭವನ್ನು ನೋಡಿ, ಯೋಗಿನಿಯ ವೇಷದ ರಾಣೀ ರಾಮಾಬಾಯಿಯು, ತಾನು ಉಡಿಯಲ್ಲಿ ಸಿಕ್ಕಿಸಿಕೊಂಡಿದ್ದ ಖಡ್ಗವನ್ನು ಹೊರಕ್ಕೆ ತೆಗೆದು ಕೈಯಲ್ಲಿ ಹಿಡಿದುಕೊಂಡು ಒಂದೇ ಏಟಿಗೆ ಬಾದಷಹಾನ ಕಂಠಕ್ಕೆ ಪ್ರಯೋಗಮಾಡಿ ಆತನನ್ನು ತೀರಿಸಿಬಿಡಲು ಹವಣಿಸಿದಳು.

ಆದರೆ, ಆ ಪ್ರಯತ್ನದಲ್ಲಿ ಒಂದು ನಿಮಿಷಕಾಲ ಆಕೆಯು ಹಾಡುಗಾರಿಕೆಯನ್ನು ನಿಲ್ಲಿಸಲು, ಅಕ್ಬರನು ಸಂಗೀತವು ನಿಲ್ಲಲು ಕಾರಣವೇನೋ ತಿಳಿಯಬೇಕೆಂದು ಅಕಸ್ಮಾತ್ತಾಗಿ ಕಣ್ಣುಗಳನ್ನು ತೆರೆದನು. ಒಡನೆ ಎದುರಿಗೆ ಖಡ್ಗಹಸ್ತಳಾಗಿ ಭವಾನಿಯಂತೆ ಭಯಂಕರ ರೂಪಿನಿಂದ ನಿಂತಿದ್ದ ಆ ಭೈರಾಗಿಣಿಯನ್ನು ಕಂಡು, ಜಾಗ್ರತನಾಗಿ ಎದ್ದು ಅಪಾಯವಾಗದಂತೆ ಆಕೆಯ ಕೈಯಲ್ಲಿದ್ದ ಬಾಕನ್ನು ಯುಕ್ತಿಯಿಂದ ಕಿತ್ತುಕೊಂಡುಬಿಟ್ಟನು. ತನ್ನ ಮನೋರಥವು ಹೀಗೆ ನಿರರ್ಥಕವಾಗಲು, ಮುಂದೇನು ಮಾಡಬೇಕೆಂದು ತೋರದೆ ರಾಣೀ ರಾಮಾಬಾಯಿಯು ಸ್ವಲ್ಪಹೊತ್ತು ಅಧೋವದನಳಾಗಿ ಸುಮ್ಮನೆ ನಿಂತುಬಿಟ್ಟಳು. ಆಗ ಅಕ್ಬರನು, ಆಕೆಯು ತನ್ನ ಪ್ರಾಣಹರಣ ಮಾಡಲು ಉದ್ಯುಕ್ತಳಾಗಿದ್ದುದನ್ನೂ ಮಾನಸಿಕಮಾಡಿ 'ಎಲಾ

ಘಟೀರಿಣಿಯೇ, ನಿನ್ನೀ ಮನಮೋಹಕ ಗಾನದಿಂದ ನಾನು ಸಂತೋಷಪಟ್ಟಿದ್ದೇನೆ ನಿನನಗೇನು ಬಹುಮಾನ ಬೇಕೋ ಕೇಳಿಕೋ! ನಿನ್ನ ಅಪರಾಧವನ್ನು ಕ್ಷಮಿಸಿದ್ದೇನೆ' ಎಂದನು.

ತನ್ನ ಪ್ರಾಣಹರಣಮಾಡಲು ಉದ್ಯುಕ್ತಳಾಗಿದ್ದ ತನ್ನನ್ನು ಅಪ್ರಾರ್ಥಿತನಾಗಿ ಕ್ಷಮಿಸಿದ ಆತನ ಉದಾರಭಾವವನ್ನು ಕಂಡು ರಾಣೀ ರಾಮಾಬಾಯಿಗೆ ಪರಮಾಶ್ಚರ್ಯವಾಯಿತು. ಆತನ ಮುಖದಲ್ಲಿದ್ದ, ಮಂದಹಾಸ ಸೂಚಕವಾದ ಸೌಮ್ಯಭಾವವೂ, ಪ್ರಾಣಾಪತ್ತಿಯು ಒದಗಿದ್ದ ಸಂದರ್ಭದಲ್ಲೂ ಉದ್ವೇಗಗೊಳ್ಳದೆ ಶಾಂತನಾಗಿಯೇ ಇದ್ದ ಆತನ ಧೈರ್ಯ ಸಾಹಸಗಳೂ, ಗುಣಗ್ರಹಣ ಪಾರೀಣಳಾದ ಆ ರಜಪೂತ ನಾರೀಮಣಿಗೆ ಪರಮಾಶ್ಚರ್ಯವನ್ನುಂಟುಮಾಡಿದುವು. ಆತನ ಧೀರ ಉದಾರ ಭಾವಗಳನ್ನು ಮೆಚ್ಚಿಕೊಂಡ ಆ ವೀರ ನಾರೀರತ್ನವು, ಆತನು ವಿಸ್ತಾರವಾದ ಈ ಸಾಮ್ರಾಜ್ಯಕ್ಕೆ ಏಕಮಾತ್ರ ಪ್ರಭುವಾಗಿರಲು ಯೋಗ್ಯನೆಂದು ಮನಸಾ ಶ್ಲಾಘಿಸಿಕೊಂಡಳು ಈ ವಿಚಾರಗಳಿಂದ ಕೆಲ ನಿಮಿಷಕಾಲ ಸುಮ್ಮನಿದ್ದು ತರುವಾಯ, ತನ್ನ ವೃತ್ತಾಂತವನ್ನೆಲ್ಲ ಮುಚ್ಚುಮರೆಯಿಲ್ಲದೆ ಹೇಳಿಕೊಂಡು- 'ನನ್ನ ಪ್ರಾಣಗಳಮೇಲೆ ಆಸೆಯಿಟ್ಟುಕೊಳ್ಳದೆ, ನಿಮ್ಮ ಪ್ರಾಣಹರಣಮಾಡುವ ಅಂತರ್ಯೋದ್ದೇಶದಿಂದ ನಾನಿಲ್ಲಿಗೆ ಬಂದೆನು. ಆದರೆ ದೈವೇಚ್ಛೆ ಪ್ರಬಲವಾದುದು. ನನ್ನ ಉದ್ದೇಶವು ಸಫಲವಾಗಲಿಲ್ಲ. ನನ್ನ ಮನದಿಚ್ಛೆಯು ಫಲಿಸಲಿಲ್ಲ. ಈ ಸ್ಥಿತಿಯಲ್ಲಿ ನಾನು ಪುನಃ ನಮ್ಮ ಸೈನ್ಯವನ್ನು ಪ್ರವೇಶಿಸಲಾರೆನು. ಆದುದರಿಂದ ನಿಮ್ಮ ಸೇವಕರಲ್ಲಿ ಯಾವನಿಂದಲಾದರೂ, ನನ್ನ ಈ ಕತ್ತನ್ನು ಕತ್ತರಿಸಿ ಈ ಕ್ಷುದ್ರಜನ್ಮವನ್ನು ಅಂತ್ಯಗೊಳಿಸಿರಿ. ಇದೇ ನನ್ನ ಇಚ್ಛೆ' ಎಂದಳು. ಆ ಮಾತುಗಳಿಗೆ ಅಕ್ಬರನು ಪರಮಾಶ್ಚರ್ಯಪಟ್ಟು, ಆಕೆಯನ್ನು ಕುರಿತು- 'ನೀನು ಯಾವ ಉದ್ದೇಶದಿಂದ ಇಲ್ಲಿಗೆ ಬಂದಿದ್ದರೂ, ನನ್ನ ಸೇವಕರು ಒಬ್ಬ ಅಬಲೆಯಮೇಲೆ ತಮ್ಮ ಶಸ್ತ್ರನೈಪುಣ್ಯವನ್ನು ತೋರಿಸಿ, ಹೆಂಗಸಿನ ಕೊಲೆಗೆಲಸಕ್ಕೆ ಕೈಹಾಕರು. ನಾನು ಇಲ್ಲಿಗೆ ಸ್ತ್ರೀಯೊಂದಿಗೆ ಯುದ್ಧಮಾಡಲು ಬಂದವನಲ್ಲ.' ಎಂದು ನುಡಿದು, ಒಡನೆ ಆಕೆಯ ಪ್ರತ್ಯುತ್ತರಕ್ಕಾಗಿ ಕಾದಿರದೆ ತನ್ನ ಮುಖ್ಯ ಸೈನಿಕರನ್ನು ಕರೆದು, ಆಕೆಯ ಬೆಂಗಾವಲಿಗಾಗಿ ಅವರನ್ನು ನಿಯ

ವಿುಸಿ, ಆಕೆಯು ಪತಿಯಾದ ಜಗಮಲ್ ಮಹಾರಾಜನ ಬಳಿಗೆ ಕಳುಹಿಸಿಬಿಟ್ಟನು.

ಹೀಗೆ ಭಗ್ನಮನೋರಥಳಾಗಿ ಹಿಂದಿರುಗಿ ಬಂದರೂ, ರಾಣೀ ರಾಮಾಬಾಯಿಯು ಧೈರ್ಯವನ್ನು ಬಿಡದೆ—'ಪ್ರಾಣೇಶ್ವರಾ, ದೈವವು ಅವರಿಗೆ ಬಲೀಯವಾಗಿರುವಂತೆ ತೋರುತ್ತದೆ. ಹಾಗಿಲ್ಲದಿದ್ದರೆ, ನನ್ನ ಪ್ರಯತ್ನದಲ್ಲಿ ಬಾದಷಹನು ಈವರೆಗೇ ಮೃತನಾಗಿದ್ದಿರಬೇಕು. ಆದರೇನಾಯಿತು? ನಾವು ದೀನತೆಯಿಂದ, ಈ ತುಚ್ಛರನ್ನು ಪ್ರಾಣದಾನ ಬೇಡಿಕೊಂಡು ಬದುಕಬೇಕಾದುದಿಲ್ಲ. ಪ್ರಾಣಾವಸಾನಪರ್ಯಂತವೂ, ಧೈರ್ಯಗುಂದದೆ ವೈರಿಗಳೊಂದಿಗೆ ಹೊಡೆದಾಡಿ ವೀರಸ್ವರ್ಗವನ್ನು ಸಾಧಿಸಿಕೊಳ್ಳಬೇಕಲ್ಲದೆ, ಹೇಡಿತನದಿಂದ ಬದುಕಕೂಡದು' ಎಂದು ನುಡಿದಳು. ತನ್ನ ಪತ್ನಿಯಾಡಿದ ಆ ವೀರೋಚಿತ ಭಾಷಣವನ್ನು ಕೇಳಿ ಜಗಮಲ್ ರಾಜನು, ಪರಮ ಸಂತೋಷದಿಂದ-ಆಕೆಯ ಸಲಹೆಗೆ ಸಮ್ಮತಿಸಿ, ಯುದ್ಧಕಾರ್ಯವನ್ನು ಇನ್ನೂ ಹೆಚ್ಚುಶ್ರದ್ಧೆ ಉತ್ಸಾಹಗಳಿಂದ ಗಮನಿಸುತ್ತಿದ್ದನು.

ಹೀಗಿರುವಲ್ಲಿ ಒಂದುದಿನ ಒಂದು ಪ್ರಮಾದವು ನಡೆದುಹೋಯಿತು. ಆ ದಿನ ಸಂಧ್ಯಾಕಾಲದಲ್ಲಿ, ಅಕ್ಬರನ ಸೇನೆಯ ಕೆಲಮಂದಿ ಸಿಪಾಯಿಗಳು, ಏಣಿಗಳನ್ನೂ ನೂಲೇಣಿಗಳನ್ನೂ ಉಪಯೋಗಿಸಿ ಕೋಟೆಯ ಬುರುಜುಗಳನ್ನು ಹತ್ತಲು ಯತ್ನಿಸುತ್ತಿರುವುದನ್ನು ಕಂಡು ಮಹಾರಾಜನು ತನ್ನ ಸೈನಿಕರ ಮೂಲಕ ಬಾಣವರ್ಷಗಳನ್ನು ಸುರಿಸಿ, ಅವರನ್ನು ಆ ಪ್ರಯತ್ನದಿಂದ ನಿವಾರಿಸಿ ಅಟ್ಟಿದನು. ಮತ್ತು ಶತ್ರುಗಳಿಂದ, ಮತ್ತೆ ಏನು ಪ್ರಯತ್ನವು ನಡೆದೀತೋ ಎಂದು ಶಂಕೆಗೊಂಡು, ಅಲ್ಲೇ ಬುರುಜುಗಳಮೇಲಿದ್ದ ರಕ್ಷಣಾ ಸೈನ್ಯದ ಬಲವನ್ನೂ ಪರೀಕ್ಷಿಸುತ್ತಾ ಸುತ್ತಾಡುತ್ತಿದ್ದನು. ಆ ದಿನ ರಾಣೀ ರಾಮಾಬಾಯಿಯೂ ತನ್ನ ಪತಿಯೊಂದಿಗೆ ತಮ್ಮ ಸೈನ್ಯದ ಬಲಾಬಲಗಳನ್ನೂ ಶತ್ರು ಸೈನ್ಯದ ಬಲಾಬಲಗಳನ್ನೂ ಕುರಿತು ಚರ್ಚಿಸುತ್ತಾ, ಜೊತೆಯಲ್ಲೇ ತಿರುಗಾಡುತ್ತಿದ್ದಳು. ಅಷ್ಟರಲ್ಲಿ ಶತ್ರುಸೈನ್ಯದಿಂದ ಅಕಸ್ಮಾತ್ತಾಗಿ ಒಂದು ಕ್ರೂರ ಬಾಣವು ಬಂದು ಜಗಮಲ್ ಮಹಾರಾಜನ ಎದೆಯಲ್ಲಿ ದೂರಿಹೋಯಿತು. ವಿಷಸವರಿಸಿದ ಮೊನೆಯಿಂದಕೂಡಿ ತಗಲಿದೊಡನೆಯೇ ಪ್ರಾಣಾಪಹಾರಕವಾಗಿದ್ದ ಆ ಬಾಣದ ಹತಿಯಿಂದ

ನೊಂದು ಮಹಾರಾಜನು ಉತ್ತರಕ್ಷಣದಲ್ಲೇ ಗತಪ್ರಾಣನಾದನು. ಹೀಗೆ ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಅಕಸ್ಮಾತ್ತಾಗಿ ಜರುಗಿಹೋದ ಈ ಪ್ರಮಾದವನ್ನು ಕಂಡು ಸಮೀಪದಲ್ಲೇ ಇದ್ದ ರಾಣಿಯು ಆತನನ್ನು ಬೀಳದಂತೆ ಹಿಡಿದುಕೊಂಡು ತನ್ನ ತೊಡೆಯಮೇಲೆ ಮಲಗಿಸಿಕೊಂಡು, ಬಾಣವನ್ನು ಕಿತ್ತು ಯೋಗ್ಯಚಿಕಿತ್ಸೆ ಮಾಡಿಸಬೇಕೆಂದು ವೈದ್ಯರನ್ನು ಕರೆಸಿಕೊಂಡು ಪರೀಕ್ಷಿಸಲಾಗಿ, ಮಹಾರಾಜನ ಪ್ರಾಣವಾಯುವು ದೇಹದಿಂದ ಹೊರಟು ಹೋಗಿದೆಯೆಂಬ ಸಂಗತಿಯು ನಿಶ್ಚಯವಾಯಿತು. ಮಹಾರಾಣಿಯ ಆಗಿನ ಸ್ಥಿತಿಯನ್ನು ವರ್ಣಿಸಲು ಯಾರಿಂದ ಸಾಧ್ಯ! ರಾಜಧಾನಿಯು ಶತ್ರುಸೈನ್ಯದಿಂದ ಸುತ್ತಲ್ಪಟ್ಟು ದಿಕ್ಕುಕಾಣದೆ ಇದೆ. ಮಹಾರಾಜನು ಮೃತನಾಗಿದ್ದಾನೆ. ಈ ಸ್ಥಿತಿಯಲ್ಲಿ ಏನುಮಾಡಿ, ಮಾನಹಾನಿಯಾಗದಂತೆ ಆ ಕಷ್ಟದಿಂದ ಪಾರಾಗಬಹುದೆಂಬ ಯೋಚನೆಯು ಮನಸ್ಸನ್ನು ಆವರಿಸಿತು. ಸೈನ್ಯಾಧಿಕಾರಿಯೂ, ಮಂತ್ರಿ ಮುಂತಾದ ರಾಜ್ಯದ ಅಧಿಕಾರಿಗಳೂ ಸರದಾರರೂ ಬಂದು ನೆರೆದು, ಮಹಾರಾಣಿಯವರಿಗೆ ವಂದಿಸಿ, ರಾಜ್ಯದ ಗೌರವ ರಕ್ಷಣೆಗಾಗಿ, ತಮ್ಮತಮ್ಮ ಪ್ರಾಣಗಳನ್ನು ಬಲಿಯಾಗಿ ಕೊಡಲು ಸಿದ್ಧರಾಗಿದ್ದೇವೆಂದು ತಮ್ಮ ಆಯುಧಗಳನ್ನು ಮುಟ್ಟಿ ಪ್ರಮಾಣಮಾಡಿ ಭಾಷೆಯಿತ್ತರು.

ಮಹಾರಾಣಿ ರಾಮಾಬಾಯಿಯು, ತನ್ನ ಹೃದಯವನ್ನು ದಹಿಸುತ್ತಿದ್ದ ಪತಿ ಮರಣದುಃಖವನ್ನು ನುಂಗಿಕೊಂಡು, ಮೇಲಕ್ಕೆದ್ದು ಮಹಾರಾಜನ ಕಳೇಬರಕ್ಕೆ ವಿಧ್ಯುಕ್ತವಾಗಿ ನಡೆಯಬೇಕಾದ ಉತ್ತರ ಕ್ರಿಯಾದಿ ಕಾರ್ಯಗಳು ನಡೆಯಲೆಂದು ಆಜ್ಞೆಯಿತ್ತು, ತರುವಾಯ ರಜಪೂತಸೈನ್ಯವು ಬುರಜುಗಳಮೇಲಿನಿಂದ ಶತ್ರುಸೈನ್ಯದಮೇಲೆ ಅಗ್ನಿವರ್ಷವನ್ನು ಸುರಿಸಲೆಂದು ಅಜ್ಞಾಪಿಸಿದಳು. ಒಡನೆ ಕೇಳುವುದೇನು? ರೋಷದಿಂದ ತಮ್ಮ ಮಹಾರಾಜನನ್ನು ವಧಿಸಿದ ತುರುಷ್ಕ ಸೈನ್ಯದಮೇಲೆ ಮಹಾರೋಷಗೊಂಡು ರಜಪೂತಸೈನಿಕರು, ಕಂಡಕಂಡಲ್ಲಿ ಸಾಧ್ಯವಿದ್ದ ಪರಿಯಿಂದಲೆಲ್ಲ ಅವರನ್ನು ಹಿಂಸಿಸಿ ಕೊಲ್ಲತೊಡಗಿದರು. ಮಹಾರಾಜನು ಮೃತನಾದ ವೃತ್ತಾಂತವು ಶತ್ರುಸೈನ್ಯಕ್ಕೆ ತಲುಪಿ, ಅವರು ಪರಮಾನಂದದಿಂದ ಯಾವ ಕ್ಷಣಕ್ಕೆ ಕೋಟೆಯನ್ನು ಲಗ್ಗೆ ಹತ್ತೇವೋ ಎಂದು ಆತುರಗೊಳ್ಳತೊಡಗಿದರು.—

ಹೀಗೆ ಬುರಜುಗಳಮೇಲಿದ್ದು ಶತ್ರುನಾಶನ ಮಾಡುತ್ತಿದ್ದ ಕಾರ್ಯವು ಒಂದೆಡೆಯಲ್ಲಿ ಅವ್ಯಾಹತವಾಗಿ ನಡೆಯುತ್ತಿರಲು ಮತ್ತೊಂದು ಪಾರ್ಶ್ವದ ಕೋಟೆಯ ಮಹಾದ್ವಾರವನ್ನು ತೆರೆದುಕೊಂಡು, ಒಂದು ರಜಪೂತಸೈನ್ಯವು ಹೊರಕ್ಕೆ ಹೊರಟಿತು. ಆಗ ರೋಷಭೀಷಣರಾಗಿ ಹೊರಟ ಆ ಸೈನಿಕರ ಲಕ್ಷಣವನ್ನು ನೋಡಿದರೆ, ಅವರು ಪುನಃ ಹಿಂದಕ್ಕೆ ಬರಬೇಕೆಂಬ ಆಸೆಯಿಲ್ಲದೆ ರಣೋತ್ಸಾಹದಿಂದ ಸಾಧ್ಯವಿದ್ದಷ್ಟುಮಂದಿ ಶತ್ರುಗಳನ್ನು ಕೊಂದು, ತಾವೂ ಪ್ರಾಣಗಳನ್ನು ಬಲಿದಾನವಾಗಿ ಅರ್ಪಿಸಬೇಕೆಂದು ಕೃತಸಂಕಲ್ಪರಾಗಿ ಹೊರಟಂತೆ ಕಂಡುಬರುತ್ತಿದ್ದಿತು. ಕಣ್ಣುಗಳಲ್ಲಿ ಅಗ್ನಿಕಣಗಳನ್ನು ಉದುರಿಸುವವರಂತೆ ವೀರಾವೇಶಪರರಾಗಿ, ಶತ್ರುಸೈನ್ಯದೊಳಕ್ಕೆ ನುಗ್ಗಿ, ಒಬ್ಬೊಬ್ಬನೂ ಹತ್ತುಹತ್ತು ಮಂದಿಯಂತೆ ಮೊಗಲಸೈನಿಕರನ್ನು ವಧಿಸುತ್ತಾ, ಈಗ ಕಂಡ ಸ್ಥಳದಲ್ಲಿ ಇನ್ನೊಂದು, ಕ್ಷಣಕ್ಕೆ ಯಿಲ್ಲದೆ, ವ್ಯೈತಿಶಿಯದೆ, ರೌದ್ರಾವೇಶಗೊಂಡವರಂತೆ ಯುದ್ಧಮಾಡುತ್ತಿದ್ದರು. ಅಂದಿನ ರಜಪೂತಸೈನ್ಯದ ರಣೋತ್ಸಾಹವನ್ನು ನೋಡಲಾಗಿ, ಮೊಗಲ ಸೈನ್ಯವು ನಿಶ್ಶೇಷವಾಗಿ ಹತವಾಗತಕ್ಕುದೇ ಎನ್ನಲು ಏನೂ ಸಂದೇಹವಿರಲಿಲ್ಲ. ಆ ಸೈನ್ಯದಲ್ಲಿ, ಎಲ್ಲರಿಗಿಂತಲೂ ಮುಂದಾಗಿ ಕುದುರೆಯೇರಿ, ಖಡ್ಗಪಾಣಿಯಾಗಿ ಹೋಗುತ್ತಿದ್ದ ಒಂದು ವ್ಯಕ್ತಿಯ ಶೌರ್ಯವೂ ಭೀಷಣ ನರಹತ್ಯಾಕಾರ್ಯವೂ ಎಲ್ಲರ ಶೌರ್ಯಪ್ರತಾಪಗಳನ್ನೂ ಮೀರಿಸಿತು. ಅಪೂರ್ವ ಕ್ಷಾತ್ರತೇಜದಿಂದ ಮುಂದುವರಿದು ಹೋಗುತ್ತಿದ್ದ ಆ ಸರದಾರನು ಮತ್ತಾರೂ, ಅಲ್ಲ. ಪತಿಯ ಮರಣದಿಂದ ರೋಸಿ, ಜೀವದಮೇಲಿನ ಆಸೆಯನ್ನು ನೀಗಿ, ಶತ್ರುಸೈನ್ಯವನ್ನು ನೂರಣಹೋಮದಲ್ಲಿ ಬಲಿಯಾಗಿಸಲು ಆತುರಗೊಳ್ಳುತ್ತಿದ್ದ ಮಹಾರಾಣಿ ರಾಮಾಬಾಯಿಯೇ! ತನ್ನ ಪತಿಯ ಪ್ರಾಣಕ್ಕೆ ಪ್ರತಿಯಾಗಿ ಬಾದಷಹಾನ ಪ್ರಾಣಗಳನ್ನು ತೆಗೆದುಕೊಳ್ಳದಿದ್ದರೆ ತನ್ನ ಜನ್ಮವು ನಿರರ್ಥಕವೆಂದುಕೊಂಡು ತ್ರಿಪುರಮರ್ದಿನಿಯೋ ಎಂಬಂತೆ ರೋಷಭೀಷಣಳಾಗಿ ಮುಂದುವರಿಯುತ್ತಾ ಎದುರಾದ ಹುಲುಸೈನಿಕರನ್ನು ತನ್ನ ಕೈಖಡ್ಗದಿಂದ ಯಮಸದನಕ್ಕೆ ನೂಕುತ್ತಾ, ರಕ್ತಾಭಿಷಿಕ್ತಳಾಗಿ ಬಹುಶೀಘ್ರಗತಿಯಿಂದ ಪ್ರಯಾಣಮಾಡಿದ್ದಳು. ಚಕ್ರವರ್ತಿಯಿದ್ದ ಬಿಡಾರದ ಬಾಗಿಲನ್ನು ಸೇರುವವೇಳೆಗೆ, ಮಹಾರಾಣಿಯ ದೇಹವಾದ್ಯಂತವೂ ರಕ್ತ

ಧಾರೆಯಿಂದ ಸಂಪೂರ್ಣವಾಗಿ ತೋಯ್ದುಹೋಗಿದ್ದಿತು. ಆವರೆಗೆ ಆಕೆಗೆ ಎದುರಾಗಿ ಹತರಾದ ನೂರಾರುಮಂದಿ ಹುಲುಸೈನಿಕರ ವಧಾಕಾರ್ಯದಿಂದ ಆಕೆಯ ದೇಹಶಕ್ತಿಯೂ ಸ್ವಲ್ಪಮಟ್ಟಿಗೆ ಕುಂದಿ, ಆಯಾಸತೋರಿದ್ದಿತು. ರಕ್ತಸ್ನಾತಳಾಗಿ ಭೈರವಮೂರ್ತಿಯಂತೆ ಬರುತ್ತಿದ್ದ ಆಕೆಗೆ ಎದುರಾಗಲು ಅಂಜಿ, ಅಕ್ಬರ್‌ಬಾದಷಹಾನ ಅಂಗರಕ್ಷಕಸೈನ್ಯದವರು, ಆಕೆಯ ಹಿಂದಿನಿಂದ ಬಂದು ಬೀಸುಹಗ್ಗವನ್ನು ಹಾಕಿ, ಆಕೆಯನ್ನು ಹಿಡಿದು ಬಾದಷಹಾನಬಳಿಗೆ ಕರೆತಂದರು. ಆಕೆಯ ಶೌರ್ಯಸಾಹಸ ಕಾರ್ಯಗಳನ್ನು ತನ್ನ ಸೈನಿಕರಿಂದ ಕೇಳಿಯೂ, ರಕ್ತಧಾರೆಯಿಂದ ಅಭಿಷಿಕ್ತಳಾಗಿದ್ದ ಆ ಖಡ್ಗಧಾರಿಮೂರ್ತಿಯನ್ನು ಪ್ರತ್ಯಕ್ಷನೋಡಿಯೂ, ಪರಮಾಶ್ಚರ್ಯಗೊಂಡ ಅಕ್ಬರನು, ಅಂತಹ ಶೂರನಾರೀಮಣಿಯನ್ನು ಕಾಣುವುದು ದುರ್ಲಭವೆಂದು ಯೋಚಿಸಿ ತನ್ನ ಸಮೀಪವರ್ತಿಗಳಾದ ಪರಿಚಾರಕಿಯರನ್ನು ಕರೆದು ಆಕೆಯ ಗಾಯಗಳನ್ನೆಲ್ಲ ತೊಳೆದು ಸ್ನಾನಮಾಡಿಸಿ, ಶುಭ್ರವಸ್ತ್ರಗಳನ್ನು ಕೊಟ್ಟು ಗಾಯಗಳಿಗೆ ಔಷಧಗಳನ್ನುಹಾಕಿ ಉಪಚರಿಸಿರೆಂದು ಆಜ್ಞಾಪಿಸಿದನು.



## ಅಧ್ಯಾಯ ೩ "ಸಂಧಿಯೋ-ಸಮರವೋ?"

ಶತ್ರುವಿನ ಬಿಡಾರದಲ್ಲಿ ಹೀಗೆ ಕೆಲವು ದಿನಗಳವರೆಗೆ ಔಷಧೋಪಚಾರಗಳು ನಡೆದ ತರುವಾಯ, ಮಹಾರಾಣಿಯ ಗಾಯಗಳೆಲ್ಲ ಮಾಯ್ದು ಆಕೆಗೆ ಪೂರ್ವದ ಬಲವು ಪ್ರಾಪ್ತವಾಯಿತು. ಆಗಲಾಕೆಯು ಒಂದಾನೊಂದುದಿನ, ತಾನು ಬಾದಷಹಾನನ್ನು ನೋಡಲು ಇಚ್ಛೆಗೊಂಡಿರುವೆನೆಂದು ತಿಳಿಯಪಡಿಸಲು, ಸೇವಕರು ಆ ಸಂಗತಿಯನ್ನು ಅಕ್ಬರನಿಗೆ ಅರಿಕೆ ಮಾಡಿದರು. ಅಕ್ಬರನು ಅದಕ್ಕೆ ಒಪ್ಪಿ ಆಕೆಗೆ ದರ್ಶನ ಕೊಡಲು ತಕ್ಕ ಸ್ಥಾನದಲ್ಲಿ ಕುಳಿತು, ಆಕೆಯನ್ನು ಕರೆತರುವಂತೆ, ಪರಿಚಾರಿಕೆಯರಿಗೆ ಆಜ್ಞಾಪಿಸಿದನು.

ಅಕ್ಬರ್ ಬಾದಷಹಾನ ಎದುರಿಗೆ, ಸೇವಕರಿಂದ ಕರೆತರಲ್ಪಟ್ಟ ರಾಣೀ ರಾಮಾಬಾಯಿಯು ಲೇಶಮಾತ್ರವೂ ಭಯವೆಂಬುದಿಲ್ಲದೆ, ಸ್ಪಷ್ಟ

ವಾಕ್ಯಗಳಿಂದ -' ಬಾದಷಹರೇ, ನಾನು ನಿಮ್ಮ ಪ್ರಾಣಹರಣ ಮಾಡಬೇಕೆಂದು ಎರಡುಸಾರಿ ಪ್ರಯತ್ನಿಸಿದೆ. ಆದರೆ ಈಶ್ವರೇಚ್ಛೆಯು ಅನ್ಯಥಾ ಇದ್ದುದರಿಂದ ನನ್ನ ಪ್ರಯತ್ನಗಳೆಲ್ಲವೂ ನಿರರ್ಥಕವಾದುವು. ನನ್ನ ಪ್ರಾಣಗಳಿದ್ದಲ್ಲಿ ಎಂದಿಗಾದರೂ ನನ್ನ ಪತಿಯನ್ನು ಕೊಂದ ಫಲವನ್ನು ತೀರಿಸಿಕೊಳ್ಳುದಿರೆನು. ಆದುದರಿಂದ ಈಗ ನಿಮ್ಮ ಕೈಗೆ ಸಿಕ್ಕಿರುವುದರಿಂದ, ಈಗಲೇ ನನ್ನನ್ನು ತೀರಿಸಿಬಿಡಿರಿ. ಇಷ್ಟು ಬಗೆಯಿಂದ ನಿಮ್ಮ ಪ್ರಾಣಹರಣ ಮಾಡಲೆತ್ನಿಸಿದ ನಾನು ಕ್ಷಮಾಪಾತ್ರಳಾಗಲಾರೆನು. ಅಲ್ಲದೆ ಮರಣಕ್ಕಾಗಿ ನನಗೆ ಲೇಶಮಾತ್ರವೂ ಭೀತಿಯಿಲ್ಲ. ಪತಿವಿರಹಿತಳಾದ ನನಗೆ ಈ ಲೋಕದಲ್ಲಿ ಸಾಧಿಸಬೇಕಾದ ಪುರುಷಾರ್ಥವೇನೂ ಇಲ್ಲ. ನನ್ನ ಪ್ರಿಯಭರ್ತನ ಸಮೀಪವನ್ನು ಸೇರಲು ನನ್ನ ಪ್ರಾಣಗಳು ಕಾತರಗೊಳ್ಳುತ್ತಿವೆ. ಮನಸ್ಸು ಸಮಾಧಾನವಿಲ್ಲದೆ ಒದೆದಾಡುತ್ತಿದೆ. ತಮ್ಮಲ್ಲಿ ನನ್ನ ಪ್ರಾರ್ಥನೆಯೊಂದೇ! ತಮ್ಮ ಸೇವಕರಲ್ಲಿ ಯಾವನಾದರೊಬ್ಬನಿಗೆ ನನ್ನನ್ನು ಶೀಘ್ರವಾಗಿ ಯಮಸದನಕ್ಕೆ ಕಳುಹಿಸುವಂತೆ ಆಜ್ಞಾಪಿಸಿರಿ ' ಎಂದು ವಿಜ್ಞಾಪಿಸಿಕೊಂಡಳು.

ಎಂತಹ ಧೀರೋದಾತ್ತ ಪುರುಷರಿಗೂ ಎದೆ ನಡುಗುವಂತಹ ಪ್ರಸಂಗದಲ್ಲಿ, ಲೇಶಮಾತ್ರವೂ ಶಂಕೆಗೊಳ್ಳದೆ, ತಪ್ಪದೆ ತಡವರಿಸದೆ ಧೈರ್ಯದಿಂದ ಅಷ್ಟು ಮಾತುಗಳನ್ನು ಹೇಳಿ ನಿಂತ ಆಕೆಯನ್ನು ಕುರಿತು ಗುಣಗ್ರಹಣಶೀಲನಾದ ಅಕ್ಬರನು— ' ಓ ಶೂರ ನಾರೀರತ್ನವೇ, ಇಷ್ಟುಮಟ್ಟಿನ ಪತಿಪ್ರೇಮವುಳ್ಳ, ಶೌರ್ಯಸಾಹಸಗಳನ್ನುಳ್ಳ ನಿನ್ನಮೇಲೆ ನನ್ನ ಶಸ್ತ್ರವು ನಡೆಯಲಾರದು. ನಾನು ಶೂರಪುರುಷರೊಂದಿಗೆ ಯುದ್ಧಮಾಡುವ ಶೀಲವುಳ್ಳವನಲ್ಲದೆ, ಸ್ತ್ರೀಯರಿಗೆ ಒಂದು ಮುಳ್ಳುತಗುಲಿದರೂ ನೋಡಿ ಸಹಿಸಲಾರೆನು. ನಿನ್ನ ಪತಿಯು ಮೃತನಾದುದಕ್ಕಾಗಿ ನನಗೆ ವಿಶೇಷ ವಿಷಾದವುಂಟಾಗಿದೆ. ನಿಮ್ಮನ್ನು ನಮಗೆ ಅಂಕಿತರನ್ನಾಗಿ ಮಾಡಿಕೊಳ್ಳಬೇಕೆಂಬುದು ನಮ್ಮ ಅಪೇಕ್ಷೆಯಲ್ಲದೆ, ನಿಮ್ಮ ಪ್ರಾಣಹರಣ ಮಾಡಬೇಕೆಂಬುದಲ್ಲ. ನಿಮ್ಮಂತಹ ಶೂರರಾದ ಸಾಮಂತರನ್ನಿಟ್ಟುಕೊಂಡು ರಾಜ್ಯಾಧಿಪತ್ಯಮಾಡತಕ್ಕುದೇ ನಮ್ಮ ಮುಖ್ಯೋದ್ದೇಶವಲ್ಲದೆ, ಶೂರರನ್ನು ವಧಿಸಿ ಹೇಡಿಗಳಿಗೆ ರಾಜ್ಯನ್ನಿರಿಸಿಕೊಂಡು ಆಳಬೇಕೆಂಬುದಲ್ಲ. ನಡೆದುಹೋದ ಕಾರ್ಯವನ್ನು ಕುರಿತು ಈಗ ಚಿಂತಿಸಿ ಫಲವಿಲ್ಲ. ಈಗಲಾದರೂ ಸರಿ, ನೀವು ನಮಗೆ

ಅಧೀನರಾಗಿರಲು ಸಮ್ಮತಿಸುವಿರಾದರೆ,' ಈ ಯುದ್ಧಕಾರ್ಯವನ್ನು ಇಲ್ಲಿಗೇ ಸಮಾಪ್ತಗೊಳಿಸಿ, ನಿಮ್ಮ ದೇಶವಾಸಿಗಳಿಗೆ ಅಭಯಪ್ರದಾನಮಾಡವೆನು' ಎಂದು ನುಡಿದನು.

ಆ ನುಡಿಗಳು ಕಿವಿಗೆ ಬಿದ್ದೊಡನೆಯೇ ಆ ವೀರನಾರಿಯು ತನ್ನ ದೃಷ್ಟಿಯನ್ನು ಮೇಲಕ್ಕೆತ್ತಿ - ನಟ್ಟದೃಷ್ಟಿಯಿಂದ ಅಕ್ಬರನನ್ನು ನೋಡುತ್ತಾ—'ಲಾಲಿಸಬೇಕು, ಚಿತ್ತೂರಿನಲ್ಲಿ ಕ್ಷತ್ರಿಯರಿರುವವರೆಗೂ ಈ ರಾಜ್ಯವು ನಿಮ್ಮ ಸ್ವಾಧೀನಕ್ಕೆ ಸಿಕ್ಕಲಾರದು. ಕ್ಷತ್ರಿಯರ ದೇಹಗಳಲ್ಲಿ ಪ್ರಾಣವಾಯುವಿರುವವರೆಗೂ ಅವರು ನಿಮ್ಮೊಂದಿಗೆ ಯುದ್ಧಮಾಡುವರಲ್ಲದೆ, ಎಂದಿಗೂ ನಿಮಗೆ ಶರಣುಬಿದ್ದು ಬದುಕಲು ಇಚ್ಛಿಸರು. ಇವರೆಲ್ಲರೂ ನಿಹತರಾದಮೇಲೆ. ನೀವು ಚಿತ್ತೂರನ್ನು ನಿಮ್ಮ ಇಷ್ಟಬಂದಂತೆ ಮಾಡಿಕೊಳ್ಳಬಹುದು'' ಎಂದು ನುಡಿದಳು. ಆ ಮಾತುಗಳನ್ನು ಕೇಳಿ ಅಕ್ಬರನು-'ಎಲೌ ವೀರನಾರಿಯೇ, ನೀವೆಂಥರು ದುಷ್ಟರೆಂದು ನಮ್ಮನ್ನು ನಿಂದಿಸುವುದು ನಿಮಗೊಂದು ಪಾಠವಾಗಿದೆ. ಆದರೆ ನಮ ನಿಮಗೆ ಇರುವ ಭೇದವನ್ನು ಹೇಳುವೆನು ಕೇಳು. ನೀನು ನನ್ನನ್ನು ಕೊಲ್ಲಬೇಕೆಂದು ಅನೇಕಸಾರಿ ಪ್ರಯತ್ನಿಸಿದೆ. ಈಗಲೂ ನನ್ನನ್ನು ಕೊಲ್ಲಬೇಕೆಂದೇ ಕೃತನಿಶ್ಚಿತಳಾಗಿದ್ದೀಯೆ! ನಾನು ನಿಮ್ಮ ಹಿತಕ್ಕಾಗಿ ಹೇಳುವ ಮಾತುಗಳು ನಿಮಗೆ ಪಥ್ಯವಾಗಿ ತೋರುವುದಿಲ್ಲ ನೀನು ಇಷ್ಟುಸಾರಿ ನನ್ನ ಕೈಗೆ ಸಿಕ್ಕಿಬಿದ್ದೆಯಾದರೂ ನಾನು ಶಿಕ್ಷಿಸದೆ ಬಿಟ್ಟಿದ್ದೇನೆ. ಇದರಿಂದಲೇ ನಿಮ್ಮ ಕ್ರೂರತ್ವವೂ ನಮ್ಮ ಸಾಧುತ್ವವೂ ಸ್ಪಷ್ಟವಾಗುವುದಿಲ್ಲವೆ?' ಎಂದು ನುಡಿದು ಸುಮ್ಮನಾದನು.

ಅಕ್ಬರನು ನುಡಿದ ಮಾತುಗಳಿಗೆ ಪ್ರತ್ಯುತ್ತರವಾಗಿ ಏನೋ ಹೇಳಬೇಕೆಂದು ರಾಣೀ ರಾಮಾಬಾಯಿಯು ಪ್ರಯತ್ನಿಸುತ್ತಿದ್ದಳು. ಆದರೆ ಅಷ್ಟರಲ್ಲಿ ಅಕ್ಬರನು, ಮುಂದೆ ಆಕೆಯ ಮಾತುಗಳಿಗೆ ಅವಕಾಶಕೊಡದಂತೆ ತನ್ನ ಸೇವಕರನ್ನು ಕರೆದು, ಆಕೆಯನ್ನು ಪಾಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ತಕ್ಕ ಮೇಲ್ಗಾವಲಿನಿಂದ ಕರೆದೊಯ್ದು ಕೋಟೆಯೊಳಗೆ ಬಿಟ್ಟುಬನ್ನಿರೆಂದು ಆಜ್ಞಾಪಿಸಿದನು. ರಾಮಾಬಾಯಿಯು ಹೀಗೆ ತನ್ನ ಪ್ರಯತ್ನಗಳೆಲ್ಲವೂ ನಿರರ್ಥಕವಾಗುತ್ತಿದ್ದುದನ್ನು ಕುರಿತು ವಿಶೇಷ ಚಿಂತಾಕ್ರಾಂತಳಾದಳು.

ಸಾಲದುದಕ್ಕೆ, ತಮ್ಮ ಶತ್ರುವಿನಿಂದ ಆದ ಸ್ವಜಾತಿನಿಂದನೆಯನ್ನು ಕೇಳಿ, ಆಕೆಯ ಕಣ್ಣುಗಳಲ್ಲಿ ನೀರು ಸುರಿಯಿತು. ರೋಷವು ಜ್ವಾಲೆಯಾಗಿ ದೇಹವೆಲ್ಲವೂ ಕಂಪಾಯಮಾನವಾಗಿ, ಬಾಯಿಂದ ಮಾತುಗಳು ಹೊರಡದಂತೆ, ಗದ್ಗದಧ್ವನಿಯಿಂದ, ತನ್ನ ಮನಸ್ಸಿನಲ್ಲಿದ್ದ ಸಂಕಟವನ್ನು ಹೇಳಿಕೊಳ್ಳಲು ಬಾಯಿಬಾರದೆ, ಏನುಮಾಡಬೇಕೆಂಬುದು ತೋರದೆ, ಪಂಜರದಲ್ಲಿನ ಸಿಂಹಿಯಂತೆ ಬುಸುಗುಟ್ಟುತ್ತಾ, ಕೋಟೆಯ ಸಮೀಪವನ್ನು ಸೇರಿ, ಮಹಾದ್ವಾರದ ಬಳಿಯಲ್ಲಿಳಿದು, ತನ್ನ ಮಕ್ಕಳ ಸಮೀಪವನ್ನು ಸೇರಿದಳು. ತರುವಾಯ ಸುಮ್ಮನಿರಲು ಮನಸ್ಸೊಪ್ಪದೆ, ಆಕೆಯು ಕೋಟೆಯೊಳಗಿದ್ದ ರಾಜಪುತ್ರರನ್ನೆಲ್ಲ ಕರೆಯಿಸಿ ಒಂದೆಡೆ ಸಭೆ ನೆರೆಯಿಸಿ, ಅವರನ್ನು ಕುರಿತು ಉಚ್ಚಸ್ವರದಿಂದ ಹೇಳ ತೊಡಗಿದಳು. –' ಎಲೈ ಕ್ಷತ್ರಿಯವೀರರೇ, ಈವರೆಗೆ ನಮ್ಮ ಸಂಸ್ಥಾನವನ್ನು ಕಾಪಾಡುವುದಕ್ಕಾಗಿ ನೀವು ಸಿಂಹಗಳಂತೆ ಹೋರಾಡಿದಿರಿ. ನಿಮ್ಮ ಬಾಂಧವರಲ್ಲನೇಕರು ಯುದ್ಧದಲ್ಲಿ ಮೃತರಾಗಿ - ಕೀರ್ತಿಶರೀರಿಗಳಾದರು. ಇಷ್ಟು ಮಾಡಿದರೂ ನಾವು ಗೆಲ್ಲುವೆವೆಂಬ ಆಸೆಯು ಲೇಶಮಾತ್ರವೂ ತೋರುವುದಿಲ್ಲ ಮ್ಲೇಂಛರು ಇನ್ನು ಬಹು ಸ್ವಲ್ಪಕಾಲದಲ್ಲೇ ಕೋಟೆಯೊಳಕ್ಕೆ ಪ್ರವೇಶಿಸಬಹುದೆಂಬುದಕ್ಕೆ ಏನೂ ಸಂದೇಹವಿಲ್ಲ. ಆದುದರಿಂದ ಇನ್ನು ಪ್ರಾಣಗಳಮೇಲೆ ಆಸೆಯನ್ನಿಟ್ಟುಕೊಳ್ಳದೆ, ನಿಮ್ಮ ಶೌರ್ಯಸಾಹಸಗಳನ್ನೆಲ್ಲ ತೋರಿಸಿ, ವೀರಜಯವನ್ನು ಹೊಂದಲು ಸರ್ವರೂ ಸಿದ್ಧರಾಗಬೇಕು. ಇದೇ ವೀರ ಕ್ಷತ್ರಿಯ ಧರ್ಮವು ಈ ಕ್ಷಾತ್ರಧರ್ಮ ರಕ್ಷಣೆಗಾಗಿಯೇ ಹಿಂದೆ ನಮ್ಮ ಪೂರ್ವಿಕರೆಲ್ಲರೂ ತಮ್ಮ ಹೃದಯರಕ್ತವನ್ನು ಬಸಿದು ನಮ್ಮ ದೇಶದ ಚರಿತ್ರಾಕಾಶದಲ್ಲಿ ನಕ್ಷತ್ರಗಳಂತೆ ದೇದೀಪ್ಯಮಾನರಾಗಿ ಹೊಳೆಯುತ್ತಿದ್ದಾರೆ. ಅವರ ಸಂತಾನರಾದ ನಾವು, ಅವರ ಪದ ಚಿನ್ಹೆಗಳನ್ನು ಅನುಸರಿಸಿ ನಡೆಯುವುದೇ ನಮ್ಮ ಧರ್ಮವಲ್ಲವೆ? ಈ ವಿಷಯದಲ್ಲಿ ನಿಮ್ಮ ನಿಶ್ಚಯಮನೋಭಿಪ್ರಾಯವನ್ನು ತಿಳಿಯಲು ಆಸೆಗೊಂಡಿರುವೆನು ' ಎಂದು ನುಡಿದು ಸುಮ್ಮನಾದಳು.

ವೀರ ಪುರುಷೋಚಿತವಾದ ಆ ಭಾಷಣವು ಕೇವಲ ಸ್ತ್ರೀಮಾತ್ರಳಾದ ತಮ್ಮ ಮಹಾರಾಣಿಯ ಬಾಯಿಂದ ಬಂದುದನ್ನು ಕೇಳಿ, ಚಿತ್ತೂರು ಸಂಸ್ಥಾನದ ಸರದಾರರೆಲ್ಲರೂ, ತಮ್ಮ ರಾಜ್ಯದ ಗೌರವ ರಕ್ಷಣೆಗಾಗಿ ತಮ್ಮ

ಪ್ರಾಣಗಳನ್ನರ್ಪಿಸಲು ಹಿಂದೆಗೆಯದೆ ಶತ್ರುಸೈನ್ಯದೊಂದಿಗೆ ಯುದ್ಧಮಾಡಿ ವ ಡಿಯುವುದೇ ನಿಶ್ಚಯವೆಂದು ಸ್ಥಿರಸಂಕಲ್ಪ ಮಾಡಿದರು. ತಮ್ಮ ಜನ್ಮದಲ್ಲಿ ಅದೇ ತಾವು ಮಾಡುವ ಕೊನೆಯ ಯುದ್ಧವೆಂದೂ, ತಮ್ಮ ಮಾತೃಭೂಮಿಯ ಸ್ವಾತಂತ್ರ್ಯರಕ್ಷಣೆಗಾಗಿ ಮರಣಪ್ರಾಪ್ತವಾಗುವ ಪರ್ಯಂತವೂ ಒಬ್ಬೊಬ್ಬನೂ ಹಿಂದುಳಿಯದಂತೆ ವೀರಕ್ಷತ್ರಿಯೋಚಿತವಾಗಿ, ಆ ಯುದ್ಧರಂಗದಲ್ಲಿ ಕಾದತಕ್ಕುದೇ ಧರ್ಮವೆಂದೂ ತಮ್ಮ ಆತ್ಮಸಾಕ್ಷಿಯಾಗಿ ಆಣೆಭಾಷೆಗಳನ್ನಿಟ್ಟುಕೊಂಡರು. ಆದರೆ ಅವರಲ್ಲೊಬ್ಬ ಸರದಾರನು ಮೇಲಕ್ಕೆದ್ದು -' ತಾಯೇ ನನ್ನದೊಂದು ಮನವಿಯಿದೆ. ಅದನ್ನು ದಯವಿಟ್ಟು ಲಾಲಿಸಬೇಕು. ನಾವೀಗ ಪ್ರಾಣಾಂತ್ಯದವರೆಗೂ ಯುದ್ಧ ಮಾಡುವುದರಿಂದ ನಮ್ಮ ಮಾತೃಭೂಮಿಯ ಸ್ವಾತಂತ್ರ್ಯವು ರಕ್ಷಣೆಯಾಗಿ ನಮ್ಮ ದೇಶವು ನಮ್ಮ ಸಂತಾನದವರಿಗಾದರೂ ಪ್ರಾಪ್ತಿಸುವುದೆಂಬ ನಂಬಿಕೆಯಿದ್ದರೆ, ಆ ಪವಿತ್ರಕಾರ್ಯಕ್ಕಾಗಿ ನಮ್ಮ ಪ್ರಾಣಗಳನ್ನು ಮೀಸಲಾಗಿ ಅರ್ಪಿಸಿದರೂ ಚಿಂತೆಯಿಲ್ಲವೆನ್ನಬಹುದು. ಆದರೆ ಈಗ ತೋರುತ್ತಿರುವ ಪರಿಸ್ಥಿತಿಯಲ್ಲಿ ಶತ್ರುಸೈನ್ಯದ ಬಲವು ನಮಗಿಂತಲೂ ಹತ್ತರಷ್ಟಿರುವಾಗ ನಮಗೆ ಜಯವೆಂಬುವ ಆಸೆಯು ಸ್ವಪ್ನದಲ್ಲೂ ಲಭ್ಯವಾಗದೆಂದು ನಿಶ್ಚಯವಾಗಿದೆ. ಹೀಗಿರುವಲ್ಲಿ ವೃಥಾ ಯುದ್ಧಕ್ಕೆ ನಡೆದು ನೂರಾರು-ಸಹಸ್ರಾರು ಪ್ರಾಣಗಳನ್ನು ವ್ಯರ್ಥವಾಗಿ ಆಹುತಿಕೊಡುವುದಕ್ಕಿಂತಲೂ, ಬಾದಷಹಾನೊಂದಿಗೆ ಗೌರವಕ್ಕೆ ಚ್ಯುತಿಯಿಲ್ಲದಂತೆ ಯಾವುದಾದರೊಂದು ಬಗೆಯಿಂದ ಸಂಧಿಮಾಡಿಕೊಂಡು ರಾಜ್ಯವನ್ನು ರಕ್ಷಿಸಿಕೊಳ್ಳುವುದು ಮೇಲಲ್ಲವೆ? ಎಂದು ನನ್ನ ಬುದ್ಧಿಗೆ ತೋರುತ್ತದೆ. ಮಹಾ ರಾಣಿಯವರು ಉಚಿತಾನುಚಿತಗಳನ್ನು ಯೋಚಿಸಬೇಕು ' ಎಂದು ವಿಜ್ಞಾಪಿಸಿದನು.

ಜನ್ಮಭೂಮಿಯ ಸ್ವಾತಂತ್ರ್ಯರಕ್ಷಣೆಗಾಗಿ ಪ್ರಾಣಗಳನ್ನರ್ಪಿಸಲು ಸಿದ್ಧರಾಗಿದ್ದ ಆ ಸಭೆಯಲ್ಲಿ, ಶಸ್ತ್ರಧಾರಿಯಾಗಿದ್ದ ಕ್ಷತ್ರಿಯನೊಬ್ಬನು ಸಂಧಿಗಾಗಿ ಪ್ರಸ್ತಾಪವೆತ್ತಿದುದೇ ಕಳಂಕಿತವೆಂದು ಭಾವಿಸಿದ್ದ ರಾಣೀ ರಾಮಾಬಾಯಿಯು. ಆ ಮಾತುಗಳು ಕಿವಿಗೆ ಬೀಳುತ್ತಿರುವಾಗ ಕ್ರೋಧವು ಉಕ್ಕುತ್ತಿರಲು, ಕಣ್ಣುಗಳಿಂದ ದಹಿಸುವಂತೆ ಆ ಸರದಾರನನ್ನು ನೋಡುತ್ತಾ -' ಅಯ್ಯಾ, ಯುದ್ಧರಂಗದಲ್ಲಿ ಎದುರಾಗದಿದ್ದಾಗ್ಯ, ಮೋಸದಿಂದ

ನಿಮ್ಮ ಮಹಾರಾಜನನ್ನು ಕೊರಳು ಕೊಯ್ದ ದುಷ್ಟ ಶತ್ರುವಿನೊಂದಿಗೆ ಸಂಧಿಮಾಡಿಕೊಳ್ಳಬೇಕೆಂದು ಹೇಳಲು ನಿನಗೆ ನಾಲಿಗೆ ಹೇಗಾಡಿತು? ನನ್ನ ಪ್ರಾಣವಲ್ಲಭನನ್ನು ಕೊಂದು ನನ್ನ ಮಾಂಗಲ್ಯಸೂತ್ರ ಹರಣಮಾಡಿ, ನಮ್ಮ ಜನ್ಮಸ್ಥಳದ ಸ್ವಾತಂತ್ರ್ಯಾಪಹರಣಮಾಡುವುದನ್ನೇ ಮುಖ್ಯ ಸಂಕಲ್ಪವನ್ನಾಗಿ ಉಳ್ಳ ಆ ನೀಚ ಮ್ಲೇಂಛರೊಂದಿಗೆ ಸಂಧಿ ಮಾಡಿಕೊಂಡು ಮಾನಹೀನರಾಗಿ ಬದುಕುವುದಕ್ಕಿಂತ ಅಗ್ನಿಕುಂಡದಲ್ಲಿ ಧುಮುಕಿಯಾಗಲೀ, ವಿಷಪ್ರಾಶನ ಮಾಡಿಯಾಗಲೀ ಪ್ರಾಣಬಿಡುವುದು ಮೇಲಲ್ಲವೆ? ಮಾನದ ಮೇಲೆ ಲೇಶಮಾತ್ರವಾದರೂ ದೃಷ್ಟಿಯಿರುವ ತೇಜಸ್ವಿ ಕ್ಷತ್ರಿಯರು ಮಾಡುವ ಯೋಚನೆಯೇ ಇದು? ಎಲೋ, ಸಂಧಿ ಮಾಡಿಕೊಳ್ಳಬೇಕೆಂದು ನೀನೀಗ ಹೇಳುವ ಮಾತನ್ನೇ ನಿಮ್ಮ ಶತ್ರುವು ಮಹಾರಾಜರು ಬದುಕಿದ್ದಾಗಲೇ ಪ್ರಸ್ತಾಪಿಸಿರಲಿಲ್ಲವೆ? ಅದಕ್ಕೆ ಸ್ವಾಭಿಮಾನಶೀಲರಾದ ಅವರು ಕೊಟ್ಟ ಪ್ರತ್ಯುತ್ತರವೇನೆಂಬುದನ್ನು ಮರೆತೆಯಾ? ನಮ್ಮ ರಾಜ್ಯದ ಗೌರವವನ್ನು ಮರೆತು, ಕ್ಷಾತ್ರಧರ್ಮವನ್ನು ನೀಗಿ, ಜೀವಗಳ್ಳರಾಗಿ ಬದುಕುವ ಆ ಬಾಳಿಗಿಂತಲೂ ನಾಯಿಬಾಳು ಮೇಲಲ್ಲವೆ? ಛೀ ಇಂತಹ ಸಂದರ್ಭದಲ್ಲಿ ನಿನ್ನ ನಾಲಿಗೆಯು ಇಂತಹ ನುಡಿಯನ್ನು ನುಡಿಯಲು ಹೇಗೆ ಶಕ್ತವಾಯಿತು? ನಿನ್ನ ಮುಖವನ್ನು ನಾನು ನೋಡಲಾರೆನು! ಆಚೆಗೆ ತೊಲಗಿಹೋಗು!' ಎಂದು ನುಡಿದುಬಿಟ್ಟಳು. ತಮ್ಮ ಶೂರ ರಾಣಿಯ ಕ್ಷಾತ್ರತೇಜಸ್ಪ್ರದರ್ಶಕವಾದ ಆ ನುಡಿಯು ಅಲ್ಲಿದ್ದ ಸರ್ದಾರರಿಗೂ ರಣೋತ್ಸಾಹವನ್ನು ಉಂಟುಮಾಡುವುದರೊಂದಿಗೆ ಸಂಧಿ ಪ್ರಸ್ತಾಪವನ್ನೆತ್ತಿದ್ದ ಆ ಸರದಾರನ ವಿಷಯದಲ್ಲಿ ಹೇಯಭಾವವನ್ನೂ ಹುಟ್ಟಿಸಿತು. ಎಲ್ಲರೂ ಅವನನ್ನು ಹೀಯಾಳಿಸತೊಡಗಿದರು. ಅವನು ಎಲ್ಲರ ತಿರಸ್ಕಾರ ದೃಷ್ಟಿಗೂ ಪಾತ್ರನಾಗಿ, ತಲೆತಗ್ಗಿಸಿಕೊಂಡು ಆ ಸಭೆಯಿಂದ ತೊಲಗಿಹೋದನು.

ತರುವಾಯ ಆ ವೀರರಾಣಿಯು ಮಿಕ್ಕ ಸರದಾರರನ್ನೆಲ್ಲ ಉದ್ದೇಶಿಸಿ- 'ಎಲೈ ವೀರಕ್ಷತ್ರಿಯ ಕುಲೋತ್ಪನ್ನರೇ, ನೀವೆಲ್ಲರೂ ಪವಿತ್ರವಾದ ಕ್ಷಾತ್ರಧರ್ಮವನ್ನು ಅರಿತವರು. ಶತ್ರುವಾದವನು ಎಷ್ಟು ಒಳ್ಳೆಯವನಾದರೂ, ನಮ್ಮ ಸ್ವಾತಂತ್ರ್ಯವನ್ನು ಅಪಹರಿಸುವುದಕ್ಕಾಗಿ ಅವನು ಬಂದಾಗ, ನಾವು ಅವನೊಂದಿಗೆ ಯುದ್ಧಮಾಡತಕ್ಕುದೇ ಧರ್ಮವಲ್ಲವೆ? ಸಂಧಿಗಾಗಿ ಪ್ರಯ

ತ್ತಿಸಕೂಡದು. ಕ್ಷತ್ರಿಯನಿಗೆ ಯುದ್ಧದಲ್ಲಿ ಪ್ರಾಣಬಿಡುವುದೆಂಬುದು ವಿವಾಹದಲ್ಲಿ ವಧುವನ್ನು ಪಾಣಿಗ್ರಹಣಮಾಡುವಷ್ಟೇ ಪವಿತ್ರವಾದ ಕಾರ್ಯವೆನ್ನುವುದರಲ್ಲಿ ಸಂದೇಹವಿಲ್ಲ. ಸಂಧಿಮಾಡಿಕೊಂಡು ಬದುಕುವುದು ಸಾವಿಗೆ ಸಮಾನವಾದುದಲ್ಲದೆ, ಅದು ಮಾನವಂತ ಬಾಳ್ವೆಯಲ್ಲ—ಆದುದರಿಂದ ಉತ್ತಮ ಕ್ಷತ್ರಿಯರಾದ ನೀವು ಎಂತಹ ಮರಣವನ್ನು ಅಪೇಕ್ಷಿಸುವಿರೋ ಅದನ್ನು ನೀವೇ ನಿರ್ಧರಿಸಬೇಕಲ್ಲದೆ, ನಾನು ಪ್ರತ್ಯೇಕ ಹೇಳಬೇಕಾಗಿಲ್ಲ'' ಎಂದು ನುಡಿದಳು.

ವೀರಕ್ಷಾತ್ರಧರ್ಮಪ್ರದರ್ಶಕವಾದ ಆ ಮಾತುಗಳು ತಮ್ಮ ಮಹಾರಾಣಿಯ ವದನದಿಂದ ಬರುತ್ತಿದ್ದುದನ್ನು ಕೇಳಿದ ಅಲ್ಲಿ ನೆರೆದಿದ್ದ ಸರದಾರರೆಲ್ಲರೂ, ಸೈನಿಕರೆಲ್ಲರೂ, ಏಕಮುಖದಿಂದ- 'ರಾಣೀಸಾಹೇಬ, ತಾವು ಖಿನ್ನರಾಗಕೂಡದು. ನಾವೆಲ್ಲರೂ ನಮ್ಮ ರಾಜಮನೆತನದ ಗೌರವಸಂರಕ್ಷಣೆಗಾಗಿಯೂ, ಪತಿಮರಣದಿಂದ ಮನನೊಂದಿರುವ ತಮ್ಮ ಮಾನಸಂರಕ್ಷಣೆಗಾಗಿಯೂ ನಮ್ಮ ವೀರಮಾತೆಯ ಸ್ವಾತಂತ್ರ್ಯರಕ್ಷಣೆಗಾಗಿಯೂ ನಮ್ಮ ಪ್ರಾಣಗಳಲ್ಲಿ ಆಸೆಯನ್ನಿಡದೆ ಯುದ್ಧದಲ್ಲಿ ಹೋರಾಡಿ, ನಮ್ಮನ್ನು ಹೊತ್ತು ಸಲಹಿದ ಈ ಭೂದೇವಿಗೆ ರಕ್ತಸ್ನಾನವನ್ನು ಮಾಡಿಸಿ, ನಮ್ಮ ಶಿರಸ್ಸುಗಳನ್ನು ಕಾಣಿಕೆಯಾಗಿ ಅರ್ಪಿಸುವೆವು.'' ಎಂದು ಗರ್ಜಿಸಿ ಪ್ರತ್ಯುತ್ತರವಿತ್ತು- ಸಿಂಹನಾದಮಾಡಿದರು. ಹೀಗೆ ಸಂಧಿಯೋ ಸಮರವೋ ಎಂದು ಸಂದೇಹದಲ್ಲಿದ್ದ ಪ್ರಶ್ನೆಯೊಂದು ಇತ್ಯರ್ಥವಾದುದು ಮಹಾರಾಣಿಯ ಮನಸ್ಸಿಗೆ ಅತ್ಯಂತ ಸಮಾಧಾನವನ್ನುಂಟುಮಾಡಿತು. ಒಡನೆ ಆ ವೀರರಾಣಿಯು ಅವರೆಲ್ಲರಿಗೂ ಯುದ್ಧಕ್ಕೆ ವೀಳೆಯವನ್ನಿತ್ತು ಪ್ರೋತ್ಸಾಹವಚನಗಳಿಂದ ಹುರಿದುಂಬಿಸಿ ಕಳುಹಿಸಿದಳು.



## ಅಧ್ಯಾಯ ೪ "ಅಗ್ನಿಕುಂಡಾಭಿಮುಖರಾಗಿ''

ರಾಜ್ಯಕ್ಕೆ ರಕ್ಷಕರಾಗಿದ್ದ ಆಯುಧಪಾಣಿಗಳಾದ ವೀರ ದಂಡಾಳುಗಳನ್ನು ಹಾಗೆ ಮೃತ್ಯುವಮುಖಕ್ಕೆ ಕಳುಹಿಸಿದ ತರುವಾಯ, ಮಹಾರಾಣಿಯು

ಅರಮನೆಯ ಅಂತಃಪುರವನ್ನು ಪ್ರವೇಶಿಸಿ, ಮುಂದೆಮಾಡತಕ್ಕ ಕಾರ್ಯ ಗೌರವಗಳನ್ನು ಕುರಿತು ಯೋಚಿಸತೊಡಗಿದಳು. ಭಟರೆಲ್ಲರೂ ಹಾಗೆ ಹತರಾದ ತರುವಾಯ, ರೇಗಿಸಲ್ಪಟ್ಟ ಶತ್ರುದಳದವರು ನೇರವಾಗಿ ಕೋಟೆಯೊಳಕ್ಕೆ ನುಗ್ಗಿ, ನಿಸ್ಸಹಾಯಕರಾಗಿರುವ ಸ್ತ್ರೀಜನರ ಮಾನಭಂಗಮಾಡುವರೆಂಬುದೂ, ಆ ಊರನ್ನು ಕೊಳ್ಳೆಹೊಡೆಯುವರೆಂಬುದೂ ಆಕೆಗೆ ಕಣ್ಣಿಗೆ ಕಟ್ಟಿದಂತೆ ಹೊಳೆದುವು. ಆ ಸಂದರ್ಭದಲ್ಲಿ ಸ್ತ್ರೀಜನರು, ತುರುಷ್ಕಸೈನಿಕರ ಕೈಗೆಬೀಳದಂತೆ ಏನುಮಾಡಬೇಕೆಂಬ ಚಿಂತೆಯು ಆಕೆಯನ್ನು ಹೆಚ್ಚಾಗಿ ಬಾಧಿಸಿತು. ತನ್ನ ಇಬ್ಬರು ಹೆಣ್ಣುಮಕ್ಕಳ ಮಾನಸಂರಕ್ಷಣೆಯೂ ಆಕೆಯ ಮನಸ್ಸನ್ನು ಹೆಚ್ಚಾಗಿ ಬಾಧಿಸತೊಡಗಿತು ಅವರಲ್ಲಿ ಹಿರಿಯ ಮಗಳ ವಯಸ್ಸು ಹದಿನೇಳು. ಚಿಕ್ಕಮಗಳ ವಯಸ್ಸು ಹದಿನೈದು. ಯೌವನಾವಿರ್ಭಾವದಿಂದ ರತಿದೇವಿಯರಂತೆ ಕಂಗೊಳಿಸುತ್ತಿದ್ದ ಆ ಸುಕುಮಾರಿಯರನ್ನು ದುಷ್ಟರಕೈಗೆ ಬೀಳದಂತೆ ರಕ್ಷಿಸತಕ್ಕುದು ಹೇಗೆ ಅಥವ ತನ್ನೊಂದಿಗೆ ಅವರನ್ನೂ ಅಗ್ನಿನಾರಾಯಣನಿಗೆ ಆಹುತಿಯಾಗಿಸಿಬಿಡುವುದೆ ಎಂದು ಬಹುಹೊತ್ತು ಯೋಚಿಸಿದಳು. ಉದ್ಯಾನದಲ್ಲಿನ ಪುಷ್ಪಲತೆಗಳಂತೆ ಪ್ರೇಮದಿಂದ ಬೆಳೆಸಿದ ಆ ಮುದ್ದುಕುವರಿಯರನ್ನು ಅಗ್ನಿಕುಂಡಕ್ಕೆ ತಳ್ಳುವುದು ಹೇಗೆ ಎಂಬ ಮೋಹವೂ ಆಕೆಯ ಮನಸ್ಸನ್ನು ಬಾಧಿಸದಿರಲಿಲ್ಲ. ಈ ಪ್ರಶ್ನೆಯನ್ನು ಏನೂ ಅರಿಯದ ಆ ನಿರ್ದೋಷಿ ಮಕ್ಕಳ ಎದುರಿಗೆ ಇಡುವುದು ಹೇಗೆ ಎಂದೂ ಆಕೆಯು ಶಂಕಿಸುತ್ತಿದ್ದಳು. ಆ ವೇಳೆಗೆ ಆ ಕನ್ಯೆಯರಿಬ್ಬರೂ ತಮ್ಮ ತಾಯಿಯನ್ನು ನೋಡಲಿಕ್ಕೆಂದು ಆಕೆಯಿದ್ದೆಡೆಗೆ ಬಂದರು. ಒಡನೆ ರಾಣಿಯು ಅವರಿಬ್ಬರನ್ನೂ ತನ್ನ ಆಚೀಚೆಯ ಪಕ್ಕಗಳಲ್ಲಿ ಕುಳ್ಳಿರಿಸಿಕೊಂಡು, ಪ್ರೇಮದಿಂದ ಆಲಂಗಿಸಿ, ಶಿರಸ್ಸುಗಳನ್ನು ಆಘ್ರಾಣಿಸಿ,—«ಅಮ್ಮಾಯ್ಯ್, ಸುಕುಮಾರಿಯರಾದ ನಿಮಗೆ ಒಂದು ವಿಷಾದಕರವೃತ್ತಾಂತವನ್ನು ನಾನೀಗ ಹೇಳಬೇಕಾಗಿ ಬಂದುದಕ್ಕಾಗಿ ಬಹು ಸಂಕಟವೆನ್ನಿಸುತ್ತದೆ. ಆದರೂ ಹೇಳದಿದ್ದರೆ ಏಧಿಯಿಲ್ಲ. ಕೇಳಿರಿ. ನಾವೆಷ್ಟು ಪ್ರಯತ್ನಪಟ್ಟರೂ, ದುರ್ಭಾಗ್ಯವಶವಾಗಿ ಅವೆಲ್ಲವೂ ನಿರರ್ಥಕವಾಗಿ, ನಮಗೆ ಜಯಪ್ರಾಪ್ತಿಯಾಗದೆ ನಾವೀಗ ತುರುಷ್ಕರ ಕೈಯ್ಯಲ್ಲಿ ಬೀಳಬೇಕಾಗಿಬಂದಿದೆ. ಆದುದರಿಂದ ನಾವೆಲ್ಲರೂ ಅಗ್ನಿದೇವನನ್ನಾಶ್ರಯಿಸಿ, ಅಪವಿತ್ರರಾದ ತುರು

ಮ್ಲೇಚ್ಛಸೈನಿಕರ ಕೈಗೆಸಿಕ್ಕದೆ ಶಾಶ್ವತ ಸುಖಪ್ರದವಾದ ಸ್ವರ್ಗಲೋಕವನ್ನು ಹೊಂದತಕ್ಕುದೇ ಯುಕ್ತವೆಂದು ನಿಶ್ಚಯಿಸಿದ್ದೇವೆ. ಆದುದರಿಂದ ನೀವು ಈ ಪರಿಸ್ಥಿತಿಯಲ್ಲಿ, ಅನೇಕ ದುಃಖಸಂಕಟ ಅವಮಾನ ಮನೋವ್ಯಥೆಗಳನ್ನು ಅನುಭವಿಸುತ್ತಾ ಈ ಲೋಕದಲ್ಲೇ ಇರಲು ಇಚ್ಛಿಸುವಿರೋ ಅಥವ ಪತಿವ್ರತೆಯರಿಗೆ ಯೋಗ್ಯಸ್ಥಾನವಾದ ಪರಮಪದವನ್ನು ಸೇರಲು ಇಚ್ಛಿಸುವಿರೋ ಶೀಘ್ರವಾಗಿ ತಿಳಿಸಿ'' ಎಂದಳು.

ತಾಯಿಯಾಡಿದ ಆ ಮಾತನ್ನು ಕೇಳಿ, ಆ ಪುತ್ರಿಯರಿಬ್ಬರೂ, ತಮ್ಮ ಮುಖಭಾವದಿಂದ ಆಕೆಯನ್ನು ಅನುಸರಿಸಿ ನಡೆವ ಸಮ್ಮತಿಯನ್ನು ಸೂಚಿಸುತ್ತಿರಲು- ಅವರಲ್ಲಿ ಹಿರಿಯಾಳಾದ ಚಂದ್ರಾವತಿಯು- 'ಅಮ್ಮಾ ಈ ಸಂದರ್ಭದಲ್ಲಿ ನಮ್ಮ ಸಮ್ಮತಿಯನ್ನು ಕೇಳಬೇಕಾದುದು ಆವಶ್ಯಕವೆಂದು ಎಣಿಸಿದೆಯಾ? ನಾವು ರಾಜಕನ್ನಿಕೆಯರಾಗಿ ಪ್ರಾಣಗಳನ್ನು ಔತಟ್ಟುಕೊಂಡು ಜೀವಿಸಲಿಚ್ಛಿಸುವುದನ್ನು ಒಪ್ಪಬಲ್ಲೆವೇ? ಇಂತಹ ದುರಂತಸ್ಥಿತಿಯಲ್ಲಿ ಬದುಕಿದ್ದು, ಕ್ರೂರರೂ ನಿಷ್ಠುರಿಗಳೂ ಆದ ತುರುಕಸೈನಿಕರ ಕೈಗೆಬಿದ್ದು ಮಾನಭಂಗಪಡುವುದು ನಮಗೆಂತು ಇಷ್ಟವಾಗಬಲ್ಲುದು? ನಮ್ಮ ಪೂರ್ವಿಕರೆಲ್ಲರೂ ಇಂತಹ ಸಂಕಟ ಸಮಯದಲ್ಲಿ ಅನುಸರಿಸಿದ ಮಾನಸಂರಕ್ಷಕ ಉಪಾಯವನ್ನೇ ನಾವೂ ಅನುಸರಿಸಿ, ನಮ್ಮ ವಂಶಗೌರವವನ್ನು ಕಾಪಾಡಲು ಸಿದ್ಧರಾಗಿದ್ದೇವೆ' ಎಂದು ಪ್ರತ್ಯುತ್ತರಕೊಟ್ಟಳು. ತನ್ನ ಮಗಳ ಆ ಧೀರವಚನಗಳು ರಾಣೀ ರಾಮಾಬಾಯಿಗೆ ಪರಮಾನಂದವನ್ನುಂಟುಮಾಡಲು, ಅವರಿಬ್ಬರನ್ನೂ ಪ್ರೀತಿಪೂರ್ವಕವಾಗಿ ಅಪ್ಪಿಕೊಂಡು, ಅಂತಹ ಸದ್ಗುಣವತಿಯರು ಈ ಲೋಕದಲ್ಲಿ ಜೀವಂತರಾಗಿ ಇದ್ದರಾದರೆ ಎಂತಹ ಮಹತ್ಕಾರ್ಯಗಳನ್ನು ಮಾಡಿರಬಹುದೋ ಎಂಬ ಯೋಚನೆ ಬರಲು, ಕಣ್ಣುಗಳಲ್ಲಿ ಅನಪೇಕ್ಷಿತವಾಗಿ ನೀರು ಬಂದು ಕೆನ್ನೆಗಳಮೇಲೆ ಹರಿಯಿತು ಅಕಸ್ಮಾತ್ತಾಗಿ ಅಂತಹ ದುಸ್ಥಿತಿಯೊದಗಿದುದನ್ನು ಕಂಡು ಆ ತಾಯಿ ಮಕ್ಕಳು ಒಂದಾಗಿ ಸ್ವಲ್ಪಕಾಲ ದುಃಖಿಸಿದರು. ಕಣ್ಣೀರು ಧಾರಾಕಾರವಾಗಿ ಸುರಿದು, ಆರ್ತನಾದದಿಂದ ಅರಮನೆಯ ಆ ಭವ್ಯಸೌಧವು ಕಂಪಿತವಾದಂತೆ ತೋರಿತು. ಮುಂದೆ ಸ್ವಲ್ಪಹೊತ್ತಿನೊಳಗಾಗಿ, ರಾಮಾಬಾಯಿಯು ತನ್ನ ಮನಶ್ಚಾಂಚಲ್ಯವು ತನ್ನ ಪ್ರಜಾಪರಿವಾರಗಳಮೇಲೆ ಬಹು ಕೆಟ್ಟ ಪರಿಣಾಮವನ್ನುಂಟು

ಮಾಡಬಹುದೆಂದು ಯೋಚಿಸಿ ಜಾಗ್ರತಳಾಗಿ, ತನ್ನ ದುಃಖವನ್ನು ನುಂಗಿಕೊಂಡು ಧೈರ್ಯವನ್ನವಲಂಬಿಸಿ, ತನ್ನ ಮಕ್ಕಳಿಗೂ ಧೈರ್ಯಹೇಳಿ ಸಮಾಧಾನ ಮಾಡಿದಳು. ತರುವಾಯ, ಅವರನ್ನು ಜೊತೆಗೆ ಕರೆದುಕೊಂಡು, ರಾಜಪೂತ ಸರದಾರರೂ ಸೈನಿಕರೂ ಯುದ್ಧಸನ್ನದ್ಧರಾಗುತ್ತಿದ್ದ ಸ್ಥಳಕ್ಕೆ ನಡೆದು, ಅವರಲ್ಲಿ ಪ್ರತಿಯೊಬ್ಬನಿಗೂ ಧೈರ್ಯೋತ್ಸಾಹಗಳುಂಟಾಗುವಂತೆ ಮಾತನಾಡಿ, –' ನಾಳಿನ ಪ್ರಾತಃಕಾಲ, ನೀವೆಲ್ಲರೂ ಪ್ರಾಣತ್ಯಾಗಮಾಡಲು ನಿಶ್ಚಿತಮನಸ್ಕರಾಗಿ ಶತ್ರುಸೇನೆಯೊಂದಿಗೆ ಶ್ರದ್ಧಾಪೂರ್ವಕ ಯುದ್ಧಮಾಡಿ ಮುಕ್ತಿಪಡೆಯಿರಿ ' ಎಂದು ಆಶೀರ್ವಾದವನ್ನಿತ್ತು, ಅಲ್ಲಿಂದ ಅವರ ಭಾರ್ಯೆಯರಿದ್ದ ಸ್ಥಳಕ್ಕಾಗಿ ಹೊರಟಳು.

ತಮ್ಮ ಮಹಾರಾಣಿಯು ಪಾದಚಾರಿಣಿಯಾಗಿ ಬೀದಿಯಲ್ಲಿಬರುತ್ತಿದ್ದ ಅಪೂರ್ವ ದೃಶ್ಯವನ್ನು ನೋಡಲು ರಜಪೂತ ಸ್ತ್ರೀಯರೆಲ್ಲರೂ ಗುಂಪು ಗುಂಪಾಗಿ ಹೊರಕ್ಕೆ ಬಂದು ಆಕೆಗೆ ಶಿರಬಾಗಿ ನಮಸ್ಕರಿಸಿ, ಆ ಮಹಾ ತಾಯಿಯು ನೊಂದ ಹೃದಯದಿಂದ ಏನು ಆಜ್ಞಾಪಿಸುವಳೋ ಎಂದು ಎದುರುನೋಡಿಕೊಂಡಿದ್ದರು. ಗಳಿಗೆ ಗಳಿಗೆಗೆ ಸ್ತ್ರೀಜನ ಸಮೂಹವು ನೂರಾರು-ಸಹಸ್ರಾರು ಸಂಖ್ಯೆಯಿಂದ ನೆರೆಯಿತು. ಹಾಗೆ ತನ್ನ ರಾಜಧಾನೀ ನಿವಾಸಿಗಳಾದ ಕ್ಷತ್ರಿಯನಾರಿಯರೆಲ್ಲರೂ ನೆರೆದರೆಂದು ತೋರುವವರೆಗೂ ಮಹಾರಾಣಿಯು ಅತಿಶಯ ಯೋಚನಾ ಮಗ್ನಳಾಗಿ ಅಲ್ಲೇ ನಿಂತಿದ್ದು, ಹಾಗೆ ಎಲ್ಲರೂ ಬಂದು ಸೇರಿದ ತರುವಾಯ, ಅವರನ್ನು ಕುರಿತು –'ಆರ್ಯ ನಾರೀಮಣಿಯರೇ! ಈ ದಿವಸ ನಿಮಗೊಂದು ದುರಂತ ವಿಚಾರದಲ್ಲಿ ಸಂದೇಶಕೊಡಲು ನಾನು ಇಲ್ಲಿಗೆ ಬಂದಿದ್ದೇನೆ. ಮೊಗಲರು ಅಪಾರ ಸೇನೆಯೊಂದಿಗೆ ಬಂದು ನಮ್ಮ ರಾಜಧಾನಿಯನ್ನು ಮುತ್ತಿ ಬಹುದಿನಗಳಿಂದಲೂ, ನಮ್ಮ ಚಲನವಲನಗಳಿಗೂ ಮಾರ್ಗವಿಲ್ಲದಂತೆ ವಿಘ್ನಪಡಿಸಿರುವ ವಿಚಾರವು ನಿಮಗೆ ತಿಳಿಯದುದಲ್ಲ. ಈ ನಗರ ರಕ್ಷಣಾ ಕಾರ್ಯದಲ್ಲಿ ತೊಡಗಿದ್ದ ಸಂದರ್ಭದಲ್ಲೇ ನಮ್ಮ ಮಹಾರಾಜರೂ ಮೃತ್ಯುವಶರಾದರು. ಪರಿಸ್ಥಿತಿಯು ದಿನದಿನಕ್ಕೆ ಗಭೀರವೆನ್ನಿಸುತ್ತಿದೆ. ನಾವು ಶರಣಾಗತರಾದರಲ್ಲದೆ, ಶತ್ರುರಾಜನು ಮುತ್ತಿಗೆಯನ್ನೆತ್ತುವಂತೆ ಇಲ್ಲ. ಕ್ಷಾತ್ರಧರ್ಮವನ್ನು ತ್ಯಜಿಸಿ, ಶತ್ರುವಿಗೆ ಶರಣಾಗತರಾಗಿ ಬಾಳುವ ಮೃತಜೀವಿಗಳೆಲ್ಲೂ, ಪ್ರಾಣಾತ್ಮೃವ

ರೆಗೂ ಹೋರಾಡಿ ದೈವದಲ್ಲಿದ್ದರೆ ಜಯಿಸಿ ಸ್ವಾತಂತ್ರ್ಯ ಸುಖವನ್ನು ಅನುಭ ವಿಸುವುದು. ಸತ್ತರೆ ವೀರಸ್ವರ್ಗವನ್ನು ಹೊಂದಿ ಕೀರ್ತಿ ಶರೀರದಿಂದ ಚಿರಾಯುಗಳಾಗಿರುವುದು. ಹೀಗೆಂದು! ಯೋಚಿಸಿ, ನಿಮ್ಮ ಪತಿಗಳೂ ಸೋ ದರರೂ ಆದ ವೀರಕ್ಷತ್ರಿಯ ಪುರುಷವರ್ಗವೆಲ್ಲವೂ ನಿಶ್ಚಯಿಸಿದ್ದಾರೆ. ಸಧ್ಯದಲ್ಲಿರುವ ಶತ್ರುಬಲವನ್ನೂ ನಮ್ಮ ಬಲವನ್ನೂ ನೋಡಿಕೊಂಡರೆ ಶತ್ರುಸೈನ್ಯವು ನಮ್ಮ ಸೈನ್ಯದ ಹತ್ತಿಪ್ಪತ್ತರಷ್ಟು ಪ್ರಬಲಪಿದೆ. ಆದುದ ರಿಂದ ಈ ಸಂದರ್ಭದಲ್ಲಿ ಶತ್ರುವನ್ನು ಕೆಣಕುವುದೆಂದರೆ ಮೃತ್ಯುವಿನ ಬಾಯಲ್ಲಿ ಬಿದ್ದಂತೆಯೇ! ಆದರೂ ನಾವದನ್ನು ನಿವಾರಿಸುವಂತಿಲ್ಲ. ಏಕೇ ದರೆ, ಶತ್ರುಗಳೇ ಕೋಟೆಯನ್ನೊಡೆದು ಒಳ ನುಗ್ಗಿದರೆಂದರೆ, ನಮ್ಮ ಮಾನ ಪ್ರಾಣಗಳೆಲ್ಲವೂ ಸೂರೆಯಾಗುವುದು ತಪ್ಪದು ಆದುದರಿಂದ ನಾವು ಈ ಸಂದರ್ಭದಲ್ಲಿ, ಪ್ರಾಣಲೋಭವನ್ನಿಡದೆ, ಮಾನವನ್ನು ಕಾಪಾಡಿಕೊಳ್ಳತ ಕ್ಕದು ಪರಮಕರ್ತವ್ಯವಾಗಿದೆ. ನಾಳಿನ ಪ್ರಾತಃಕಾಲ ನಿಮ್ಮ ಪುರುಷರೆ ಲ್ಲರೂ, ನಿಮ್ಮಿಂದ ಅನುಜ್ಞೆಪಡೆದು ಯುದ್ಧೋನ್ಮುಖರಾಗಿ ಹೊರಟೊಡ ನೆಯೇ, ನೀವುಗಳೆಲ್ಲರೂ ನಿಶ್ಚಲಮನಸ್ಕತೆಯಿಂದ-ನಿರ್ಮಲ ಹೃದಯದಿಂದ, ನಿಮ್ಮ ವೀರಕ್ಷತ್ರಿಯ ಧರ್ಮರಕ್ಷಣೆಗಾಗಿಯೂ ಪವಿತ್ರ ಆರ್ಯ ಸ್ತ್ರೀ ಧರ್ಮರ ಕ್ಷಣೆಗಾಗಿಯೂ ನಿಮ್ಮ ನಿಮ್ಮ ಚಿತೆಗಳನ್ನು ನೀವೇ ಸಿದ್ಧಗೊಳಿಸಿಕೊಂಡು, ಅದ ರಲ್ಲಿ ಪ್ರವೇಶಿಸಿ, ಪ್ರಾಣತ್ಯಾಗಮಾಡಲು ಸಿದ್ಧರಾಗತಕ್ಕದ್ದು. ಸಹಗಮನ ಅಥವ ಈಗ ನಾನು ಹೇಳಿದ ಜೋಹರು ಪದ್ಧತಿಯಿಂದ ಅಗ್ನಿಮುಖದಲ್ಲಿ ಪ್ರಾಣತ್ಯಾಗಮಾಡಿದ 'ಕ್ಷತ್ರಿಯ ನಾರೀಮಣಿಯು ಅರುಂಧತೀ ಸಮಾನ ಳಾಗಿ ಅನುಪಮವಾದ ಪತಿವ್ರತಾ ಲೋಕವನ್ನು ಹೊಂದಿ ದೇವತೆಗಳಿಂದ ಪೂಜಿತಳಾಗುವಳು ನಾಳೆಯ ಪ್ರಾತಃಕಾಲ ಯುದ್ಧಾನಂತರ, ತುರುಷ್ಕರು ನಮ್ಮ ನಗರಿಯನ್ನು ಪ್ರವೇಶಿಸುವ ವೇಳೆಗೆ ಅವರಿಗೆ ಎಲ್ಲಿ ನೋಡಿದರೂ, ಉರಿವ ಚಿತೆಗಳೂ, ಭಸ್ಮರಾಶಿಗಳೂ ಗೋಚರವಾಗಬೇಕಲ್ಲದೆ, ಮತ್ತಾವ ಶುಭಸೂಚಕ ಸಾಮಗ್ರಿಯೂ ಕಣ್ಣಿಗೆ ಬೀಳದಂತಿರಬೇಕು' ಎಂದು ನುಡಿ ದು ಮಹಾರಾಣಿಯು ಆ ಸಭೆಯಿಂದ ಹೊರಟು, ತನ್ನ ಅರಮನೆಯನ್ನು ಸೇರಿ, ರಾತ್ರಿಯೆಲ್ಲ ಪರಮೇಶ್ವರನ ಧ್ಯಾನದಲ್ಲಿ ನಿರತಳಾಗಿದ್ದಳು. ಮಿಕ್ಕಾದ ಸ್ತ್ರೀಯರೆಲ್ಲರೂ ರಾಣಿಯ ಆಜ್ಞೆಯನ್ನು ಪರಿಪಾಲಿಸಿ, ತಮ್ಮ ಮಾನರಕ್ಷಣೆ

ಮಾಡಿಕೊಳ್ಳುವ ಮಹತ್ಕಾರ್ಯವನ್ನು ಕುರಿತು ಯೋಚಿಸುತ್ತಾ, ಆವಶ್ಯಕವಾದ ಪ್ರಯತ್ನಗಳನ್ನು ಮಾಡಿಕೊಳ್ಳುತ್ತ ಆ ರಾತ್ರಿಯನ್ನು ಕಳೆದರು.

ಮಾರನೆಯ ಪ್ರಾತಃಕಾಲ ಪೂರ್ವದಿಕ್ಕಿನಲ್ಲಿ ಸೂರ್ಯೋದಯವಾಗುತ್ತಿರಲು, ಚಿತ್ತೂರಿನಲ್ಲಿ ಹತಶೇಷರಾಗಿ ಉಳಿದಿದ್ದ ರಾಜಪುತ್ರರೆಲ್ಲರೂ, ತಮ್ಮ ಭಾರ್ಯೆಯರಿಂದ ಮಾತೆಯರಿಂದ, ಸೋದರಿಯರಿಂದ ಅನುಜ್ಞೆಯನ್ನು ಪಡೆದುಕೊಂಡು, ಯುದ್ಧಸನ್ನದ್ಧರಾಗಿ ಹೊರಟು ಕೋಟೆಯ ದ್ವಾರಸಮೀಪದಲ್ಲಿ ಗುಂಪು ಸೇರಿದರು. ಆಗ ಅವರ ಮನೋವಿಕಾರಗಳೆಲ್ಲವೂ ಏಕತ್ರ ಕಲೆತು ಶತ್ರುಸಂಹಾರೇಚ್ಛೆಯಾಗಿ ಪರಿಣಮಿಸಿದುದರಿಂದ ಅವರಲ್ಲಿ ಒಬ್ಬೊಬ್ಬನೂ ಪ್ರತ್ಯಕ್ಷಕಲಾಂತಕನಂತೆ ಭಯಂಕರ ರೂಪದಿಂದ ಕಂಡುಬರುತ್ತಿದ್ದನು. ಅವರ ಹೆಂಡಿರೂ ಸೋದರಿಯರೂ ಮಾತೆಯರೂ, ತಮ್ಮ ಆಪ್ತಜನರ ವಿರಹವ್ಯಥೆಯನ್ನು ತಾಳಲಾರದೆ, ಮನೆಯಿಂದ ತಮ್ಮ ತಮ್ಮ ಶಿಶುಗಳನ್ನು ಎತ್ತಿಕೊಂಡು, ಆ ಕೋಟೆಯ ದ್ವಾರ ಸಮೀಪಕ್ಕೆ ಬಂದು, ಆಗ ತಪ್ಪಿದರೆ ಪುನಃ ಅವರ ಮುಖ ದರ್ಶನವಾಗುವುದೋ ಇಲ್ಲವೋ ಎಂಬ ಶಂಕೆಯಿಂದ, ತಮ್ಮ ಪತಿಗಳನ್ನೂ, ಅಣ್ಣಂದಿರನ್ನೂ, ತಮ್ಮಂದಿರನ್ನೂ, ಮಕ್ಕಳನ್ನೂ ಆಲಂಗಿಸುತ್ತಾ, ನಮಸ್ಕರಿಸುತ್ತಾ, ಆಶೀರ್ವದಿಸುತ್ತಾ, ಅಪ್ಪಿ ಮುದ್ದಾಡುತ್ತಾ, ಮನಸ್ಸಿನ ಆಸೆಯು ತೀರದೆ, ಕೊನೆಗಾಣದ ಮೋಹವಾರಿಧಿಯಲ್ಲಿ ಬಿದ್ದು ತೇಲಿ ಹೋಗುತ್ತಿದ್ದರು. ಅಂದಿನ ಆ ಪರಿತಾಪಕರ ದೃಶ್ಯವನ್ನು ನೋಡಲರಿದು! ಹಾಗೆ ವ್ಯಸನವಾರಿಧಿಯಲ್ಲಿ ಮುಳುಗಿ, ತಮ್ಮ ದುರ್ವಿಧಿಯನ್ನು ಹಾಡಿಹಾಡಿಕೊಂಡು ನಿಂದಿಸಿಕೊಳ್ಳುತ್ತಾ, ಅಳುತ್ತಾ, ಇದ್ದ ಅವರ ಅಂತ್ಯದರ್ಶನ ಸಮಾರಂಭವು ಕೊನೆಗಾಣುವ ಮಾರ್ಗವೇ ತೋರಲಿಲ್ಲ. ಸ್ವಲ್ಪಹೊತ್ತು ಈ ರೀತಿ ನಡೆವವೇಳೆಗೆ, ಈ ಪರಿಸ್ಥಿತಿಯು ಮಹಾರಾಣಿ ರಾಮಾಬಾಯಿಯ ಗಮನವನ್ನೆಳೆಯಿತು. ಆಗ ಆ ವೀರನಾರೀಮಣಿಯು, ಇನ್ನು ರಜಪೂತರು ಮೋಹಪರವಶರಾದರೆಂದರೆ ಕೆಲಸವೇ ಕೆಟ್ಟುಹೋಗುವುದೆಂಬುದನ್ನರಿತು, ತಾನು ಕುಳಿತಿದ್ದ ಸ್ಥಳದಿಂದ ಎದ್ದು ಹೊರಟಳು. ತನ್ನಂತೆಯೇ ತನ್ನ ಮಹಾರಾಣಿಯೂ ತನ್ನ ಇಬ್ಬರು ಮಕ್ಕಳೊಂದಿಗೆ ಪ್ರಾಣತ್ಯಾಗ ಮಾಡತಕ್ಕವಳೇ ಎಂದು ಎಲ್ಲರಿಗೂ ಮನವರಿಕೆಯಾಯಿತು. ತನ್ನ ದೀನದೆಸೆಯ ಪರಮಾರ್ಥ ದೃಶ್ಯವು ಎಲ್ಲರ

ಕಣ್ಣಿದುರಿಗೂ ಕಟ್ಟಿದಂತಾಗಲು, ಎಲ್ಲರೂ ಒಮ್ಮೆಗೇ 'ಗೋಳೋ' ಎಂದು ರೋದಿಸಿದರು. ಹೆಂಗರುಳಿನ ಮಹಾರಾಣಿಗೂ ಆಗಿನ ಸಂಕಟ ಪರಿಸ್ಥಿತಿಯಲ್ಲಿ ಕಣ್ಣೀರಿಟ್ಟು ಅಳದಿರಲು ಸಾಧ್ಯವಾಗಲಿಲ್ಲ. ಆದರೂ ಆ ಹೊತ್ತಿನಲ್ಲಿ ತಾನೂ ಎಲ್ಲರಂತೆಯೇ ಧೈರ್ಯಗೆಟ್ಟರೆ ಮಹಾಪ್ರಮಾದ ಸಂಭವಿಸದಿರದೆಂಬುದನ್ನು ಅರಿತ ಆ ಪ್ರಾಜ್ಞೆಯು, ತನ್ನ ವ್ಯಸನವನ್ನು ನುಂಗಿಕೊಂಡು ಅವರ ಮಧ್ಯಕ್ಕೆ ನಡೆದು, ಅಲ್ಲಿ ನೆರೆದಿದ್ದ ರಜಪೂತ ಯುದ್ಧಾಳುಗಳನ್ನೂ ಸರದಾರರನ್ನೂ ಉದ್ದೇಶಿಸಿ- 'ಓ ವೀರ ಕ್ಷತ್ರಿಯ ಸರದಾರರೇ, ರಜಪೂತ ಯೋಧರೇ, ಇದೇನು ನಿಮ್ಮ ಶರೀರಗಳೊಂದಿಗೆ ನಿಮ್ಮ ಸ್ತ್ರೀಯರ ಮಾನವನ್ನೂ ಮ್ಲೇಂಛರಿಗೆ ಒಪ್ಪಿಸಲು ಈ ದಿನ ನಿಶ್ಚಯಿಸಿರುವಿರಾ? ಅಕ್ಕಟಾ ಇದೇನು, ಕೊನೆಗಾಲದಲ್ಲಿ ಏಕಿಂತಹ ಮೋಹವು ನಿಮ್ಮ ಮನಸ್ಸನ್ನು ಆವರಿಸಿತು?' ಎಂದು ನುಡಿದಳು.

ಮಹಾ ಅಭಿಮಾನಶಾಲಿಗಳಾದ ರಜಪೂತರಿಗೆ ಆ ಮಾತುಗಳು ಶೂಲದ ಇರಿತಗಳಂತೆ ಕಿವಿಗೆ ಕೇಳಿಸಿದುವು. ಒಡನೆ 'ಅಲ್ಲ, ಅಲ್ಲ, ಹಾಗಲ್ಲ. ತಾಯೇ, ನಾವು ಮೋಹವಶರಾಗಲಿಲ್ಲ' ಎಂಬ ಶಬ್ದವು ಎಲ್ಲರ ಬಾಯಿಂದಲೂ ಹೊರಟಿತು. ಒಡನೆ ಮಹಾರಾಣಿಯು- 'ಹಾಗಾದರೆ ಇನ್ನು ಈ ರೋದನವನ್ನು ಸಾಕುಮಾಡಿ, ಪುರುಷರು ಯುದ್ಧಕ್ಕೂ, ಸ್ತ್ರೀಯರು ಅಗ್ನಿಪ್ರವೇಶಕ್ಕೂ ಹೊರಟು ನಡೆಯಬೇಕು. ಇನ್ನು ವಿಳಂಬಮಾಡಿದರೆ ಪ್ರಮಾದ ಸಂಭವಿಸಬಹುದು' ಎಂದು ದೃಢವಾಣಿಯಿಂದ ಆಜ್ಞಾಪಿಸಿದಳು. ತಮ್ಮ ಮಹಾರಾಣಿಯ ಆ ಆಜ್ಞಾವಾರ್ತೆಯು ಶ್ರುತವಾದೊಡನೆಯೇ ಸರ್ವರೂ ಚಾಟಿಯಿಂದ ಹೊಡೆಯಲ್ಪಟ್ಟವರಂತೆ ಜಾಗ್ರತರಾದರು. ಪುರುಷರು ತಮ್ಮ ಖಡ್ಗಕ್ಕೆ ಕೈಯಿಟ್ಟರು. ಸ್ತ್ರೀಯರು ತಮ್ಮತಮ್ಮ ಮಕ್ಕಳನ್ನೆತ್ತಿಕೊಂಡು, ಇನ್ನು ಈ ಜನ್ಮದಲ್ಲಿ ಒಬ್ಬರನ್ನೊಬ್ಬರು ನೋಡಲಾರೆವೆಂದು ತಮ್ಮ ಆಪ್ತೇಷ್ಟರ ಕೊನೆಯ ದರ್ಶನವನ್ನು ತೆಗೆದುಕೊಂಡು ಅಗ್ನಿಕುಂಡಾಭಿಮುಖರಾಗಿ ಪ್ರಯಾಣಮಾಡಿದರು.

ಆ ದಿನವೇ ಪ್ರಾತಃಕಾಲ, ಮೊಗಲರೆಲ್ಲರೂ, ಹೇಗಾದರೂ ಕೋಟೆಯ ಬಾಗಿಲನ್ನು ಮುರಿದು ಒಳಕ್ಕೆ ಪ್ರವೇಶಿಸಬೇಕೆಂದು ಸರ್ವಸನ್ನಾಹಗಳನ್ನೂ ಮಾಡುತ್ತಲಿದ್ದರು. ಅಷ್ಟರಲ್ಲಿ ಕೋಟೆಯ ಪೂರ್ವದ್ವಾರವು ವಿಶಾಲ

ವಾಗಿ ತೆರೆಯಲ್ಪಟ್ಟು ಸಹಸ್ರಾರುಮಂದಿ ರಜಪೂತರು, 'ಹರಹರ ಮಹಾದೇವ' ಎಂದು ಒಂದೇ ಧ್ವನಿಯಿಂದ ಗರ್ಜನೆಮಾಡಿ, ಹೊರಕ್ಕೆ ಹೊರಟರು. ತಡೆದಿಟ್ಟ ಪ್ರವಾಹವು ಒಮ್ಮೆಗೇ ನುಗ್ಗಿ ಬಂದಂತೆ, ಉಗ್ರಸ್ವರೂಪದಿಂದ ಹೊರಹೊರಟ ಆ ರಜಪೂತ ಸೇನಾಪ್ರವಾಹವನ್ನು ಕಂಡು, ಮೊಗಲ್ ಸೇನೆಯವರೂ ಪ್ರಾರಂಭದಲ್ಲಿ ಸ್ವಲ್ಪ ಹಿಂಜರಿದರು ಒಡನೆ ಒತ್ತಿಕೊಂಡು ಬಂದು ಹೋರಾಡತೊಡಗಲು, ಉಭಯ ಸೈನ್ಯಕ್ಕೂ ಕೈಗೆ ಕೈಹತ್ತಿ ತುಮುಲಯುದ್ಧವು ಪ್ರಾರಂಭವಾಯಿತು. ಒಂದುಕಡೆ, ಹತಾಶರಾಗಿ ಪ್ರಪಂಚದಲ್ಲಿ ಯಾವ ಆಸೆಯೂ ಇಲ್ಲದೆ, ತನಗೆ ಸಾಧ್ಯವಿದ್ದಷ್ಟುಮಂದಿ ಶತ್ರುಸೈನಿಕರನ್ನು ಕೊಂದು ಪ್ರಾಣಬಿಡಬೇಕೆಂದು ನಿಶ್ಚಯಮಾಡಿಕೊಂಡು ಯುದ್ಧಭೂಮಿಗೆ ಬಂದಿದ್ದ ರಜಪೂತ ಪರಿವಾರ ಮತ್ತೊಂದುಕಡೆ ಸ್ವಲ್ಪ ಜಯವಾದರೆ, ಎಂದೂ ಪರಸ್ವಾಧೀನವಾಗದಿದ್ದ ಚಿತ್ತೂರಕೋಟೆಯ ಸಾಮ್ರಾವನ್ನು ಪಡೆದು ಆಧಿಪತ್ಯ ಮಾಡಬಹುದಲ್ಲಾ ಎಂದು ಯೋಚಿಸಿದ್ದ ಮೊಗಲ್‌ಸೇನೆ. ಹೀಗೆ ರಣೋನ್ಮತ್ತರಾಗಿ ನೆರೆದಿದ್ದ ಅಂದಿನ ತುರುಷ್ಕ ರಜಪೂತ ಸೇನೆಗಳವರು ಭಯಂಕರ ಯುದ್ಧಕಾರ್ಯದಲ್ಲಿ ಮಗ್ನರಾಗಿ, ಮೈತಿಳಿಯದೆ ಹೋರಾಡುತ್ತಿದ್ದರು ಅಂದಿನ ಯುದ್ಧವು ಹದಿನೆಂಟನೆಯ ದಿನ ಪ್ರಾತಃಕಾಲದ ಭಾರತಮಹಾಯುದ್ಧದ ಭೀಕರ ಪರಿಸ್ಥಿತಿಯನ್ನು ಜ್ಞಾಪಕಕ್ಕೆ ತರುವಂತಿತ್ತು. ಒಂದುಪಕ್ಕ ಹಿಂದೂಗಳೂ ಮತ್ತೊಂದು ಪಕ್ಕ ಮಹಮ್ಮದೀಯರೂ ತಮ್ಮ ಶೌರ್ಯಾತಿಶಯವೆಲ್ಲವನ್ನೂ ತೋರಿಸಿ, ಕೊನೆಗಾಲದ ಯುದ್ಧದಲ್ಲಿ ನಿರತರಾಗಿದ್ದರು ಕಾತರರಾದ ಈ ರಾಜಪುತ್ರರನ್ನು ಹೇಗಾದರೂ ಗೆಲಿದು ಕೋಟೆಯೊಳಕ್ಕೆ ಪ್ರವೇಶಿಸಬೇಕೆಂದು ಘೋರವಾಗಿ ಕಾದುತ್ತಿದ್ದವರು ಮೊಗಲ ಸೈನಿಕರು. ಆರುವದೀಪದ ಕಾಂತಿಯು ಕ್ಷಣಕಾಲ ಹೆಚ್ಚುವಂತೆ, ಸಕಲವನ್ನೂ ತ್ಯಜಿಸಿ ಮರಣೋನ್ಮುಖರಾಗಿ, ತಾವು ಪ್ರಾಣಬಿಡುವುದಕ್ಕೆ ಮುಂಚೆ ಸಾಧ್ಯವಿರುವಷ್ಟುಮಂದಿ ಶತ್ರುಸೇನಾ ಜನಗಳನ್ನು ಕೊಂದುರುಳಿಸಿಬಿಡಬೇಕೆಂದು ಅಪೂರ್ವ ರಣೋತ್ಸಾಹದಿಂದ ಮೈಮರೆದು ಯುದ್ಧಮಾಡುತ್ತಿದ್ದವರು ರಾಜಪುತ್ರರು. ಈ ಕಾರಣದಿಂದ ವೀರಾವೇಶ ಹೆಚ್ಚಿ ಕಾದುತ್ತಿದ್ದ ರಜಪೂತರ ಹೊಡೆತವನ್ನು ತಡಹರಿಸಲಾರದೆ, ಶತ್ರುಸೇನೆಯು ಸ್ವಲ್ಪಹೊತ್ತು ಹಿಂಜರಿದಂತೆ ತೋರಿತು ಕೋಟೆಯಬಾಗಿಲ

ಬಳಿ ಹೆಣಗಳು ರಾಸಿರಾಸಿಯಾಗಿ ಬಿದ್ದುವು. ರಕ್ತವು ಹಳ್ಳವಾಗಿ ಹರಿಯಿತು. ವೀರರ ಸಿಂಹಗರ್ಜನೆಗಳೂ, ರೋಷಾಧಿಕ್ಯದಿಂದ ಹಲ್ಲು ಕಡಿಯುವ ಕಟಕಟ ಶಬ್ದಗಳೂ, ಆಯುಧಗಳು ಒಂದಕ್ಕೊಂದು ತಗಲಿ ಆಗುವ ಖಣಿಲು ಖಣಿಲೆಂಬ ಶಬ್ದಗಳೂ, ಕೈಕಾಲುಗಳು ಮುರಿದವರೂ, ಎದೆಯಲ್ಲಿ ಸರಳುಗಳು ನೆಟ್ಟವರೂ, ಕಣ್ಣುಗುಡ್ಡೆಗಳು ಕಿತ್ತುಬಂದವರೂ ಮೂಗುಕಿವಿಗಳು ಕತ್ತರಿಸಲ್ಪಟ್ಟವರೂ ಭಯಂಕರ ಮರಣಯಾತನೆಯನ್ನು ಅನುಭವಿಸುವಾಗ ಮಾಡುತ್ತಿರುವ ಆರ್ತನಾದವೂ ಹೃದಯಕಂಪನವನ್ನೆಬ್ಬಿಸುತ್ತಿದ್ದಿತು. ಆ ನೋಟವನ್ನು ನೋಡಲರಿದು. ಮೃತ್ಯುವೇ ಕುಪಿತವಾಗಿ ಕೊಲೆಗೆಲಸಕ್ಕೆ ನಿಂತಂತೆ ಕಂಡುಬರುತ್ತಿದ್ದ ಅಂದಿನ ಯುದ್ಧಪ್ರಸಂಗವು ಅಪೂರ್ವವೂ ಭೀಕರವೂ, ಅಸಹ್ಯವೂ ಆಗಿದ್ದಿತು.

ತನ್ನ ಸೇನೆಯು, ಶತ್ರುಸೇನೆಯ ಹೊಡೆತವನ್ನು ತಾಳಿಕೊಳ್ಳಲಾರದೆ ಕಂಗೆಟ್ಟು ಹಿಂಜರಿಯುತ್ತಿದ್ದ ಸ್ಥಿತಿಯನ್ನು ಕಂಡು, ಮೊಗಲಸೈನ್ಯಾಧಿಪತಿಯು ಒಡನೆ ಸುತ್ತಲಿನ ಸೈನ್ಯಗಳವರೂ ಅಲ್ಲಿಗೆ ಬಂದು ಸೇರಬೇಕೆಂದು ಆಜ್ಞಾಪಿಸಿದನು. ಕೋಟೆಯಸುತ್ತಲೂ ಮುತ್ತಿ ಚದರಿದ್ದ ಅಪಾರ ಮೊಗಲಸೈನ್ಯವು ಒಂದು ಗಳಿಗೆಯಕಾಲದೊಳಗಾಗಿ ಅಲ್ಲಿಗೆ ಬಂದು, ಅಲ್ಲಿ ಗುಂಪುಕೂಡಿದ್ದ ಆ ಸ್ವಲ್ಪಮಂದಿ ರಜಪೂತರ ದಂಡನ್ನು ಸಕಲ ಭಾಗಗಳಿಂದಲೂ ಸುತ್ತಿಕೊಂಡು ವಧಿಸತೊಡಗಿತು. ರಜಪೂತ ಸೈನಿಕರು ಹತ್ತುಹತ್ತು ನೂರುನೂರಾಗಿ ಸತ್ತುಬಿದ್ದರು. ಮುಂದೆ ಒಂದುಗಂಟೆಯ ಕಾಲ ಮೊಗಲದಂಡಿನವರಿಗೆ, ರಜಪೂತ ಸೈನಿಕರನ್ನು ವಧಿಸುವುದೇ ವೃತ್ತಿಯಾಯಿತು. ಹೀಗೆ, ತನ್ನ ಆಪ್ತರೂ ಸ್ನೇಹಿತರೂ ಬಂಧುಗಳೂ ಒಬ್ಬೊಬ್ಬರಾಗಿ ಸತ್ತುಬೀಳುತ್ತಿದ್ದರೂ, ರಜಪೂತರ ದಂಡಿನಲ್ಲಿ ಒಬ್ಬನಾದರೂ ಶತ್ರುವಿಗೆ ಬೆನ್ನುತೋರಿಸಿ, ಓಡುವ ಮನಸ್ಸುಮಾಡಲಿಲ್ಲ. ಶತ್ರುಹಸ್ತದಿಂದ ನಿರ್ಮುಕ್ತವಾಗಿ ಬರುವ ಬಾಣಕ್ಕೆ ಅಂಜಿ ಓಡಲಿಲ್ಲ, ಕತ್ತಿಗೆ ಎದೆಯೊಡ್ಡಲು ಅಂಕಲಿಲ್ಲ. ಬೆದರಲಿಲ್ಲ ಇನ್ನೇನು ಗತಿಯೆಂದು ಕಾತರಗೊಳ್ಳಲಿಲ್ಲ. ಇಷ್ಟರಲ್ಲಿ, ರಜಪೂತ ಸೈನ್ಯಕ್ಕೆ ಹಿರಿಯುವನಾಗಿ, ಬೆಂಬಲನಾಗಿ, ಮಾರ್ಗದರ್ಶಕನಾಗಿ ಹೋರಾಡುತ್ತಿದ್ದ ನೋಲಂಬಾರ್ ಎಂಬ ರಾಜಪುತ್ರ ಸರದಾರನು, ಎದೆಯಲ್ಲಿ ಬಾಣನೆಟ್ಟು ನೆಲಕ್ಕೆಬಿದ್ದು ಮೃತನಾದನು. ಅವನ

ಮೃತ್ಯುವನ್ನು ನೋಡಿ, ಮಿಕ್ಕ ಸರದಾರರೂ, ಸೈನಿಕರೂ ಸ್ವಲ್ಪ ಎದೆ ನಡುಗಿ- ಆ ಸ್ಥಿತಿಯಲ್ಲೂ ಮುಂದೇನು ಮಾಡೋಣವೆಂದು ಯೋಚಿಸತೊಡಗಿದರು. ಆದರೆ ಆ ಸಂದರ್ಭದಲ್ಲಿ ಒಂದು ವಿಚಿತ್ರ ಸಂಗತಿ ನಡೆಯಿತು. ಆದರಿಂದ, ಯುದ್ಧಪರಾಙ್ಮುಖರಾಗಿದ್ದ ಆ ರಜಪೂತರೆಲ್ಲರೂ ಪುನಃ ರಣರಂಗಾಭಿಮುಖರಾಗಿ, ಯುದ್ಧಕಾರ್ಯದಲ್ಲಿ ಪ್ರವೃತ್ತರಾಗುವಂತಾಯಿತು.

ಸ್ತ್ರೀಯರೆಲ್ಲರಿಗೂ ಅಗ್ನಿಪ್ರವೇಶ ಮಾಡಲು ಹೇಳಿ, ತಾವೂ ಮೃತರಾಗುವವರೆಗೆ ಯುದ್ಧಮಾಡುವೆವೆಂದು ತಮ್ಮ ಮಹಾರಾಣಿಗೆ ಆಯುಧವನ್ನು ಮುಟ್ಟಿ ಭಾಷೆಯಿತ್ತು ಯುದ್ಧರಂಗಕ್ಕೆ ಬಂದಿದ್ದ ರಜಪೂತ ವೀರರು, ಅಂತಹ ಯುದ್ಧಕಾರ್ಯವನ್ನು ಮಾನಸಿಕಮಾಡಿ ಹಿಂದಿರುಗುವಂತೆ ಕ್ಷಣಕಾಲ ಮನಶ್ಚಾಂಚಲ್ಯಹೊಂದುವಂತಾಗಬೇಕಾದರೆ, ಯುದ್ಧದಲ್ಲಿ ನಿಂತು ಹೋರಾಡುವುದು ಮೃತ್ಯುವನ್ನೆದುರಿಸುವ ಕಾರ್ಯಕ್ಕಿಂತಲೂ ಭೀಕರವಾಗಿದ್ದಿರಬಹುದು ಎಂದು ತೋರುವುದಲ್ಲವೆ? ಅಂತಹ ಪರಿಸ್ಥಿತಿಯಲ್ಲಿ ಅವರ ಮಾನಸಂರಕ್ಷಣೆ ಮಾಡಲೋಸುಗವೋ ಎಂಬಂತೆ ಪ್ರಾಪ್ತವಾದ ಆ ಸಂದರ್ಭವು ಅತಿ ವಿಚಿತ್ರವಾಗಿದೆ. ಈ ಭಯಂಕರ ಯುದ್ಧವು ಪ್ರಾರಂಭವಾಗುವುದಕ್ಕೆ ಕೆಲವು ದಿನಗಳ ಪೂರ್ವದಲ್ಲಿ, ಸುಮಾರು ಹದಿನೆಂಟು ವರ್ಷಗಳ ವಯಸ್ಸಿನ ಒಬ್ಬ ರಜಪೂತ ಯುವಕನಿಗೂ, ಹದಿನೈದು ವಯಸ್ಸಿನ ಒಬ್ಬ ಯುವತಿಗೂ ವಿವಾಹವಾಗಿದ್ದಿತು. ಯುದ್ಧಕ್ಕೆ ಪ್ರಾರಂಭವಾದ ದಿನ ಇತರ ಎಲ್ಲಾ ಯುವಕರಂತೆಯೇ, ಆ ಮದವಣಿಗನಾದ ಯುವಕನೂ ಖಡ್ಗಧಾರಣ ಮಾಡಿ, ರಣಾಭಿಮುಖನಾಗಿ ಹೊರಟನು ಒಡನೆ ಆತನ ಪತ್ನಿಯಾದ ಆ ನವೋಢೆ ಬಾಲಿಕೆಯೂ, ತನ್ನ ಭರ್ತನೊಂದಿಗೇ ಯುದ್ಧಕ್ಕೆ ಹೋಗುವೆನೆಂದು ತಾನೂ ಒಂದು ಖಡ್ಗವನ್ನು • ತೆಗೆದುಕೊಂಡು ಹೊರಟಳು. ಹೋಗಬೇಡವೆಂದು ಯಾರು ಎಷ್ಟು ತಡೆದರೂ, ಆಕೆಯು ನಿಲ್ಲಲೇ ಇಲ್ಲ. ತನ್ನ ಪತಿಯು ಯುದ್ಧರಂಗದಲ್ಲೆಲ್ಲಿ ದೇಹಬಿಡುವನೋ ಆ ಸ್ಥಳದಲ್ಲೇ ತಾನೂ ದೇಹತ್ಯಾಗ ಮಾಡುವುದಾಗಿ ದೃಢನಿಶ್ಚಯ ಮಾಡಿಬಿಟ್ಟಳು. ಅವಳ ಮನೋವೃತ್ತಿಯನ್ನು ತಿರುಗಿಸುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ತಮ್ಮ ಮಗನೂ ಸೊಸೆಯೂ ಮಾಡಿದ ಆ ಪ್ರತಿಜ್ಞೆಯನ್ನು ಕುರಿತು ಆತನ ತಾಯಿಯು ಸಂತೋಷಿಸಿ, ಅವರಿಗೆ ಉತ್ಸಾಹವುಂಟಾಗುವಂತೆ ಹಲವು ಮಾ

ತುಗಳನ್ನು ಪೇಳಿ, ಅವರ ಕೈಗಳಲ್ಲಿ ತಾನೇ ಖಡ್ಗಗಳನ್ನು ಕೊಟ್ಟು ಆಶೀರ್ವದಿಸಿ ಊರಿಗೆ ಕಳುಹಿಸುವವಳಂತೆ ಉಲ್ಲಾಸದಿಂದಲೇ ಅವರೊಂದಿಗೆ ಮಾತನಾಡಿಕೊಳ್ಳುತ್ತ ಸ್ವಲ್ಪ ದೂರ ಸಾಗಕಳುಹಿಸಲು ಬಂದು ತಿರುಗಿ ಪೋದಳು. ಹಿಂದೆ ಹೇಳಿದಂತೆ, ಯುದ್ಧರಂಗದ ದಾರುಣವೇದನೆಯನ್ನು ತಡೆಯಲಾರದೆ, ಹಿಂದಿರುಗಿ ಓಡಿಬರುತ್ತಿದ್ದ ಕೆಲವುಂದಿ ಜಳ್ಳೆದೆಯ ರಜಪೂತ ಸೈನಿಕರು, ಈ ನೂತನ ರಣೋತ್ಸಾಹೀ ಬಾಲ ದಂಪತಿಗಳು ರಣರಂಗಕ್ಕಾಗಿ ಬರುತ್ತಿದ್ದುದನ್ನು ಕಂಡು, ನಾಚಿಕೆಗೊಂಡು, ಪುನಃ ಯುದ್ಧರಂಗವನ್ನು ಪ್ರವೇಶಿಸಿದರು. ಆ ಯುವಕನೂ ಅವನ ಭಾರ್ಯೆಯೂ ಅನೇಕ ಸೈನಿಕರನ್ನು ಯಮಸದನಕ್ಕೆ ನೂಕಿ, ಕೊನೆಗೆ ತಾವೂ ಹತರಾಗಿ ತಮ್ಮ ಪ್ರತಿಜ್ಞೆಯಂತೆ ಒಂದೇ ಸ್ಥಳದಲ್ಲಿ ಬಿದ್ದು ವೀರಸ್ವರ್ಗವನ್ನು ಹೊಂದಿದರು. ಹೀಗೆ ಯುದ್ಧಕ್ಕೆಂದು ಕೋಟೆಯೊಳಗಿನಿಂದ ಹೊರಕ್ಕೆ ಬಂದಿದ್ದ ರಜಪೂತರಲ್ಲಿ ಮೂರೂ ಮುಕ್ಕಾಲುಪಾಲು ಮಂದಿ ಸೈನಿಕರೂ ಸರದಾರರೂ ಹತರಾದ ತರುವಾಯ ಮಿಕ್ಕ ಕೆಲವುಂದಿಯನ್ನು ತುರುಷ್ಕ ಸೈನಿಕರು ಹಿಡಿದು ಕತ್ತರಿಸಿಹಾಕಿದರು.

ಕೋಟೆಯೊಳಗಿನಿಂದ ಯುದ್ಧಕ್ಕೆಂದು ಹೊರಕ್ಕೆ ಬಂದ ರಜಪೂತ ಸೇನೆಯಲ್ಲಿ ಒಂದು ಪಿಳ್ಳೆಯೂ ಉಳಿಯದಂತೆ ನಿರ್ಮೂಲವಾದ ತರುವಾಯ ಮೊಗಲ ಸೈನಿಕರು ಕೋಟೆಯೊಳಗೆ ಪ್ರವೇಶಿಸಲನುವಾದರು. ಇತ್ತ ಹೊರಗೆ ನಡೆದ ಪ್ರಸಂಗವಿಂತಿರಲು, ಕೋಟೆಯ ಒಳಗಡೆ ನಡೆದ ವೃತ್ತಾಂತವಾದರೋ, ಇನ್ನೂ ಹೃದಯದ್ರಾವಕವಾದುದು. ಕೇವಲ ಕೆಲವು ದಿನಗಳಿಗೆ ಮುಂಚೆ ಸಕಲವಿಧ ಸೌಖ್ಯಗಳಿಗೂ ತೌರುಮನೆಯೆಂಬಂತಿದ್ದ ಜಗಮಲ್ ಮಹಾರಾಜನ ರಾಜಧಾನಿಯು ಇಂದು ದುಃಖ[illegible] ಬೀಡಾಗಿದೆ. ರಾಜಗೃಹದ ಬಳಿ ಅಗ್ನಿಕುಂಡಕ್ಕೆ ಬೇಕಾದ ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು, ರಾಣೀ ರಾಮಾಬಾಯಿಯು ತನ್ನ ಇಬ್ಬರು ಮಕ್ಕಳನ್ನು ಉಭಯ ಪಾರ್ಶ್ವಗಳಲ್ಲೂ ಕೂರಿಸಿಕೊಂಡು, ಇತರ ರಾಜಸ್ತ್ರೀಯರೊಂದಿಗೆ ವಿಚಾರಾಕ್ರಾಂತಳಾಗಿ ಕುಳಿತಿದ್ದಳು. ಅವರೆಲ್ಲರೂ, ರಜಪೂತ ಯೋಧರಿಗೆ ಜಯವನ್ನು ಕರುಣಿಸೆಂದು ಸ್ವಲ್ಪಕಾಲ ಸರ್ವೇಶ್ವರನನ್ನು ಪ್ರಾರ್ಥಿಸಿ, ತರುವಾಯ ಯುದ್ಧವಾರ್ತೆಯೇನಾದರೂ ತಿಳಿಯಲಿರುವುದೋ

ಎಂದು ತಲೆಯೆತ್ತಿ ನೋಡಿದರು. ಅಷ್ಟರಲ್ಲಿ ಶರೀರವಾದ್ಯಂತವೂ ರಕ್ತಜಲದಿಂದ ಅಭಿಷೇಕವಾಗಿರಲು, ಲೆಖ್ಖವಿಲ್ಲದಷ್ಟು ಗಾಯಗಳಿಂದ ಬಾಧೆಪಡುತ್ತಿದ್ದ ಪುರುಷನೊಬ್ಬನು, ಓಡುತ್ತೋಡುತ್ತ ಅಲ್ಲಿಗೆ ಬಂದನು. ಅವನನ್ನು ಗುರ್ತಿಸಿ, ರಾಣಿಯು - 'ಏನು ರಾಮಸಿಂಗ್, ಜಯ ಚಿನ್ಹೆಯುಂಟೋ?' ಎಂದು ಪ್ರಶ್ನಿಸಿದಳು. ಆತನು, ನಿಲ್ಲಲು ಸಾಧ್ಯವಿಲ್ಲದೆ ಭೂಮಿಯಮೇಲೆ ಬಿದ್ದು, ಹಾಗೆಯೇ ತಲೆಯೆತ್ತಿ, ಎರಡು ಕೈಗಳನ್ನೂ ಮುಗಿದು ವಂದಿಸುತ್ತಾ -' ಅಮ್ಮಾ, ಇನ್ನೆಲ್ಲಿಯ ಜಯವು! ನಮ್ಮ ಕೈಗಳಲ್ಲಿ ಆಯುಧಗಳನ್ನು ಹಿಡಿಯಲು ಶಕ್ತಿಯಿದ್ದವರೆಗೂ, ನಾವೂ ಹೋರಾಡಿ ವೈರಿಗಳ ಹೆಣಗಳ ರಾಶಿಯನ್ನೊಟ್ಟಿದೆವು. ಆದರೆ ನಿಮ್ಮ ದುರದೃಷ್ಟದಿಂದ ನಮ್ಮವರೆಲ್ಲರೂ ಹತರಾಗಿ ನೆಲಕ್ಕೆ ಬಿದ್ದರು. ಪೂರ್ವದ್ವಾರದ ಬಳಿ ಬಿದ್ದಿರುವ ಹೆಣಗಳ ರಾಶಿಯನ್ನು ತೆಗೆದು ದಾರಿ ಮಾಡಿಕೊಂಡು, ತುರುಕರು ಇನ್ನು ಸ್ವಲ್ಪ ಹೊತ್ತಿನೊಳಗಾಗಿಯೇ ಕೋಟೆಯೊಳಗೆ ಪ್ರವೇಶಿಸಲಿರುವರು' ಎಂದು ನುಡಿದು, ಮರಣಸಂಕಟದಿಂದ ಹೊಯ್ದಾಡಿಕೊಂಡು ಪ್ರಾಣತ್ಯಾಗ ಮಾಡಿದನು.

ತಮ್ಮವರೆಲ್ಲರೂ ಮೃತರಾದರು- ತುರುಕರು ಕೋಟೆಯೊಳಗೆ ಬಲಿರಿದ್ದಾರೆ ಎಂಬ ಮಾತುಗಳು ಕಿವಿಗೆ ಬಿದ್ದುದೇ ಸಾವಕಾಶ, ಒಡನೆ ರಾಮಾಬಾಯಿಯು, ರಾಜಸ್ತ್ರೀಯರನೆಲ್ಲ ಸಂಬೋಧಿಸಿ—'ಅಕ್ಕಗಳಿರಾ, ಇನ್ನು ಹೇಳತಕ್ಕುದೇನಿದೆ? ಪ್ರಾಣಸಮಾನರಾದ ನಿಮ್ಮ ಪತಿಗಳೂ, ಅಣ್ಣತಮ್ಮಂದಿರೂ, ಮಕ್ಕಳೂ, ಯುದ್ಧದಲ್ಲಿ ಸತ್ತು ಸ್ವರ್ಗಲೋಕವನ್ನು ಕುರಿತು ಪ್ರಯಾಣಮಾಡಿದ್ದಾರೆ. ಅವರ ಅಂಶವು ನಿಮ್ಮಲ್ಲೂ ಉಂಟಲ್ಲವೆ? ಈಗ ನೀವು ಪ್ರಾಣಲೋಭದಿಂದ ಆಲಸ್ಯಮಾಡಿದಿರೆಂದರೆ, ಇನ್ನು ಸ್ವಲ್ಪಹೊತ್ತಿನೊಳಗಾಗಿಯೇ ವೀರಪತ್ನಿಯರೂ ವೀರಮಾತೆಯರೂ ಆದ ನೀವು ದುರುಳರಾದ ಮ್ಲೇಚ್ಛರ ಕೈಗೆ ಬಿದ್ದು ದೂಷಿತರಾಗುವುದು ತಪ್ಪದು. ಯಾವಜ್ಜೀವವೂ ಅವರಿಗೆ ದಾಸಿಯರಾಗಿ ಬಾಳಬೇಕಾಗುವುದು. 'ದಾಸಿ' ಎಂಬೀ ಶಬ್ದೋಚ್ಚಾರಣೆಯೇ ನನಗೆ ಶ್ರವಣಕಠೋರವಾಗಿದೆ. ಇನ್ನು ಅದನ್ನು ಅನುಭವಿಸುವುದು ಹೇಗೆ? ಆದುದರಿಂದ ಆಲಸ್ಯಮಾಡದೆ ಅಗ್ನಿಕುಂಡವನ್ನು ಪ್ರತಿಷ್ಠಿಸಿ, ಅದರಲ್ಲಿ ಪ್ರವೇಶಿಸಿರಿ. ಹೀಗೆ ಮಾಡುವಿರಾದರೆ, ತಪ್ಪದೆ ಸ್ವರ್ಗಸೌಖ್ಯವನ್ನು ಪಡೆಯಬಲ್ಲಿರಿ!' ಎಂದು ನುಡಿದಳು. ಈ ಮಾತು

ಗಳು ಕಿವಿಗೆ ಬಿದ್ದೊಡನೆಯೇ, ಎಲ್ಲರೂ 'ನಾವು ಸಿದ್ಧರಾಗಿಯೇ ಇದ್ದೇವೆ' ಎಂದು ಅರಚಿ, ತಮ್ಮತಮ್ಮ ಮಕ್ಕಳನ್ನು ಎತ್ತಿಕೊಂಡು, ಅಗ್ನಿನಾರಾಯಣನಲ್ಲಿ ಪ್ರವೇಶಿಸಲು ಸಿದ್ಧರಾದರು. ಇಷ್ಟಾಗುವಷ್ಟರಲ್ಲಿ, ಕೋಟೆಯ ಪೂರ್ವದ್ವಾರವನ್ನು ಒಡೆದು ಒಳನುಗ್ಗಿದ ಮೊಗಲಸೈನಿಕರ 'ದೀನ್, ದೀನ್' ಎಂಬ ರಣಘೋಷವು, ಕಿವಿಗೆ ಬಿದ್ದಿತು. ಇನ್ನು ಸಾವಕಾಶಮಾಡಲಾಗದೆಂದು, ಸ್ತ್ರೀಯರೆಲ್ಲರೂ,— 'ಹರಹರ ಮಹಾದೇವ- ಜಯಭಗವತೀ' ಎಂದು ಕೂಗಿಕೊಂಡು ದಗದಗನೆಂದು ಉರಿಯುತ್ತಿದ್ದ ಅಗ್ನಿಕುಂಡದಲ್ಲಿ ಹಾರಿಬಿಟ್ಟರು ಕ್ಷಣಮಾತ್ರದಲ್ಲಿ ಕೋಟೆಯ ಮಂಗಳಕರ ಪ್ರದೇಶವೆಲ್ಲವೂ ಸ್ಮಶಾನವಾಯಿತು. ಅಗ್ನಿಮಯವಾಯಿತು. ನೂರುನೂರು ಸಂಖ್ಯೆಯಿಂದ ಬಿದ್ದ ರಾಜಪುತ್ರರಮಣಿಯರ ಮತ್ತು ಮಕ್ಕಳ- ಬಾಲಿಕೆಯರ ಸುಕುಮಾರ ದೇಹಗಳನ್ನು ನಿಷ್ಕರುಣಿಯಾದ ಅಗ್ನಿಯು ಕ್ಷಣಮಾತ್ರದಲ್ಲಿ ದಹಿಸಿಬಿಟ್ಟಿತು. ಅಗ್ನಿಪ್ರವೇಶ ಮಾಡಿದ ಅಷ್ಟು ಮಂದಿಯಲ್ಲಿ ಒಬ್ಬ ಸ್ತ್ರೀಯಾದರೂ ಒಬ್ಬ ಬಾಲಿಕೆಯಾದರೂ, ಆ ಬಾಧೆಯನ್ನು ತಾಳಲಾರದೆ ಹೊರಕ್ಕೆ ಬರಲು ಯತ್ನಿಸಲಿಲ್ಲ ಆ ವೇಳೆಗೆ ಸಮೀಪಕ್ಕೆ ಬಂದಿದ್ದ ತುರುಕರದಂಡು, ಕೋಟೆಯೊಳಗೆ ಎಲ್ಲಿನೋಡಿದರೂ, ಉರಿಯುತ್ತಿದ್ದ ಚಿತೆಗಳನ್ನೂ, ಬೆಂಕಿಯ ರಾಶಿಗಳನ್ನೂ ಕಂಡು, ಒಂದು ನರಪ್ರಾಣಿಯಾದರೂ ಕಣ್ಣಿಗೆ ಕಾಣಿಸದೆ, ಎಲ್ಲಾ ಮನೆಗಳೂ ತೆರೆದ ಬರಿದಾಗಿದ್ದುದನ್ನು ಅಕ್ಬರನಿಗೆ ತಿಳಿಸಿದರು. ಆತನೂ ಪರಮಾಶ್ಚರ್ಯಪಟ್ಟು, ನೋಡೋಣವೆಂದು ಕೋಟೆಯೊಳಕ್ಕೆ ಪ್ರವೇಶಮಾಡಿದನು. ಆದರೆ, ಆತನು ಎಲ್ಲೆಲ್ಲೂ ಕಂಡುದೇನು?—ಭಸ್ಮರಾಶಿ.

## ಉ ಪ ಸಂ ಹಾ ರ

ಜನಶೂನ್ಯವಾಗಿ ನಿಸ್ತಬ್ಧವಾಗಿ ಭಯಂಕರವಾಗಿದ್ದ ಆ ನಗರದ
[illegible] ರನ ಹೃದಯವನ್ನೂ ಚಲನಗೊಳಿಸಿತು —'ಅಕ್ಕಟಾ, ಎಷ್ಟು
[illegible] ಕ್ಕಳೂ, ನಾಶವಾದರಲ್ಲಾ- ರಾಜತ್ವವು ಮಹಾಸಿ
[illegible] ಎಂದುಕೊಂಡನು. ಪುರುಷರೆಲ್ಲರೂ ಮೃತ
[illegible]ವಾದ ತಾವು, ಶತ್ರುಗಳ ಕೈಗೆ ಬೀಳಬೇಕಾ
[illegible]ಮಾಡಿಕೊಂಡು, ಉರಿವ ಅಗ್ನಿಕುಂಡಕ್ಕೆ
[illegible] ಪಾತಿವ್ರತ್ಯ ದೀಕ್ಷೆಯನ್ನು ಕಂಡು
[illegible]ಪಾತಿವ್ರತ್ಯ ರಕ್ಷಣೆಯಲ್ಲಿ, ಆರ್ಯ

ಸ್ತ್ರೀಯರಿಗೆ ಸಮಾನರಾದ ಸ್ತ್ರೀಯರು ಮತ್ತೆಲ್ಲಿಯೂ ಇಲ್ಲ. ಇವರೇ ಉತ್ತಮೋತ್ತಮ ಪತಿವ್ರತೆಯರು' ಎಂದು ಬಾಯಿತುಂಬ ಹೊಗಳಿದನು.

ಇಂತು ಈ ಭಯಂಕರ ಚರಿತ್ರಕಥನವು ಕೊನೆಗಂಡಿತು. ಇದರಲ್ಲಿ, ಅನುಪಮ ಪತಿಭಕ್ತಿಯನ್ನೂ ಧೈರ್ಯಸಾಹಸಗಳನ್ನೂ ಪ್ರದರ್ಶಿಸಿದ ರಾಣೀ ರಾಮಾಬಾಯಿಯೂ, ಪಾತಿವ್ರತ್ಯ ಧರ್ಮರಕ್ಷಣೆಯಲ್ಲಿ ತಮ್ಮ ದೇಹಗಳನ್ನು ತೃಣಗಳೆಂದು ತಿಳಿದು ಅಗ್ನಿಕುಂಡಕ್ಕೆ ಸಮರ್ಪಿಸಿದ ರಜಪೂತಸ್ತ್ರೀಯರೂ, ದೇಶದ ಮರ್ಯಾದಾರಕ್ಷಣೆಗಾಗಿಯೂ, ಕ್ಷಾತ್ರಧರ್ಮ ರಕ್ಷಣೆಗಾಗಿಯೂ ತಮಗೆ ಜಯವಿಲ್ಲವೆಂದು ತಿಳಿದಿದ್ದರೂ ಪ್ರಾಣೋತ್ಕ್ರಮಣಪರ್ಯಂತವಾಗಿ ಹೋರಾಡಿ ವೀರಸ್ವರ್ಗವನ್ನು ಗಳಿಸಿಕೊಂಡ ರಜಪೂತಯೋಧರೂ, ತನ್ನ ಯುವಕ ಪತಿಯೊಡನೆ ಧೈರ್ಯದಿಂದ ಯುದ್ಧರಂಗಕ್ಕೆ ನಡೆದು, ಆತನ ಬಳಿಯಲ್ಲೇ ತನ್ನ ದೇಹವನ್ನೂ ಬಲಿಯಿತ್ತ ಆ ವೀರಬಾಲಿಕೆಯೂ, ಹೀಗೆ ಎಷ್ಟುಮಂದಿ ವೀರರತ್ನಗಳು ಪರಿಚಯವಾಗುವರು! ಇವರಲ್ಲಿ ಯಾರ ಬೆಲೆ ಹೆಚ್ಚು, ಯಾರ ಬೆಲೆ ಕಡಮೆಯೆಂಬುದನ್ನು ಹೇಗೆ ಕಂಡುಹಿಡಿಯಲಾಗುವುದು? ಮಾನವನ್ನು ಸೂರೆಗೊಟ್ಟು ಪರರಿಗೆ ದಾಸರೆನ್ನಿಸಿಕೊಂಡು ನೂರು ವರ್ಷ ಬಾಳ್ವೆಮಾಡುವುದಕ್ಕಿಂತಲೂ, ಮಾನವಂತರಾಗಿ, ಸ್ವಾತಂತ್ರ್ಯಾಕಾಂಕ್ಷಿಗಳಾಗಿ, ಧೀರರಾಗಿ, ಧರ್ಮಾಭಿಮಾನಿಗಳಾಗಿ ಬದುಕುವ ಒಂದು ದಿನದ ಬಾಳ್ವೆಯೇ ಬೆಲೆಯುಳ್ಳುದಲ್ಲವೆ?

ಪ್ರಾಣಾಂಪಾಪಿ ಪರಿತ್ಯಜ್ಯ ಮಾನಮೇವಾಭಿರಕ್ಷತು
ಅನಿತ್ಯೋಭವತಿ ಪ್ರಾಣೋಮಾನಾಚಂದ್ರತಾರಕಃ ||

'ಪ್ರಾಣವನ್ನು ತ್ಯಜಿಸಿಯಾದರೂ ಮಾನವನ್ನು ರಕ್ಷಿಸಬೇಕು. ಪ್ರಾಣವು ಅನಿತ್ಯವಾದುದು ಆದರೆ ಮಾನವಾದರೋ ಚಂದ್ರತಾರಕೆಗಳಿ[illegible]ವರೆಗ[illegible]
ಇರುವುದು.' ಎಂಬೀ ತತ್ವವು, ಭಾರತೀಯರ ಮ[illegible]
ಆವರು, ಮಾನವನ್ನು ಕೊಳ್ಳೆಗೊಟ್ಟು, ಜೀವ[illegible]
ಜೀವಿತವನ್ನು ಮೆಚ್ಚದೆ, ತಮ್ಮ ದೇಶಾಭಿ[illegible]
ಮಾನಗಳ ರಕ್ಷಣೆಗಾಗಿ ಪ್ರಾಣಗಳನ[illegible]
ಅರ್ಪಿಸುವಂತಹ ಧೈರ್ಯೋದಾರ್ಯ[illegible]
ಮನೋದಾರ್ಢ್ಯವನ್ನು ಅವರಿಗೆ[illegible]